# ಸಾಹಿತ್ಯ ಸಂಪುಟ

## ಹತ್ತನೆಯ ತರಗತಿ



ಮೈಸೂರು ಸರಕಾರದ ಪಠ್ಯಪುಸ್ತಕಗಳ ಇಲಾಖೆ

ಮೈಸೂರು ಸರ್ಕಾರ: ಪಠ್ಯ ಪುಸ್ತಕಗಳ ಇಲಾಖೆ

# ಸಾಹಿತ್ಯ ಸಂಪುಟ

ಹತ್ತನೆಯ ತರಗತಿ

# ಪರಿವಿಡಿ

## ಗದ್ಯಭಾಗ

## ಪದ್ಯಭಾಗ



* * *

## ಪರಿವಿಡಿ

### ಗದ್ಯಭಾಗ

## ಪದ್ಯಭಾಗ



* * *

# ಸಂಕೇತಗಳ ಪಟ್ಟಿ

| | | |
|---|---|---|
| ಅ. | ... | ಅವ್ಯಯ. |
| ಅ.ನಾ.ಸಂ. | ... | ಅನುನಾಸಿಕಸಂಧಿ. |
| ಅಂ.ಸ. | ... | ಅಂಶಿಸಮಾಸ. |
| ಆ. | ... | ಆಜ್ಞಾರ್ಥ. |
| ಆ.ಸಂ. | ... | ಆದೇಶಸಂಧಿ. |
| ಕ.ಸ. } ಕ.ಧಾ.ಸ. | ... | ಕರ್ಮಧಾರಯ ಸಮಾಸ. |
| ಕ್ರಿ.ಸ. | ... | ಕ್ರಿಯಾಸಮಾಸ. |
| ಗ.ಸ. | ... | ಗಮಕಸಮಾಸ. |
| ಗು.ಸಂ. | ... | ಗುಣಸಂಧಿ. |
| ತ.ಸ. | ... | ತತ್ಪುರುಷಸಮಾಸ. |
| ತ.ಭಾ.ನಾ. | ... | ತದ್ಧಿತಾಂತಭಾವನಾಮ. |
| ತೃ.ತ.ಸ. | ... | ತೃತೀಯಾತತ್ಪುರುಷಸಮಾಸ. |
| ತ್ಸ. | ... | ತತ್ಸಮ. |
| ದ್ಭ. | ... | ತದ್ಭವ. |
| ದ್ವಂ.ಸ. | ... | ದ್ವಂದ್ವಸಮಾಸ. |
| ದ್ವಿ.ಸ. | ... | ದ್ವಿಗುಸಮಾಸ. |
| ಧಾ. | ... | ಧಾತು. |
| ನಾ. | ... | ನಾಮಪದ. |
| ನಿ. | ... | ನಿಷೇಧಾರ್ಥ. |
| ಬ.ವ್ರೀ.ಸ. | ... | ಬಹುವ್ರೀಹಿಸಮಾಸ. |
| ಭಾ.ನಾ. | ... | ಭಾವನಾಮ. |
| ಯ.ಸಂ. | ... | ಯಣ್ಸಂಧಿ. |
| ಯ.ಆ ಸಂ. | ... | ಯಕಾರಾಗಮಸಂಧಿ. |
| ವ.ಆ.ಸಂ. | ... | ವಕಾರಾಗಮಸಂಧಿ. |
| ವಿ.ಪೂ.ಕ.ಸ. | ... | ವಿಶೇಷಣಪೂರ್ವಪದಕರ್ಮಧಾರಯಸಮಾಸ. |
| ವೃ.ಸಂ | ... | ವೃದ್ಧಿಸಂಧಿ. |
| ಷ.ತ.ಸ. | ... | ಷಷ್ಠೀತತ್ಪುರುಷಸಮಾಸ. |
| ಸ.ತ ಸ. | ... | ಸಪ್ತಮೀತತ್ಪುರುಷ ಸಮಾಸ. |
| ಸ.ದೀ ಸಂ. | ... | ಸವರ್ಣದೀರ್ಘಸಂಧಿ. |
| ಸಂ.ಪೂ.ಕ ಸ. | ... | ಸಂಭಾವನಾಪೂರ್ವಪದಕರ್ಮಧಾರಯಸಮಾಸ. |
| ಸಂ. | ... | ಸಂಭಾವನಾರ್ಥ. |
| ಸ್ವ.ಲೋ.ಸಂ. | ... | ಸ್ವರಲೋಪಸಂಧಿ. |

# ನಿಜಗಲ್ಲಿನ ರಾಣಿ

—ಶ್ರೀನಿವಾಸ

ಇನ್ನೂರು ವರುಷಗಳ ಹಿಂದೆ ನಮ್ಮ ಸೀಮೆಯಲ್ಲಿ ಅಲ್ಲಲ್ಲಿ ಏರ್ಪಟ್ಟಿದ್ದ ಅನೇಕ ಪಾಳೆಯಪಟ್ಟುಗಳಲ್ಲಿ ನಿಜಗಲ್ಲಿನಲ್ಲಿ ಒಂದು ಪಾಳೆಯಪಟ್ಟು ಇತ್ತು. ಆ ಕಾಲದಲ್ಲಿ ಮರಾಟೆಯವರು ಆಗಾಗ ಮೈಸೂರಿನ ಮೇಲೆ ದಂಡೆತ್ತಿ ಬರುತ್ತಿದ್ದರು. ಮಹಾರಾಷ್ಟ್ರ ದೇಶದಿಂದ ಬೆಂಗಳೂರ ಕಡೆಗೆ ಬರಬೇಕಾದರೆ ನಿಜಗಲ್ಲು ದಾರಿಯಲ್ಲಿ ಸಿಕ್ಕುವುದು. ಮರಾಟೆಯವರು ದಂಡೆತ್ತಿ ಬಂದಾಗ ನಿಜಗಲ್ಲಿನ ಪಾಳೆಯಗಾರರು ಇಲ್ಲವೆ ಅವರಿಗೆ ಕಪ್ಪವನ್ನು ಕೊಟ್ಟು ಅವರ ಜೊತೆಗೆ ತಮ್ಮ ದಂಡು ಸ್ವಲ್ಪವನ್ನು ಸಹಾಯಕ್ಕೆ ಕಳುಹಿಸಬೇಕು, ಇಲ್ಲವೇ ತಾವು ಮೈಸೂರ ಅರಸರ ಸಾಮಂತರು ಎಂದು ಮರಾಟೆಯವರೊಂದಿಗೆ ಹೋರಾಡಬೇಕು. ದೇಶ ಆಗ ಇದ್ದ ಸ್ಥಿತಿಯಲ್ಲಿ ಪಾಳೆಯಗಾರನು ತನ್ನ ಇಷ್ಟದಂತೆ ಈ ಎರಡರಲ್ಲಿ ಯಾವುದನ್ನಾದರೂ ಮಾಡಬಹುದಾಗಿತ್ತು.

ನಿಜಗಲ್ಲಿನ ಆಗಣ ಪಾಳೆಯಗಾರರಲ್ಲಿ ರಾಮರಸನಾಯಕನು ಪ್ರಸಿದ್ಧನು. ಆತನ ತಂದೆ ತಿಮ್ಮರಸನಾಯಕನ ನಂತರ ಅವನು ಗದ್ದಿಗೆಯನ್ನೇರಿದನು. ಗದ್ದಿಗೆಯನ್ನೇರುವಾಗ್ಗೆ ಅವನಿಗೆ ಸುಮಾರು ಇಪ್ಪತ್ತೈದು ವರ್ಷ. ಅವನು ಶೀಘ್ರದಲ್ಲೇ ಪಾಳೆಯಗಾರರಲ್ಲಿ ಒಳ್ಳೆಯವನೆಂದು ಹೆಸರು ಪಡೆದನು. ಪಾಳೆಯಕ್ಕೆ ಸೇರಿದ ಸುಮಾರು ಐವತ್ತು ಗ್ರಾಮಗಳನ್ನು ಬಿಟ್ಟು ಆಚೆಗೆ ಹೋಗಿ ಹಣ ವಸೂಲು ಮಾಡುತ್ತಿರಲಿಲ್ಲ : ತನ್ನ ಗ್ರಾಮಗಳಲ್ಲಿಯೂ ವಾಡಿಕೆಯಾಗಿ ಎಷ್ಟೋ ಅಷ್ಟನ್ನು ಮಾತ್ರ ವಸೂಲು ಮಾಡುತ್ತಿದ್ದನು. ಇದಕ್ಕೆ ಪ್ರತಿಯಾಗಿ ಆ ಗ್ರಾಮಗಳಿಗೆ ಸಾಮಾನ್ಯವಾದ ದೊಂಬಿ ದಾಳಿಗಳಿಂದ ರಕ್ಷಣೆಯನ್ನು ಕೊಟ್ಟಿದ್ದನು. ದೊಡ್ಡ ಸೈನ್ಯ ಬಂದಾಗ ಮಾತ್ರ ಅವನು ಊರುಗಳ ರಕ್ಷಣೆಗೆ ಹೋಗುತ್ತಿರಲಿಲ್ಲ. ಆ ಗ್ರಾಮಗಳೂ ಕೂಡ ಇವನಿಂದ ಅಂಥ ಸಮಯಗಳಲ್ಲಿ ಸಹಾಯವನ್ನು ನಿರೀಕ್ಷಿಸುತ್ತಿರಲಿಲ್ಲ. ನಾಯಕನು ನ್ಯಾಯದಂತೆ ವಸೂಲಾದ ಕಂದಾಯದಿಂದ ಮೈಸೂರಿನ ಅರಸರ ನಿರೂಪ ಬಂದಾಗ ವಾಡಿಕೆಯಂತೆ ಕಪ್ಪವನ್ನು ಕಳುಹಿಸುತ್ತ ಮೈಸೂರ ಅರಸರ ಸಾಮಂತನಾಗಿ ನಡೆದುಕೊಳ್ಳುತ್ತಿದ್ದನು.

ರಾಮರಸನಾಯಕನಿಗೆ ಇಬ್ಬರು ಹೆಂಡಿರು. ಮೊದಲನೆಯವಳು ಲಕುಮವ್ವೆ, ಎರಡನೆಯವಳು ಗಿರಿಜವ್ವೆ. ರಾಮರಸನು ಗದ್ದಿಗೆಯನ್ನು ಏರುವುದಕ್ಕೆ ಕೊಂಚ ಮೊದಲು ಲಕುಮವ್ವೆಯನ್ನು ಮದುವೆಯಾಗಿದ್ದನು. ಹತ್ತು ವರ್ಷ ಕಳೆದರೂ ಇವರಿಗೆ ಮಕ್ಕಳಾಗಲಿಲ್ಲ. ಆಗಿನ ದಿನದಲ್ಲಿ ಅದರಲ್ಲೂ ಪಾಳೆಯಗಾರರ ವಂಶಗಳಲ್ಲಿ ತಂದೆಯ ಜೊತೆಗೆ ಎದವಿದ ಮಗನಿಲ್ಲ ದಿದ್ದರೆ ಮುಂದಕ್ಕೆ ವಂಶ ನಡೆಯುವುದೆಂಬ ಆಸೆ ಕಡಿಮೆ. ರಾಮರಸನಿಗೆ ಒಡಹುಟ್ಟಿದವರೂ ಇಲ್ಲ. ಮಕ್ಕಳಾಗದುದರಿಂದ ನಾಯಕನು ಈ ಪಾಳೆಯಪಟ್ಟು ತನ್ನೊಂದಿಗೇ ಮುಗಿಯುವು ದೇನೋ ಎಂದು ಒಂದೊಂದು ವೇಳೆ ಚಿಂತಿಸುವನು. ಮಕ್ಕಳಾಗಲೆಂದು ಹಾರೈಸಿ ಸಾಮಾನ್ಯ ವಾಗಿ ಮಾಡಬಹುದಾಗಿದ್ದದ್ದಕ್ಕಿಂತ ಸ್ವಲ್ಪ ಹೆಚ್ಚಾಗಿ ಬಾವಿಗಳನ್ನು ತೋಡಿಸಿ, ತೋಪುಗಳನ್ನು ಹಾಕಿಸಿ, ಮಂಟಪಗಳನ್ನು ಕಟ್ಟಿಸಿ ದೇವರ ಸೇವೆಯನ್ನು ನಡೆಯಿಸಿದನು. ಊರಿನಲ್ಲಿ ಪೂರ್ವದಿಂದ ಇದ್ದ ಶ್ರೀರಾಮದೇವರ ದೇವಾಲಯವನ್ನು ಭದ್ರಪಡಿಸಿ ಅಲ್ಲಿ ಚೆನ್ನಾಗಿ ಪೂಜೆ ನಡೆಯುವುದಕ್ಕೆ ಏರ್ಪಾಟು ಮಾಡಿದನು. ಆದರೆ ಭಗವಂತನು ಮಕ್ಕಳನ್ನು ಅನುಗ್ರಹಿಸಲಿಲ್ಲ. ಹೀಗಿರುತ್ತಿರುವಲ್ಲಿ ಊರಿನ ಮುಖಂಡರು ಒಂದು ಸಲ ನಾಯಕನಿಗೆ ನೆಂಟರಲ್ಲಿ ಯಾರನ್ನಾ ದರೂ ದತ್ತು ತೆಗೆದುಕೊಳ್ಳಬೇಕೆಂದು ಜನರ ಪರವಾಗಿ ಬಂದು ಬಿನ್ನಹ ಮಾಡಿದರು. ರಾಮರಸನು ಇದಕ್ಕೆ ಒಪ್ಪಲಿಲ್ಲ. ಇದು ತಿಳಿದು ಲಕುಮವ್ವೆ ತನ್ನ ನೆಂಟರಲ್ಲಿ ಸೇರಿದ ಗಿರಿಜವ್ವೆ ಯನ್ನು ಅರಮನೆಗೆ ಕರೆತಂದು ಎರಡು ಮೂರು ವರುಷ ಇರಿಸಿಕೊಂಡಿದ್ದು, ನಾಯಕನ ಕಣ್ಣಿಗೆ ಬೀಳುವಂತೆ ಮಾಡಿ ಅವಳನ್ನು ಮದುವೆಯಾಗಬೇಕೆಂದು ಅವನನ್ನು ಬೇಡಿದಳು. ರಾಮರಸನು ಮೊದಲು ಮರ್ಯಾದೆಗಾಗಿಯೋ, ನಿಜವಾಗಿಯೋ ಬೇಡವೆಂದು ಹೇಳಿದನು. ಲಕುಮವ್ವೆ 'ನಾನು ಹತ್ತು ವರ್ಷ ನಿಮ್ಮ ಸೇವೆಯನ್ನು ಮಾಡಿದ್ದೇನೆ, ನೀವು ನನ್ನನ್ನು ಗಿಳಿಯಂತೆ ಪೋಷಿಸಿದಿರಿ. ಆದರೆ ನನ್ನಿಂದ ನಿಮ್ಮ ವಂಶ ಬೆಳೆಯಲಿಲ್ಲ. ನನಗೆ ಪ್ರಾಪ್ತಿಯಿಲ್ಲ. ನನಗೆ ಫಲ ಇಲ್ಲದಿದ್ದರೆ ಕುಲ ಏತಕ್ಕೆ ಅಳಿಯಬೇಕು? ಇವಳನ್ನು ಮದುವೆಯಾಗಿ, ಅವಳಿಗೊಂದು ಮಗುವಾದರೆ ಮನೆ ಉಳಿಯುತ್ತದೆ.' ಎಂದಳು. "ಅವಳು ನಿನ್ನನ್ನು ಅಸಡ್ಡೆ ಮಾಡಿದರೆ ಏನು ಮಾಡುವೆ?" ಎಂದು ನಾಯಕನು ಕೇಳಿದನು. ಲಕುಮವ್ವೆ "ನಾನು ಸಾಕಿದ ಹುಡುಗಿ. ನನಗೆ ಅಸಡ್ಡೆ ಏನು ಮಾಡುತ್ತಾಳೆ? ನಾನು ಹಾಕಿದ್ದನ್ನು ಊಟ ಮಾಡುತ್ತಾಳೆ. ನಾನು ಹೇಳಿದಂತೆ ನಡೆದುಕೊಳ್ಳುತ್ತಾಳೆ. ಇದಕ್ಕೆ ನೀವು ಯೋಚನೆ ಮಾಡಬೇಡಿ" ಎಂದಳು. ರಾಮರಸನು ಒಪ್ಪಿ ಗಿರಿಜವ್ವೆಯನ್ನು ಮದುವೆಯಾದನು.

ಗಿರಿಜವ್ವೆ ಬಹು ಚೆಲುವೆ. ಮದುವೆಯಾದಂದಿನಿಂದ ಅವಳು ನಾಯಕನ ಮತ್ತು ಲಕುಮವ್ವೆಯ ಶುಶ್ರೂಷೆಯನ್ನು ತನ್ನ ಮುಖ್ಯ ಕೆಲಸವೆಂದು ವಹಿಸಿದಳು. ನಾಯಕನು ಶಂಕೆ ಪಟ್ಟಂತೆ ಅವಳು ಲಕುಮವ್ವೆಯನ್ನು ಅಶ್ರದ್ಧೆಯಿಂದ ಕಾಣಲಿಲ್ಲ. ಸಂಬಂಧದವರೇನೋ ಹಿರಿಯರಸಿಯನ್ನು ಒತ್ತಟ್ಟಿಗಿಡುವುದಕ್ಕೆ ಯತ್ನ ಮಾಡಿದರು; ಗಿರಿಜವ್ವೆಗೂ ಬೋಧಿಸಿದರು. ಗಿರಿಜವ್ವೆಯಾದರೆ "ಮನೆ ಅವಳದು. ತಾನಿದ್ದುಕೊಂಡೇ ನನ್ನನ್ನು ಕರೆತಂದಳು, ಅವಳು ಕೊಟ್ಟ

ಅರ್ಧ ನನ್ನದು, ನಾನು ಆ ಸಾಲವನ್ನೇ ಹರಿಸಬೇಕಾಗಿದೆ. ಅವಳ ಅರ್ಧವನ್ನು ಕಿತ್ತುಕೊಂಡು ಪಾಪ ಕಟ್ಟಿಕೊಳ್ಳಲೇ ? ದೇವರ ಕೃಪೆಯಿಂದ ಈಗ ರಾಣಿಯಾದೆ. ಅನ್ಯಾಯ ಮಾಡಿದರೆ ಮುಂದಿನ ಜನ್ಮಕ್ಕೆ ತೊತ್ತಾದೇನು " ಎಂದಳು. ಗಿರಿಜವ್ವೆ ಹೀಗೆ ನಡೆದುಕೊಳ್ಳುತ್ತಿದ್ದುದರಿಂದ ಸಂಸಾರದಲ್ಲಿ ಸುಖ ದಿನೇ ದಿನೇ ವೃದ್ಧಿಯಾಯಿತು. ಲಕುಮವ್ವೆ ಹೊರಗೆ ಧೈರ್ಯದಿಂದ ಮಾತನಾಡಿದರೂ ಮನಸ್ಸಿನಲ್ಲಿ ಇವಳೇನು ಮಾಡುವಳೋ ಎಂದು ಮೊದಲಲ್ಲಿ ಶಂಕೆಪಡು ತ್ತಿದ್ದಳು. ಒಂದು ವರ್ಷದ ದಿನ ಗಿರಿಜವ್ವೆಯ ನಡತೆಯನ್ನು ನೋಡಿ, ತಾನು ಮಾಡಿದ ಕೆಲಸ ಇಷ್ಟು ಒಳ್ಳೆಯದಾಯಿತೆ ಎಂದು ಬಹಳ ಸಂತೋಷಪಟ್ಟಳು. ಗಿರಿಜವ್ವೆಯನ್ನು ತನ್ನ ಮಗಳಂತೆ ಕಾಣುತ್ತ ಅವಳಿಗೆ ಒಡವೆ ವಸ್ತುಗಳನ್ನೆಲ್ಲ ತಾನೇ ನೋಡಿ ಮಾಡಿಸಿ ರಾಮರಸನಿಗೆ ಸಂಸಾರಸುಖದಲ್ಲಿ ಏನೂ ಕಡಿಮೆ ಇಲ್ಲದಂತೆ ನೋಡಿಕೊಂಡಳು. ತಾನು ವ್ರತ, ಸೇವೆ, ಪೂಜೆ ಇವುಗಳಲ್ಲಿ ಮನಸ್ಸನ್ನಿಟ್ಟಳು.

ನಾಯಕನಿಗೂ, ಅವನ ರಾಣಿಯರಿಗೂ ಪರಸ್ಪರ ಅಂತಸ್ತಾಪಗಳು ಇಲ್ಲದೆ ಇದ್ದರೂ, ಅರಮನೆಯಲ್ಲಿ ಎಲ್ಲವೂ ಮೊದಲಿನಂತೆ ಇತ್ತೆಂದು ಹೇಳುವಂತಿರಲಿಲ್ಲ. ಮದುವೆಯಾಗುವವರೆಗೆ ಗಿರಿಜವ್ವೆ ಒಬ್ಬಳೇ ಇದ್ದರೂ ಆದಾದ ಮೇಲೆ ಅವಳ ತಮ್ಮನೊಬ್ಬನೂ, ತಾಯಿ ಒಬ್ಬಳೂ ಬಂದು ಅರಮನೆಯಲ್ಲೇ ನಿಂತರು. ಈ ತಾಯೇ ಗಿರಿಜವ್ವೆಗೆ ಲಕುಮವ್ವೆಯನ್ನು ಅಶ್ರದ್ಧೆಯಿಂದ ಕಾಣೆಂದು ಬೋಧಿಸಿದ್ದು. ಗಿರಿಜವ್ವೆ ತನ್ನ ಮಾತನ್ನು ಕೇಳದಿರಲು ಇವಳು ಅರಮನೆಯಲ್ಲಿ ಇತರರೊಂದಿಗೆ ಲಕುಮವ್ವೆಯ ವಿಚಾರವಾಗಿ ಸಣ್ಣ ಮಾತುಗಳನ್ನು ಆಡುವುದಕ್ಕೆ ಮೊದಲು ಮಾಡಿದಳು. ಲಕುಮವ್ವೆ ತನ್ನ ಗುಣದಿಂದ ಎಲ್ಲರಿಗೂ ಬೇಕಾದವಳಾಗಿ ತಾಯಂತೆ ಇದ್ದವಳು, ಇದೊಂದನ್ನೂ ಕಿವಿಗೆ ಹಾಕಿಕೊಳ್ಳದೆ ಅವರೇ ಸರಿಹೋಗುತ್ತಾರೆ ಎಂದು ಸುಮ್ಮನಿದ್ದಳು. ಗಿರಿಜವ್ವೆಯ ತಮ್ಮ ಹಳ್ಳಿಯಲ್ಲಿ ಪೋಲಿಯಾಗಿದ್ದವನು ಅರಮನೆಗೆ ಬಂದು ಅಲ್ಲಿಯ ಊಟ ಉಪಚಾರಗಳಿಂದ ಪುಂಡನಾಗಿ ಬೆಳೆದನು. ದೊರೆಯ ಮೈದುನನಾದುದರಿಂದ ಇವನಿಗೆ ಪುಂಡುತನಕ್ಕೆ ಸೌಕರ್ಯ ಹೆಚ್ಚು. ಊರಿನ ತುಂಟರೊಂದಿಗೆ ಸೇರಿ ಓಡಿಯಾಡುವನೆಂದೂ, ಸಂಸಾರಿ ಹೆಣ್ಣುಮಕ್ಕಳ ವಿಷಯದಲ್ಲಿ ಒಂದೆರಡು ಸಲ ಧೂರ್ತತೆಯಿಂದ ನಡೆದುಕೊಂಡನೆಂದೂ ಅರಮನೆಯಲ್ಲಿ ತಿಳಿದು ಒಂದೆರಡು ಸಲ ಸ್ವಲ್ಪ ಮಾತುಗಳಾದವು. ನಾಯಕನಾಗಲಿ, ಲಕುಮವ್ವೆಯಾಗಲಿ ಇಂಥ ಪುಂಡಾಟಗಳಿಗೆ ಅವಕಾಶ ಕೊಡುವವರಲ್ಲ. ಕಸ್ತೂರಿನಾಯಕನಿಗೆ ಆ ಎರಡು ಸಲವೂ ಬೈಗಳಾದುವು. ತಾಯಿ, ತಮ್ಮನ, ನಡತೆ ಸರಿಯಾಗಿರದಿದ್ದರೂ ಗಿರಿಜವ್ವೆ ತಾನು ಅರಮನೆಯ ಊಟ ಮಾಡುತ್ತಾ, ಅವರನ್ನು ಹಳ್ಳಿಯ ಕೂಳಿಗೆ ಏಕೆ ಕಳುಹಿಸ ಬೇಕೆಂದು ಎಲ್ಲವನ್ನೂ ಸಹಿಸಿಕೊಂಡು ಸುಮ್ಮನಿರುತ್ತಿದ್ದಳು.

ಮದುವೆಯಾದ ಎರಡನೆಯ ವರ್ಷ ಗಿರಿಜವ್ವೆ ಒಬ್ಬ ಮಗನನ್ನು ಹೆತ್ತಳು. ನಾಯಕ ನಿಗೂ, ಲಕುಮವ್ವೆಗೂ ಬಹಳ ಆನಂದವಾಯಿತು. ಊರಿನ ಜನವೆಲ್ಲ ಬಹಳ ಸಂತೋಷಪಟ್ಟರು. ಪಾಳೆಯದ ದೇವಸ್ಥಾನಗಳಲ್ಲೆಲ್ಲ ವಿಶೇಷ ಪೂಜೆಗಳು ನಡೆದುವು. ನಾಯಕನ ವಂಶ ಉಳಿಯುವಂತೆ ಆಯಿತೆಂದು ಎಲ್ಲರೂ ಸ್ವಸ್ಥಚಿತ್ತರಾದರು.

ಹೀಗಿರುವಲ್ಲಿ ಮರಾಟೆಯವರು ಸದಾಶಿವರಾಯನ ಕೈಕೆಳಗೆ ದಂಡೆತ್ತಿ ಬಂದರು. ರಾಮರಸನಾಯಕನು ಗದ್ದಿಗೆಯನ್ನೇರಿದ ಮೇಲೆ ಅವರು ಇದಕ್ಕೆ ಹಿಂದೆ ಎರಡು ಸಲ ಬಂದಿದ್ದರು. ಮೊದಲನೆಯ ಸಲ ನಾಯಕನು ಅವರಿಗೆ ತಾನು ಮೈಸೂರಿನವರಿಗೆ ಸಾಮಂತನೆಂದೂ, ಮರಾಟೆಯವರು ಮೈಸೂರವರನ್ನು ಗೆದ್ದರೆ ಅವರಿಗೆ ಸಾಮಂತನಾಗುವೆನೆಂದೂ, ಆಗ್ಗೆ ಮೈಸೂರಿಗೆ ಕೊಡಬೇಕಾಗಿದ್ದ ಕಪ್ಪವನ್ನು ಮರಾಟೆಯವರಿಗೆ ಸಲ್ಲಿಸುವೆನೆಂದೂ ಹೇಳಿಕಳುಹಿಸಿದನು. ಅವರು ಒಪ್ಪದೆ ಕೋಟೆಯ ಹೊರಗೆ ಕಾದಿದ್ದು ಹಳ್ಳಿಯ ಜನಗಳನ್ನು ಹಿಂಸಿಸುವುದಕ್ಕೆ ನೋಡಿದರು. ಆ ಜನರು ಎಂದಿನಂತೆ ಮನೆ ಮಠ ಬಿಟ್ಟು ಕಾಡಿಗೆ ಹೊರಟರು. ಹಳ್ಳಿಯವರನ್ನು ಕಾಡಿಗೆ ಅಟ್ಟಿ ಮರಾಟೆಯವರಿಗೆ ಫಲವೇನೂ ಇಲ್ಲ. ರಾಮರಸನಾದರೆ ಕೋಟೆಯಲ್ಲಿ ಭದ್ರವಾಗಿ ನಿಂತು ನೀವು ಏನಾದರೂ ಮಾಡಿ ಎಂದು ಬಿಟ್ಟನು. ರಾಮರಸನು ಇಷ್ಟು ಧೈರ್ಯ ಮಾಡುವುದಕ್ಕೆ ನಿಜಗಲ್ ಕೋಟೆ ದುರ್ಗಮವಾಗಿದ್ದುದೇ ಕಾರಣ. ಆ ಸಲ ಮರಾಟೆಯವರು ಬಹಳ ದಿನ ಕಾಯುವುದಕ್ಕಿರಲಿಲ್ಲ. ಐದು ದಿವಸ ನೋಡಿ ನಿಜಗಲ್ಲನ್ನು ಬಿಟ್ಟು ಸುಲಭವಾಗಿ ಸಗ್ಗಬಹುದಾದ ಬೇರೆಯ ಪಾಳೆಯಕ್ಕೆ ಹೊರಟರು. ರಾಮರಸನು ಸುಲಭದಲ್ಲಿಯೇ ಕಪ್ಪವನ್ನು ತಪ್ಪಿಸಿಕೊಂಡ ಹಾಗಾಯಿತು. ಎರಡನೆಯ ಸಲ ಬಂದಾಗ ರಾಮರಸನು ಸುತ್ತಲ ಪಾಳೆಯಗಾರರಿಗೆ ಹೇಳಿ ಕಳುಹಿಸಿ ಅವರ ಕಡೆಯ ಸೈನ್ಯ ಬಂದು ಮರಾಟೆಯವರ ಪಾಳೆಯದಿಂದ ಒಂದು ಮೈಲಿಯಷ್ಟು ದೂರದಲ್ಲಿ ನಿಲ್ಲುವ ಹಾಗೆ ಏರ್ಪಾಡು ಮಾಡಿ, ಆ ಸೈನ್ಯವು ಮೈಸೂರರಸರ ಕಡೆಯಿಂದ ಈ ಪ್ರಾಂತ್ಯದಲ್ಲಿ ಇರಿಸಲ್ಪಟ್ಟಿರುವ ಸೈನ್ಯವೆಂದೂ, ಇನ್ನೂ ದೊಡ್ಡ ಸೈನ್ಯ ಬರುವುದರಲ್ಲಿದೆಯೆಂದೂ ವದಂತಿ ಹುಟ್ಟಿಸಿದನು. ಮರಾಟೆಯವರು ಹೇಗಾದರೂ ಕೋಟೆಯೊಳಕ್ಕೆ ಪ್ರವೇಶಿಸಿದರೆ ಮುಂದಕ್ಕೆ ಇದು ತಮ್ಮ ಪ್ರಯಾಣಗಳಲ್ಲೆಲ್ಲಾ ತಮಗೆ ಅನುಕೂಲವಾದ ಒಂದು ಬಿಡಾರವಾಗುವುದೆಂದು ಯೋಚಿಸಿ ಪಿತೂರಿಯಿಂದ ಬಾಗಿಲನ್ನು ತೆಗೆಯಿಸಿಕೊಳ್ಳಲು ಯತ್ನ ಮಾಡಿದರು. ಜನರು ರಾಮರಸನ ವಿಷಯದಲ್ಲಿ ಎರಡೆಣಿಸುವವರಲ್ಲ. ಅದರಿಂದ ಮರಾಟೆಯವರು ಹತ್ತು ದಿನ ಕೋಟೆಯ ಹೊರಗೆ ಕಾದರೂ ಪ್ರಯೋಜನವಾಗಲಿಲ್ಲ. ಅಷ್ಟರಲ್ಲಿ ಇನ್ನೊಂದು ದಾರಿಯಲ್ಲಿ ಮುಂದುವರಿದು ಹೋಗಿದ್ದ ಮರಾಟೆಯವರ ಪ್ರಮುಖ ಸೇನಾಪತಿ ಈ ದಳ ಬಂದು ತನ್ನ ಜೊತೆಗೆ ಸೇರಬೇಕೆಂದು ಹೇಳಿಕಳುಹಿಸಿದನು. ಆ ಸಲವೂ ನಿಜಗಲ್ಲಿನ ಮೇಲೆ ಕೈಸಾಗದೆ ಮರಾಟೆಯವರು ಹಿಂದಕ್ಕೆ ಹೋಗಬೇಕಾಯಿತು.

ಮೂರನೆಯ ಸಲ ಬರುವಲ್ಲಿ, ಹಿಂದಿನ ಎರಡು ಸಲ ರಾಮರಸನಾಯಕನು ಕಪ್ಪವನ್ನು ಕೊಡದೇ ಇದ್ದರೂ ಹೆದರಿ ಕೋಟೆಯೊಳಗೆ ನಿಂತಿದ್ದನೆಂಬ ಕಾರಣದಿಂದ ಅವರು ಕಡಿಮೆ ಜನ ಬಂದರು. ಹಿಂದಿನ ಸಲದ ಪರಿಶ್ರಮದಿಂದ ರಾಮರಸನಾಯಕನೂ ಸ್ವಲ್ಪ ಪ್ರಯೋಜನವನ್ನು ಪಡೆದಿದ್ದನು. ನೆರೆಯ ಒಬ್ಬಿಬ್ಬರು ಪಾಳೆಯಗಾರರ ಸಹಾಯದಿಂದ ಸ್ವಲ್ಪ ಸೈನ್ಯವನ್ನು ಸೇರಿಸಿ, ಅದಕ್ಕೆ ತಾನು ಮುಂದಾಳಾಗಿ ನಿಂತು ಮರಾಟೆಯವರ ಮೇಲೆ

ಕೈಮಾಡುವುದಕ್ಕೆ ಏರ್ಪಾಡು ಮಾಡಿಕೊಂಡಿದ್ದನು. ಕಡಿಮೆ ಸೈನ್ಯ ಬಂದುದರಿಂದ ಈ ಏರ್ಪಾಡಿಗೆ ಅನುಕೂಲವೇ ಆಯಿತು. ಮೂರು ದಿನ ಒಳ್ಳೆಯ ಮಾತಿನಲ್ಲಿ ತಾನು ಏನೂ ಕೊಡಲಾಗುವುದಿಲ್ಲವೆಂದು ಹೇಳಿಕಳುಹಿಸಿದರೂ ಅವರು ಒಪ್ಪದೆ ಇರಲು, ನಾಲ್ಕನೆಯ ದಿನ ಬೆಳಗಾಗಿ ಮರಾಟೆಯ ಸೇನೆಯವರು ಎದ್ದು ಕಣ್ಣು ಹೊಸಕಿಕೊಳ್ಳುವ ಮುಂದೆಯೇ ಅವರ ಪಾಳೆಯದ ಮೇಲೆ ನುಗ್ಗಿ ಅವರನ್ನು ಚೆಲ್ಲಾಪಿಲ್ಲಿ ಓಡಿಸಿದನು. ಮರಾಟೆಯವರು ಕೆಟ್ಟೆವೆಂದು ಆ ಸಲಕ್ಕೆ ಬರಿಯ ಕೈಯಲ್ಲಿ ಹೊರಟು ಹೋದರು.

ಇದಾದ ಕೆಲವು ದಿವಸದ ಮೇಲೆ ಅರಸನ ಮಗನ ಹುಟ್ಟಿದ ಹಬ್ಬ ಬಂದಿತು. ಮರಾಟೆಯವರ ಮೇಲೆ ಯುದ್ಧ ಮಾಡಿ ಗೆದ್ದಿದ್ದ ಸಂತೋಷ ಒಂದು ಕಡೆ, ಅರಗುವರನ ಹುಟ್ಟಿದ ಹಬ್ಬ ಒಂದು ಕಡೆ. ಜನರ ಉತ್ಸಾಹಕ್ಕೆ ಮೇರೆಯಿಲ್ಲವಾಯಿತು. ಊರಿನಲ್ಲಿ ದೇವರ ಉತ್ಸವಗಳು ಬಹಳ ವಿಜೃಂಭಣೆಯಿಂದ ನಡೆದು, ನಾಲ್ಕಾರು ದಿನ ಊರಿನ ಜನರು ಬ್ರಾಹ್ಮಣರಿಗೂ, ಬಡಬಗ್ಗರಿಗೂ ಸಮಾರಾಧನೆಗಳನ್ನು ನಡೆಯಿಸಿದರು. ಊರಿನಲ್ಲೆಲ್ಲಾ ಭಜನೆ, ಮುಖ್ಯವಾದ ಉತ್ಸವಗಳೆಲ್ಲ ಅರಮನೆಯ ಕಡೆಯಿಂದ ನಡೆದುವು. ರಾಮರಸನಾಯಕನು ದೇವರ ಮುಂದೆ ನಮ್ರನಾಗಿ ನಿಂತು ಕಿಂಕರನಂತೆ ನಡೆದುಕೊಂಡನು. ಹಿರಿಯರೂ, ಪುಣ್ಯವಂತರೂ ಭಕ್ತರಂತೆ ನಡೆದರೆ ಜನರು ಅವರಿಗೆ ಅತಿಶಯವಾದ ಪ್ರೀತಿ ಗೌರವಗಳನ್ನು ತೋರಿಸುವರು. ರಾಮರಸನು ಈ ಕಾರಣದಿಂದ ಪ್ರಜೆಗಳ ವಿಶ್ವಾಸವನ್ನು ಎಂದಿಗಿಂತ ಹೆಚ್ಚಾಗಿ ಸಂಪಾದಿಸಿಕೊಂಡನು.

ಊರಿನಲ್ಲಿ ಉತ್ಸವಗಳು ಹೆಚ್ಚಿದುವೆಂದರೆ ಬರಿಯ ಒಳ್ಳೆಯದು ಮಾತ್ರ ಹೆಚ್ಚಾಗುವುದಿಲ್ಲ. ಆಗ ಒಳ್ಳೆಯವರು ಸಂತೋಷಪಡುವಂತೆ ದುಷ್ಟರೂ ಸಂತೋಷಪಡುತ್ತಾರೆ. ನಿಜಗಲ್ಲಿನ ಈ ಉತ್ಸವಗಳಲ್ಲಿ ಊರಿನ ಸಣ್ಣಪುಟ್ಟ ಪೋಲಿಪುಂಡರು ಒಟ್ಟುಗೂಡಿ ತಾವು ತಮಾಷೆಯಾಗಿ ಕಾಲವನ್ನು ಕಳೆದರು. ಇವರಿಗೆಲ್ಲ ಕಸ್ತೂರಿನಾಯಕನು ಮುಂದಾಳು. ರಾತ್ರಿ ಇವರು ಬಹಳ ಹೊತ್ತಾಗುವತನಕ ಒಂದುಕಡೆ ಗುಂಪುಗೂಡಿ ಮದ್ಯವನ್ನು ಕುಡಿದು ಎರಡು ಮೂರುದಿನ ಹುಚ್ಚಾಪಟ್ಟೆ ಆಡಿದರು. ಇದು ರಾಮರಸನಾಯಕನ ಕಿವಿಗೆ ಬಿದ್ದು ಅವನು ಗಿರಿಜವ್ವೆಯನ್ನು ಕರೆದು ಅವಳ ತಮ್ಮನಿಗೆ ಬುದ್ಧಿ ಹೇಳಬೇಕೆಂದು ಹೇಳಿದನು. ಗಿರಿಜವ್ವೆ ತಮ್ಮನಿಗೆ ಈ ಮಾತನ್ನು ತಿಳಿಸಿದಳು. "ನಾನು ತಮಾಷೆಯಾಗಿರುವುದಕ್ಕೆ ನಿಮ್ಮದೇನು ಅಡ್ಡಿ ?" ಎಂದು ಕಸ್ತೂರಿನಾಯಕನು ಒದರಿದನು. ಅಂದಿನ ರಾತ್ರಿ ಎಂದಿಗಿಂತ ಹೆಚ್ಚು ಮದ್ಯ ಖರ್ಚಾಯಿತು. ಕಸ್ತೂರಿಗೆ ಅದಕ್ಕೆ ತಕ್ಕ ಹಾಗೆ ಬುದ್ಧಿಸ್ವಾಧೀನ ತಪ್ಪಿತು. ದೇವರ ಉತ್ಸವದ ಗಲಭೆಯಲ್ಲಿ ಅವನೂ, ಅವನ ಜೊತೆಯವರೂ ಯಾರೋ ಒಬ್ಬ ಕುಲಸ್ತ್ರೀಯ ಮೇಲೆ ಕೈ ಹಾಕಿದರು. ಜನರು ಇನ್ನು ತಡೆಯಲಾರದೆ ಪ್ರತ್ಯಕ್ಷವಾಗಿ ರಾಜನ ಬಳಿಗೆ ಬಂದು, ತಮ್ಮ ಮೈದುನನಿಂದ ನಮ್ಮ ಸಂಸಾರಗಳ ಮಾನ ಉಳಿಯುವಂತಿಲ್ಲ, ಎಂದು ಹೇಳಿಕೊಂಡರು. ಮಾರನೆಯದಿನ ರಾಮರಸ ನಾಯಕನು ಕಸ್ತೂರಿಯನ್ನು ಸಭೆಗೆ ಕರೆಯಿಸಿ, ಏನು ನಡೆಯಿತೆಂಬುದನ್ನು ಪಂಚಾಯಿತರ

ಸಮಕ್ಷಮ ವಿಚಾರಣೆ ಮಾಡಿ. ಮೈದುನನು ತಪ್ಪುಮಾಡಿದ್ದು ನಿಷ್ಕರ್ಷೆಯಾಗಿ ತಿಳಿಯಲು ಅವನನ್ನು ಎಲ್ಲರೆದುರಿಗೆ ಛೀಗುಟ್ಟಿ, ಹೀಗೆ ಮತ್ತೆ ಮಾಡಬಾರದು, ಮಾಡಿದರೆ ಕ್ರೂರವಾದ ಶಿಕ್ಷೆಯನ್ನು ವಿಧಿಸುವೆವು ಎಂದು ಎಚ್ಚರಿಸಿದನು. ಅರಮನೆಯಲ್ಲಿ ಗಿರಿಜವ್ವೆಯನ್ನು ಕುರಿತು, ನಿನ್ನ ತಮ್ಮನಿಂದ ನನಗೆ ಮಾನ ಉಳಿಯುವಂತಿಲ್ಲ ಎಂದು ಹೇಳಿದನು. ಗಿರಿಜವ್ವೆ ಅದಕ್ಕೆ ಮೊದಲೇ ಅಮ್ಮ, ತಮ್ಮನನ್ನು ಹಳ್ಳಿಗೆ ಕಳುಹಿಸಿಬಿಡಬೇಕೆಂದು ಯೋಚಿಸಿದ್ದಳು. ಅಂದು ನಾಯಕನ ಮಾತನ್ನು ಕೇಳಿ ತಮ್ಮನನ್ನು ಊರಿಗೆ ಕಳುಹಿಸಿಬಿಡುವೆನೆಂದು ಹೇಳಿದಳು. ಲಕುಮವ್ವೆ "ಕಸ್ತೂರಿ ಮಾಡಿದ್ದೇನೋ ತಪ್ಪೇ. ಆದರೆ ಅವನು ಇನ್ನೂ ಹುಡುಗ. ಈ ಸಲಕ್ಕೆ ಬುದ್ಧಿ ಹೇಳಿದ್ದಾಯಿತು. ಇನ್ನುಮೇಲೆ ಅವನು ಪುಂಡತನ ಮಾಡದಂತೆ ನೋಡಿ ಕೊಂಡರೆ ಸರಿ" ಎಂದಳು. ಗಿರಿಜವ್ವೆ ಸುಮ್ಮನಾಗಬೇಕಾಯಿತು.

ಸಭೆಯಲ್ಲಿ ಎಲ್ಲರೆದುರಿಗೆ ಮಾತು ಕೇಳಿ ಕಸ್ತೂರಿಗೆ ಬಹಳ ಕೋಪ ಬಂದಿತು. ಅವನು ತನ್ನ ತಪ್ಪು ಎಂಥದೆಂದು ಯೋಚಿಸದೆ ಅರಸನ ಮೇಲೆ ಆಕ್ರೋಶಗೊಂಡನು. "ತಪ್ಪು ಮಾಡಿದರೆ ಒಂದು ಕಡೆಗೆ ಕರೆದು ಬುದ್ಧಿ ಹೇಳಬಾರದಿತ್ತೆ? ಎಲ್ಲರೆದುರಿಗೆ ಅವಮಾನ ಮಾಡಿದರಲ್ಲ" ಎಂದು ಅವನು ತಾಯ ಬಳಿ ಹೇಳಿಕೊಂಡನು. ಅವಳು "ಅರಸನು ಮಗನನ್ನು ಹೆರುವುದಕ್ಕೆ ನಿಮ್ಮಕ್ಕನನ್ನು ಮದುವೆಯಾದನೇ ಹೊರತು ಅವಳನ್ನು ರಾಣಿಯಂತೆ ಕಾಣುತ್ತಿಲ್ಲ. ಲಕುಮವ್ವೆಯೇ ರಾಣಿ. ನಿಮ್ಮಕ್ಕನಿಗೆ ಏನೂ ಸ್ವತಂತ್ರವಿಲ್ಲ. ಇದ್ದಿದ್ದರೆ ಅರಸನು ನಿನ್ನನ್ನು ಇಷ್ಟು ಬಯ್ಯುವುದಕ್ಕಿತ್ತೆ? ಅದರ ರೀತಿಯೇ ಬೇರೆಯಿರುತ್ತಿತ್ತು. ಹಿರಿಯವಳು ತಾನೇ ತಾನಾಗಿ ಇರುವುದರಿಂದಲೇ ಅರಸನು ನಿನ್ನನ್ನು ಇಷ್ಟು ತುಚ್ಛವಾಗಿ ಕಾಣುತ್ತಿದ್ದಾನೆ. ಹೀಗೆಲ್ಲಾ ಮಾಡಬೇಕೆಂದು ಅವಳೇ ಅವನಿಗೆ ಹೇಳಿಕೊಟ್ಟಿರಬೇಕು" ಎಂದು ಹೇಳಿದಳು. ಕಸ್ತೂರಿಗೆ ಲಕುಮವ್ವೆಯ ವಿಷಯದಲ್ಲಿ ಬಹಳ ಆಗ್ರಹವುಂಟಾಯಿತು. ಸಾಲದುದಕ್ಕೆ ಊರಿನ ದುಷ್ಟರ ಸಮುದಾಯದಲ್ಲಿ ಅವನಿಗೆ ಇದ್ದ ದೊಡ್ಡಸ್ತಿಕೆ ಸಭೆಯಲ್ಲಿ ದಂಡನೆಯಾದ ಕಾರಣದಿಂದ ಕಡಿಮೆ ಯಾಯಿತು. ಯಾರೂ ಹತ್ತಿರ ಸೇರದಾದರು. ಬದುಕು ಬೇಸರಕ್ಕಿಟ್ಟುಕೊಂಡಿತು. ಅರಸನ ಮೇಲೆಯೂ, ಲಕುಮವ್ವೆಯ ಮೇಲೆಯೂ ಈ ಕೋಪವನ್ನು ಹೇಗೆ ತೀರಿಸಿಕೊಳ್ಳಬೇಕೆಂದು ಅವನು ದಿನವೂ ತನ್ನಲ್ಲಿ ತಾನೇ ಯೋಚನೆ ಮಾಡುತ್ತಿದ್ದನು. ತಾನು ಮಾಡುತ್ತಿರುವ ಯೋಚನೆಯಿಂದ ತನ್ನ ಅಕ್ಕನಿಗೂ ಕೇಡಾದೀತೆಂದು ಅವನಿಗೆ ತೋರಲಿಲ್ಲ. ಅವನಂಥ ಜನರ ಬುದ್ಧಿ ಅಷ್ಟು ದೂರ ಓಡುವುದಿಲ್ಲ.

ಮೂರನೆಯ ಸಲ ಬಂದಾಗ ಅಜಾಗ್ರತೆಯಿಂದ ಸೋತು ಓಡಿದ ಮಹಾರಾಷ್ಟ್ರ ಸೈನ್ಯ ಒಂದಕ್ಕೆ ಮೂರರಷ್ಟಾಗಿ ಒಂದು ತಿಂಗಳಲ್ಲಿ ಮತ್ತೆ ಬಂದಿತು. ರಾಮರಸನಾಯಕನು ಇದಕ್ಕೆ ಸಿದ್ಧನಾಗಿರಲಿಲ್ಲ. ಕೋಟೆಯಲ್ಲೇನೋ ಬೇಕಾದಷ್ಟು ದವಸಧಾನ್ಯವಿತ್ತು. ನಾಯಕನು ನೆರೆಯ ಪಾಳೆಯಗಾರರ ಸಹಾಯವನ್ನು ಮತ್ತೆ ಕೇಳುವುದಕ್ಕೆ ಚಾರರನ್ನು ಕಳುಹಿಸಿ ಈ ದೊಡ್ಡ ಸೇನೆಯನ್ನು ತಡೆಯುವುದು ಹೇಗೆ ಎಂದು ಯೋಚಿಸುತ್ತ ಇದ್ದನು. ಒಬ್ಬ

ಚಾರನನ್ನು ಮೈಸೂರ ಕಡೆಗೂ ಅಟ್ಟಿದನು. ಊರಿನಲ್ಲಿದ್ದ ಜನರನ್ನು ಸ್ವಲ್ಪ ಹುರಿಗೊಳಿಸಿ ಸಾಧ್ಯ ವಾದರೆ ಪಾಳೆಯದ ಸೇನೆಯನ್ನು ಗುಂಪುಕಟ್ಟಿಸಿ, ಶತ್ರುವಿನ ಮೇಲೆ ಬೀಳುವುದೆಂದು ಯೋಚನೆ ಮಾಡಿದನು. ಇಂಥ ಗುಂಪಿಗೆ ಕೇವಲ ಸಭ್ಯರು ಮಾತ್ರವಲ್ಲದೆ ಪುಂಡರೂ, ತುಂಟರೂ ಕೂಡ ಸೇರಬೇಕು. ಈ ವೇಳೆಗೆ ಕಸ್ತೂರಿ ತಾನು ಹೀಗೆ ಮಾಡುತ್ತೇನೆ, ಹಾಗೆ ಮಾಡುತ್ತೇನೆ ಎಂದು ಜಂಭ ಕೊಚ್ಚಿ ಅವರ ಮೇಲೆ ತನಗಿದ್ದ ಅಧಿಕಾರವನ್ನು ಪುನಃ ಸಂಪಾದಿಸಿದ್ದನು. ರಾಮರಸನು ಪುನಃ ಸೇನೆಯನ್ನು ಕರೆಯಬೇಕೆಂದಾಗ ಕಸ್ತೂರಿಯ ಬೋಧನೆಯಿಂದ ಅದು ಸಾವಕಾಶ ವಾಯಿತು.

ಕಸ್ತೂರಿಗೆ ಮೊದಲಲ್ಲಿ ತನ್ನ ಶಕ್ತಿ ಎಷ್ಟು ಎಂಬುದನ್ನು ನಾಯಕನಿಗೆ ತೋರಿಸಬೇಕೆಂಬ ಉದ್ದೇಶ ಹೊರತು ಬೇರೆ ಇರಲಿಲ್ಲ. ಆದರೆ ಯಾವಾಗ ತನ್ನ ಮಾತಿನಂತೆ ಕೆಲವು ಜನ ನಡೆದು, ಅವನು ರಾಮರಸನಿಗಿಂತ ತಾನು ಗಟ್ಟಿಗನೆಂದು ಎಣಿಸಿದನೋ ಆಗ ಅವನ ಮನಸ್ಸಿನಲ್ಲಿ ಒಂದು ದುರಾಲೋಚನೆ ಹುಟ್ಟಿತು. ರಾಮರಸನು ಎಷ್ಟರ ಮನುಷ್ಯ ? ಇವನು ಏಕೆ ಪಾಳೆಯಗಾರ ನಾಗಿರಬೇಕು ? ತಾನೇ ಏಕೆ ಆಗಬಾರದು ? ಮರಾಟೆಯವರ ಸೇನಾಪತಿಯ ಬಳಿಗೆ ಹೋಗಿ ತಾನು ಕೋಟೆಯನ್ನು ಬಿಟ್ಟುಕೊಡುವುದಾಗಿ ಮಾತು ಕೊಟ್ಟು ಅವರು ರಾಮರಸನನ್ನು ಹಿಡಿಯುವಂತೆಯೂ, ತನ್ನನ್ನು ಪಾಳೆಯಗಾರನೆಂದು ಒಪ್ಪುವಂತೆಯೂ ಏಕೆ ಮಾಡಬಾರದು ? ಹೀಗೆಂದು ಅವನು ಮೂರು ದಿನ ಯೋಚಿಸಿ ಹಾಗೆಯೇ ಮಾಡುವುದಾಗಿ ನಿರ್ಧರಿಸಿದನು. ಮಾರನೆಯ ದಿನ ರಾಮರಸನ ಬಳಿಗೆ ಹೋಗಿ ತಾನು ಜನರನ್ನು ಒಟ್ಟುಗೂಡಿಸುವುದಾಗಿಯೂ, ನಾಯಕನು ಯೋಚನೆ ಮಾಡಬೇಕಾಗಿಲ್ಲವೆಂದೂ ಧೈರ್ಯ ಹೇಳಿದನು.

ರಾಮರಸನಿಗೆ ಬಹಳ ಸಂತೋಷವಾಯಿತು. ಅವನು ಇದಕ್ಕೆ ಮೆಚ್ಚಿ ಕಸ್ತೂರಿಗೆ " ನಿನ್ನ ಹುಡುಗತನ ಬಿಟ್ಟರೆ ನೀನು ಈ ಊರಿನಲ್ಲಿ ಪಾಳೆಯಗಾರನಂತಿರಬಹುದು. ನಿನಗೇನು ಕಡಿಮೆ ? " ಎಂದು ಹೇಳಿದನು. ಆ ದಿನ ರಾತ್ರಿ ರಾಮರಸನು ಎಂದಿನಂತೆ ಕೋಟೆಯನ್ನು ನೋಡಿಕೊಂಡು ಬರುವುದಕ್ಕೆ ಹೊರಟಾಗ ಕಸ್ತೂರಿಯನ್ನು ಜೊತೆಗೆ ಕರೆದುಕೊಂಡು ಹೋದನು. ಇದರಿಂದ ಕಸ್ತೂರಿ ಕಾವಲ ಸಂಚುಗಳನ್ನೆಲ್ಲಾ ಕೊಂಚಮಟ್ಟಿಗೆ ತಿಳಿದುಕೊಂಡನು. ಆ ದಿನ ರಾತ್ರಿಯೇ ಹೊರಗೆ ಮರಾಟೆಯವರೊಂದಿಗೆ ಮಾತನಾಡಿ ಮಾರನೆಯ ದಿನ ರಾತ್ರಿ ತಾನು ಬಾಗಿಲನ್ನು ತೆಗೆಯಿಸುವುದಾಗಿಯೂ, ಮರಾಟೆಯವರು ಒಳಗೆ ಬರಬಹುದೆಂತಲೂ, ರಾಮರಸನನ್ನು ಅವರು ಸೆರೆಹಿಡಿಯಬೇಕೆಂದೂ, ಕೊಲ್ಲಕೂಡದೆಂದೂ, ತನ್ನನ್ನು ಪಾಳೆಯಗಾರ ನಾಗಿ ಮಾಡಬೇಕೆಂದೂ ಏರ್ಪಾಡು ಮಾಡಿಕೊಂಡನು.

ಮಾರನೆಯ ದಿನ ರಾತ್ರಿ ರಾಮರಸನು ಎಂದಿನಂತೆ ಕಾವಲನ್ನು ನೋಡಿ, ಮೈಸೂರ ಕಡೆ ಹೋದ ಬೇಹು ಏನಾಯಿತೋ ಎಂದು ಯೋಚಿಸುತ್ತಾ, ನೆರೆಯ ಪಾಳೆಯಗಳಿಂದ ಬಂದಿದ್ದ ಅರ್ಧ ಮನಸ್ಸಿನ ಉತ್ತರಗಳನ್ನು ನೋಡಿ, ಈ ಸಲ ಹೇಗೆ ಕಡೆಹಾಯುವುದು, ಮರಾಟೆಯವರನ್ನು ಯಜಮಾನರೆಂದು ಒಪ್ಪಿಕೊಳ್ಳಬೇಕೇನೋ ಎಂದುಕೊಂಡು ಚಿಂತೆಯಿಂದ ಮಲಗಿದನು.

ಊರಿನ ಜನವೆಲ್ಲ ಹೊತ್ತಾಗಿ ಮಲಗಿತ್ತು. ಶತ್ರು ಎಷ್ಟು ದಿನ ಹೀಗೆ ಊರ ಮುಂದೆ ಪಾಳೆಯ ಹಾಕಿ ನಿಲ್ಲುವನೋ, ಹೊರಗೆ ಹೋಗುವುದಕ್ಕಿಲ್ಲದೆ. ಒಳಗೆ ಬರುವುದಕ್ಕಿಲ್ಲದೆ ದಿನ ವರುಷವಾಯಿತು ಎಂದು ಅವರು ಯೋಚನೆ ಮಾಡುತ್ತಿದ್ದರು. ಕಸ್ತೂರಿ ಕೋಟೆಯ ಬಾಗಿಲಲ್ಲಿ ಆ ರಾತ್ರಿ ತನ್ನ ಕಡೆಯವರ ಪಹರೆಯನ್ನು ಏರ್ಪಾಡು ಮಾಡಿದನು. ಊರೆಲ್ಲ ನಿಶ್ಶಬ್ದ ವಾದ ಮೇಲೆ ಕೋಟೆಯ ಬಾಗಿಲನ್ನು ತೆಗೆದು ಶತ್ರುಗಳನ್ನು ಊರೊಳಕ್ಕೆ ಬಿಟ್ಟನು. ಶತ್ರುಸೈನ್ಯ ಶಬ್ದಮಾಡದೆ ಊರೊಳಕ್ಕೆ ಬಂದು ಮುಖ್ಯವಾದ ಸ್ಥಳಗಳನ್ನು ಆಕ್ರಮಿಸಿಕೊಂಡಿತ್ತು. ಕೊನೆಗೆ ಕೊಂಚ ಜನ ಅರಮನೆಯ ಮುಂದೆ ಜಯಘೋಷವನ್ನು ಹಾಕಿ ಒಳಕ್ಕೆ ನುಗ್ಗಿದರು.

ಏನಾಯಿತೆಂದು ತಿಳಿಯದೆ ರಾಮರಸನು ಕತ್ತಿಯನ್ನು ಹಿಡಿದು ಹೊರಕ್ಕೆ ಬಂದನು ಪಹರೆಯ ಜನ ಈಟಿ ಭಲ್ಲೆಗಳನ್ನು ಹಿಡಿದು ನಿಂತಿದ್ದರು. ಶತ್ರುಗಳು ಎಲ್ಲಾ ಕಡೆಗೂ ನುಗ್ಗುತ್ತಿದ್ದರು. ಗುಂಪಿನಲ್ಲಿ ಕಸ್ತೂರಿಯನ್ನು ಕಂಡು ರಾಮರಸನು "ಏನಾಯಿತು. ಕಸ್ತೂರಿ ? ಜನವನ್ನು ಕೂಗು, ನಡೆ!" ಎಂದನು. ಕಸ್ತೂರಿ ಅವನನ್ನು ತೋರಿಸಿ ಮರಾಟೆಯವರಿಗೆ, 'ಹಿಡೀರಿ, ಇವನನ್ನು ಹಿಡೀರಿ' ಎಂದನು. ಮೇಲೆ ಬಿದ್ದು ಬಂದ ಮರಾಟೆಯವರನ್ನು ಕಂಡು ರಾಮರಸನು ತನ್ನ ಕತ್ತಿಯಿಂದ ಅರ್ಧಗಳಿಗೆ ಹೊತ್ತು ಹೋರಾಡಿದನು. ಆದರೆ ಅವನು ಒಬ್ಬ, ಮೇಲೆ ಬಿದ್ದವರು ಹತ್ತಾರು ಜನ. ಅವರಲ್ಲೊಬ್ಬನು ಇವನನ್ನು ಕತ್ತಿಯಿಂದ ಇರಿದನು. ಅದು ಎದೆಯ ಬಳಿ ಚುಚ್ಚಿ ರಾಮರಸನು ಶಿವ ಶಿವ ಎಂದು ನೆಲಕ್ಕುರುಳಿದನು. ಶತ್ರುಗಳು ಮುಂದಕ್ಕೆ ನುಗ್ಗಿದರು. ಅರಸನನ್ನು ಊಳಿಗದವರು ಒಂದು ಕಡೆಗೆ ಒಯ್ದುಕೊಂಡು ಹೋದರು.

ಕೋಟೆ ಮರಾಟೆಯವರ ಪಾಲಾಯಿತು. ಅರಮನೆಯಲ್ಲಿ ಎಲ್ಲರೂ ಎದ್ದು ದಿಕ್ಕುತೋರದೆ ಅಲ್ಲಲ್ಲೇ ಇದ್ದವರು ಕೆಲವರು, ದಿಕ್ಕಾಪಾಲಾಗಿ ಓಡಾಡಿದವರು ಕೆಲವರು ಹೀಗೆ ಕಾಲ ಕಳೆದು ಹೋಯಿತು. ಕಸ್ತೂರಿನಾಯಕ ಊರನ್ನು ಮರಾಟೆಯವರ ಕೈಗೆ ಕೊಟ್ಟುಬಿಟ್ಟನೆಂದು ಊರಿನಲ್ಲೆಲ್ಲಾ ಮಾತು ಹಬ್ಬಿತು. ಗಿರಿಜವ್ವೆ ತನ್ನ ತಮ್ಮನಿಂದ ಎಂತಹ ಅನಾಹುತ ಉಂಟಾಯಿತು, ತಾನು ಈ ಮನೆಗೆ ಮಾರಿಯಂತೆ ಬಂದೆನೆ ಎಂದು ಎಣಿಸಿ ದುಃಖಿಸಿದಳು. ಲಕುಮವ್ವೆ ಈಗ ಇನ್ನೇನು ಮಾಡುವುದು, ಏನು ಮಾಡಿದರೆ ಈಗ ಶತ್ರುಗಳು ಹೊರಟು ಹೋದಾರು, ಕಪ್ಪವನ್ನು ಕೊಡುವೆವೆನ್ನೋಣವೇ ಎಂದು ಪ್ರಧಾನಿಗಳನ್ನು ಕೇಳಿದಳು. ಅವರು ಬೊಕ್ಕಸವೇ ಅವರ ಕೈಗೆ ಸೇರಿರುವಾಗ ಕಪ್ಪವನ್ನು ಕೊಡುವುದೇನು ಎಂದರು. ಅಷ್ಟು ಹೊತ್ತಿಗೆ ಬೆಳಗಾಯಿತು. ಊರಿನಲ್ಲೆಲ್ಲಾ ಕಳವಳ, ಅರಮನೆಯಲ್ಲಿ ರಾಮರಸನು ಪ್ರಾಣವನ್ನು ಬಿಟ್ಟನು.

ಮರಾಟೆಯವರ ದಳಪತಿ ಕಿಲ್ಲೇ ಕಚೇರಿಯಲ್ಲಿ ಇಳಿದುಕೊಂಡು ಕೋಟೆಯಲ್ಲೆಲ್ಲಾ ತನ್ನ ಕಡೆಯವರನ್ನು ಕಾವಲಿರಿಸಿ, ಊರಿನಲ್ಲಿ ಎಲ್ಲರಿಗೂ ತಿಳಿಯುವಂತೆ "ನಿಜಗಲ್ಲನ್ನು ಮರಾಟೆ ಯವರು ಹಿಡಿದಿದ್ದೇವೆ. ಜನಗಳು ಯಾರೂ ಭಯಪಡುವ ಕೆಲಸವಿಲ್ಲ. ರಾಮರಸನಿಗೆ ಬದಲಾಗಿ

ಇನ್ನೊಬ್ಬ ಪಾಳೆಯಗಾರನನ್ನು ಇರಿಸುತ್ತೇವೆ. ನಿಮ್ಮ ನಿಮ್ಮ ಆಸ್ತಿಪಾಸ್ತಿ ನಿಮಗೇ ಇರುತ್ತದೆ, ನಾಲ್ಕು ದಿನ ಜನ ಊರು ಬಿಟ್ಟು ಬೇರೆ ಕಡೆಗೆ ಹೋಗಕೂಡದು" ಎಂದು ಡಂಗೂರ ಹೊಡೆಸಿದನು. ರಾಮರಸನ ಪ್ರಾಣ ಹೋಗುವುದೆಂದು ಅವನಿಗೆ ಮೊದಲೇ ತಿಳಿದಿತ್ತು. ಅದಾದ ಕೂಡಲೇ ತನಗೆ ತಿಳಿಸಬೇಕೆಂದು ಅವನು ಹೇಳಿದ್ದನು. ವರ್ತಮಾನ ಬಂದಾಗ ಅವನು ಕಸ್ತೂರಿನಾಯಕನೊಂದಿಗೆ ಅರಮನೆಗೆ ಬಂದು ರಾಮರಸನ ಸಂಸ್ಕಾರಗಳಿಗೆಲ್ಲ ಏರ್ಪಾಡು ಮಾಡಿಸುತ್ತೇವೆ ಎಂದು ಧೈರ್ಯ ಹೇಳಿದನು. ಲಕುಮವ್ವೆ "ಊರು ಗೆದ್ದ ಮೇಲೆ ನೀವೇ ಕರ್ತರು. ಎಲ್ಲಾ ಸರಿಯಾಗಿ ನಡೆಸುವುದಕ್ಕೆ ನೀವೇ ಬಾಧ್ಯರು" ಎಂದು ಹೇಳಿ, ಮರಾಟೆಯವರು ದಯೆಮಾಡಿ ನಾಯಕನ ಮಗನನ್ನು ಗದ್ದಿಗೆಯ ಮೇಲೇರಿಸಿ ಅವನನ್ನು ತಮ್ಮ ಸಾಮಂತನಾಗಿ ಕಾಣಬೇಕೆಂದು ಬೇಡಿಕೊಂಡಳು.

ದಳಪತಿ ಕಸ್ತೂರಿಯೊಡನೆ ಅರಮನೆಗೆ ಬಂದು ಅರಸನ ಕಳೇಬರದ ಬಳಿ ಈ ಮಾತೆಲ್ಲಾ ನಡೆದಾಗ ಗಿರಿಜವ್ವೆ ಅಲ್ಲೇ ಇದ್ದಳು. ಅವಳಿಗೆ ಅರಸು ತೀರಿಹೋದನೆಂಬುದು ಒಂದು ಗೊತ್ತೇ ಹೊರತು ಇನ್ನೇನೂ ಬೇಕಾಗಿರಲಿಲ್ಲ. ತನ್ನ ಮಗ ಪಾಳೆಯಗಾರನಾಗುವುದೋ, ಇನ್ನು ಯಾರಾದರೂ ಆಗುವುದೋ, ಮುಂದಕ್ಕೆ ಏನು ಗತಿಯೋ ಎಂದು ಅವಳು ಯೋಚಿಸಲಿಲ್ಲ. ಇಂಥ ಮಾತಿಗೆಲ್ಲ ಆಗ ಸಮಯವಲ್ಲವೆಂದು ಅವಳಿಗೆ ತೋರಿತು. ಇಲ್ಲಿ ಅರಸನು ಸತ್ತು ಬಿದ್ದಿರುವಾಗ, ತೀರ ಪ್ರಾಣಹೋಗುವುದಕ್ಕೆ ಮುಂಚೆಯೇ ಮಗುವಿನ ಪಟ್ಟದ ಮಾತೇನು ? ಕಸ್ತೂರಿನಾಯಕನು ಮರಾಟೆಯವರೊಂದಿಗೆ ಒಂದಾಗಿ ಉಂಡ ಮನೆಗೆ ಎರಡು ಬಗೆದನೇ ಎಂದು ಅವಳು ಕುದಿಯುತ್ತಿದ್ದಳು ; ಅವನು ಬಂದು ಹತ್ತಿರ ನಿಂತಾಗ ಅವನ ಕಡೆ ನೋಡಲಿಲ್ಲ ಕಸ್ತೂರಿಯೂ ತಲೆತಗ್ಗಿಸಿಕೊಂಡು ನಿಂತಿದ್ದನು. ದಳಪತಿ ಇದನ್ನೆಲ್ಲ ನೋಡಿದನು. ಅವನಿಗೆ ಲಕುಮವ್ವೆಯ ಸ್ಥೈರ್ಯ. ಗಿರಿಜವ್ವೆಯ ಪತಿಪರಾಯಣತೆ ಇವೆರಡರಲ್ಲಿ ಒಂದಕ್ಕಿಂತ ಒಂದು ಶ್ಲಾಘ್ಯವೆಂದು ತೋರಿತು. ಗಿರಿಜವ್ವೆ ಬಹಳ ಚೆಲುವೆ. ಅವಳನ್ನು ತಾನು ಒಲಿಸಿಕೊಳ್ಳ ಬೇಕೆಂದು ಅವನಿಗೆ ಮನಸ್ಸಿನಲ್ಲಿ ಆಸೆಯಾಯಿತು.

ಅರಸನ ಉತ್ತರಕ್ರಿಯೆಗಳಿಗೆ ಎಲ್ಲಾ ಏರ್ಪಾಡೂ ಆಯಿತು. ಲಕುಮವ್ವೆ ತಾನು ಸಹಗಮನ ಮಾಡುವುದಾಗಿ ತಿಳಿಸಿದಳು. ಗಿರಿಜವ್ವೆ "ನೀವು ಮನೆಗೆ ದೊಡ್ಡವರು. ಮಗುವನ್ನು ಸಾಕಿ ಗದ್ದಿಗೆಯ ಮೇಲೆ ಇರಿಸಬೇಕು. ಅದು ನಿಮ್ಮಿಂದ ಆಗುವುದಲ್ಲದೆ ನನ್ನಿಂದ ಆಗುತ್ತದೆಯೇ? ನೀವು ಇರಿ. ನಾನು ಸಹಗಮನ ಮಾಡುತ್ತೇನೆ" ಎಂದಳು. ತಾನು ದೊಡ್ಡವಳು, ಸಹಗಮನ ಅಧಿಕಾರ ತನ್ನದು ಎಂದು ಲಕುಮವ್ವೆಗೂ, ಮನೆಗೆ ದೊಡ್ಡವಳು ಇರಬೇಕು, ತಾನು ಹೋಗುವೆನು ಎಂದು ಗಿರಿಜವ್ವೆಗೂ ವಾದ ನಡೆಯಿತು. ಕೊನೆಗೆ ಗಿರಿಜವ್ವೆ "ನಿಮ್ಮ ಇಷ್ಟ, ನೀವು ಉಳಿದಿದ್ದರೆ ನಾನು ಇದ್ದರೂ ಇದ್ದೆ. ನೀವು ಹೋಗುವುದಾದರೆ ನಾನು ಹೋಗುವುದೂ ಖಂಡಿತ" ಎಂದಳು. ಇಷ್ಟಾಗುವ ವೇಳೆಗೆ ಊರಿನ ಮುಖಂಡರು ಬಂದು, ಯಾರೂ ಸಹಗಮನ ಮಾಡಕೂಡದು, ಹುಡುಗನನ್ನು ದೊಡ್ಡವನಾಗಿ ಮಾಡುವುದಕ್ಕೆ

ಇಬ್ಬರೂ ಇರಬೇಕೆಂದು ಬೇಡಿಕೊಂಡರು. ಮರಾಟೆಯವರ ದಳಪತಿಯೂ ಹೀಗೆಯೇ ಹೇಳಿದನು. ಸಹಗಮನದ ಮಾತು ನಿಂತುಹೋಯಿತು. ಆ ದಿನ ಉತ್ತರಕ್ರಿಯೆಗಳು ನಡೆದುಹೋದುವು.

ಮೂರು ದಿನ ಕಳೆಯಿತು. ಈ ಮಧ್ಯೆ ಕಸ್ತೂರಿಗೂ, ದಳಪತಿಗೂ ಮುಂದಿನ ಏರ್ಪಾಡಿನ ವಿಷಯದಲ್ಲಿ ಮನಸ್ತಾಪ ಬಂದಿತು. ದಳಪತಿ ನಾಯಕನ ಮಗನನ್ನು ಗದ್ದಿಗೆಯ ಮೇಲೇರಿಸಿ ಲಕುಮವ್ವೆಯನ್ನೂ, ಕಸ್ತೂರಿಯನ್ನೂ ಅವನ ರಕ್ಷಣೆಗೆ ನಿಲ್ಲಿಸುವುದಾಗಿಯೂ, ಗಿರಿಜವ್ವೆಯನ್ನು ತಾನು ಕರೆದುಕೊಂಡು ಹೋಗುವುದಾಗಿಯೂ ಹೇಳಿದನು. ಕಸ್ತೂರಿ ತಾನೇ ಗದ್ದಿಗೆಯನ್ನೇರ ಬೇಕೆಂದೂ, ತನ್ನ ಸೋದರಳಿಯ ತನ್ನ ನಂತರ ಗದ್ದಿಗೆಯನ್ನೇರಬೇಕೆಂದೂ, ಗಿರಿಜವ್ವೆ ಧಾರಾಳ ವಾಗಿ ಒಪ್ಪಿದರೆ ಮಾತ್ರ ಅವಳನ್ನು ದಳಪತಿ ಕರೆದುಕೊಂಡು ಹೋಗಬಹುದೆಂದೂ ಹೇಳಿದನು. ಗದ್ದಿಗೆಯನ್ನು ಯಾರು ಏರಬೇಕು ಎನ್ನುವ ವಿಷಯದಲ್ಲಿ ಇವರು ಒಬ್ಬರ ಮಾತಿಗೊಬ್ಬರು ಒಪ್ಪಲಿಲ್ಲ. ಕಸ್ತೂರಿ ದಳಪತಿಗೆ ಅವನು ಕೊಟ್ಟ ಮಾತನ್ನು ಜ್ಞಾಪಕ ಮಾಡಿದನು. ದಳಪತಿ ಅದಕ್ಕೆ "ನಾಯಕನಿಗೆ ಒಬ್ಬ ಮಗನಿರುವ ಮಾತನ್ನು ನೀವು ನನಗೆ ಹೇಳಲಿಲ್ಲ" ಎಂದನು. ದಳಪತಿಯ ನಡತೆಗೆ ಇದು ಕಾರಣವೋ, ಇಲ್ಲ, ತಾನು ಗಿರಿಜವ್ವೆಯ ಮಗನ ಪರವನ್ನು ವಹಿಸಿದರೆ ಗಿರಿಜವ್ವೆಯನ್ನು ಸ್ವಾಧೀನಪಡಿಸಿಕೊಳ್ಳುವುದು ಸುಲಭ ಎಂಬುದು ಕಾರಣವೋ ಹೇಳುವುದು ಹೇಗೆ? ಅಂತೂ ಇವರಿಗೆ ವಿವಾದವುಂಟಾಯಿತು. ಕೊನೆಗೆ ದಳಪತಿ ಈ ಮಾತನ್ನು ಚರ್ಚೆ ಮಾಡುವುದಕ್ಕೆಂದು ರಾಣಿಯರಿಬ್ಬರಿಗೂ ಕರೆಯಕಳುಹಿಸಿದನು. ಒಬ್ಬೊಬ್ಬರು ಒಂದೊಂದು ಸಲ ಬರಬೇಕೆಂದೂ. ತಾನು ಏನೂ ತೊಂದರೆಪಡಿಸುವುದಿಲ್ಲವೆಂದೂ, ತನ್ನ ಜೊತೆಯಲ್ಲಿ ಕಸ್ತೂರಿನಾಯಕನಿರುವನೆಂದೂ ತಿಳಿಸಿದನು. ಹಿರಿಯ ರಾಣಿ ಬಂದಾಗ ಯಾರನ್ನು ನಾಯಕನನ್ನಾಗಿ ಮಾಡುವುದೆಂದು ಆಕೆಯೊಂದಿಗೆ ಚರ್ಚಿಸಿ, ಆಮೇಲೆ ಕಿರಿಯ ರಾಣಿಯನ್ನು ಕರೆಯಕಳುಹಿಸಿದನು. ಗಿರಿಜವ್ವೆಯನ್ನೂ ಅದೇ ಮಾತು ಕೇಳಿದನು. ಆಕೆ ನಮ್ಮ ಹಿರಿಯ ರಾಣಿಯನ್ನು ಕೇಳಿದ ಮೇಲೆ ನನ್ನನ್ನು ಕೇಳಬೇಕಾದ್ದಿಲ್ಲ, ಅವರು ಹೇಳಿದಂತೆ ಮಾಡಿ ಎಂದಳು. ದಳಪತಿ ಆ ಮಾತು ಈ ಮಾತು ಆಡಿ ಕೊನೆಗೆ ಗಿರಿಜವ್ವೆ ತನ್ನ ವಶವಾಗಬೇಕೆಂದು ಹೇಳಿದನು. ಗಿರಿಜವ್ವೆ ಅದುವರೆಗೆ ತಲೆ ತಗ್ಗಿಸಿಕೊಂಡು ಮಾತನಾಡುತ್ತಿದ್ದವಳು ಆಗ ಅವನನ್ನೂ, ಕಸ್ತೂರಿಯನ್ನೂ ಚೆನ್ನಾಗಿ ನೋಡಿ, ಇವನು ಅದಕ್ಕೆ ಒಪ್ಪಿದ್ದಾನೆಯೆ ಎಂದು ಕೇಳಿದಳು. ದಳಪತಿ "ಒಪ್ಪಿದ್ದಾನೆ" ಎಂದನು. ಅವಳು ದಳಪತಿಯನ್ನು ಮದುವೆಯಾಗುವುದಕ್ಕೆ ತಾನು ಒಪ್ಪಿದರೆ ದಳಪತಿ ತಾನು ನಾಯಕನಾಗುವುದಕ್ಕೆ ಸಹಾಯ ಮಾಡುವನೆಂದು ಕಸ್ತೂರಿಗೆ ಯೋಚನೆ. ಅಲ್ಲದೆ ಅವಳು ದಳಪತಿಯೊಂದಿಗೆ ಹೊರಟು ಹೋಗಬೇಕಾದರೆ ಮಗು ಇಲ್ಲಿರುವುದಕ್ಕಾಗುವುದಿಲ್ಲ. ಆಗ ಹೆಸರಿಗೆ ಮಾತ್ರ ಮಗು ನಾಯಕನಾದರೂ, ತಾನೂ ನಾಯಕನಾಗುವುದಕ್ಕೆ ಅನುಕೂಲ ತನ್ನ ತಮ್ಮನು ಇದಕ್ಕೆ ಒಪ್ಪಿದನೆಂದು ಕೇಳಿ ಗಿರಿಜವ್ವೆ ಒಂದು ನಿಮಿಷ ಯೋಚಿಸಿ "ನೀವು ನನ್ನ ಮೇಲೆ ಮಾಡಿರುವ ಅನುಗ್ರಹಕ್ಕೆ ನಾನು ತಕ್ಕವಳಲ್ಲ. ಆದರೆ ಈಗ ನಾನಿರುವ ಸ್ಥಿತಿಯಲ್ಲಿ

ಅದನ್ನು ಬೇಡವೆಂದು ಹೇಳಲಾರೆ" ಎಂದಳು. ದಳಪತಿಗೂ, ಕಸ್ತೂರಿಗೂ ಇವಳು ಇಷ್ಟು ಸುಲಭವಾಗಿ ಒಪ್ಪಿದಳಲ್ಲಾ ಎಂದು ಆಶ್ಚರ್ಯ. ಅದರ ಜೊತೆಗೆ ಬಹಳ ಸಂತೋಷ. "ನಾನು ಇಷ್ಟರಲ್ಲೇ ಹಿಂದಕ್ಕೆ ಹೋಗಬೇಕಾಗುತ್ತದೆ. ಸಾಧ್ಯವಾದರೆ ಎರಡು ಮೂರು ದಿವಸಗಳಲ್ಲಿ ಎಲ್ಲ ಆಗಬೇಕು". "ಅಪ್ಪಣೆ" ಹೀಗೆಂದು ಗಿರಿಜವ್ವೆ ಅರಮನೆಗೆ ಬಂದಳು. ಮಾರನೆಯ ದಿನ ತಾನು ದಳಪತಿಯನ್ನು ವರಿಸುವುದೆಂದೂ, ತನ್ನ ತಮ್ಮ ಕಸ್ತೂರಿನಾಯಕ ಸದ್ಯಕ್ಕೆ ನಾಯಕನಾಗುವುದು ತನ್ನ ಇಷ್ಟವೆಂದೂ, ತನ್ನ ಮದುವೆಯ ದಿನವೇ ಕಸ್ತೂರಿಗೆ ಗದ್ದಿಗೆಯೇರುವ ಉತ್ಸವ ನಡೆಯಬೇಕೆಂದೂ ಹೇಳಿಕಳುಹಿಸಿ, ಇದೇ ಮಾತನ್ನು ಹಿರಿಯ ರಾಣಿಗೆ ತಿಳಿಸಿದಳು. ಲಕುಮವ್ವೆಗೆ ಇದೇನೆಂದು ತಿಳಿಯದಾಯಿತು. ಅವಳು ಗಿರಿಜವ್ವೆಯನ್ನು ನೋಡಲು ಬಂದಳು. ಗಿರಿಜವ್ವೆ ಅವಳನ್ನು ನೋಡುವುದಿಲ್ಲವೆಂದಳು. ಈ ಮಾತು ಊರಿನಲ್ಲೆಲ್ಲಾ ಹರಡಿ ಕೋಲಾಹಲವುಂಟಾಯಿತು. ಆದರೆ ಯಾರೇನು ಮಾಡಬಹುದು ? ದಳಪತಿಯ ಇಷ್ಟಕ್ಕೆ ಪ್ರತಿ ಹೇಳುವವರಿಲ್ಲ. ಉತ್ತರಕ್ರಿಯೆಗಳೆಲ್ಲ ಮುಗಿದ ಐದು ದಿನದ ಮೇಲೆ ಸಂಬಂಧಕ್ಕೆ ದಿನ ಗೊತ್ತಾಯಿತು. ಅದರ ಹಿಂದಿನ ದಿನ ಗಿರಿಜವ್ವೆ, ಮಾರನೆಯ ದಿನ ತಾನೂ, ತನ್ನ ತಮ್ಮನೂ ಊರಿನವರಿಗೆಲ್ಲ ತಿಳಿಯುವಂತೆ ಕೋಟೆಯ ಗೋಡೆಯ ಮೇಲೆ ಊರ ಸುತ್ತ ಮೆರವಣಿಗೆ ಮಾಡಬೇಕೆಂದೂ, ಅದಾದ ಮೇಲೆ ತಾನು ಸಂಬಂಧವಾಗುವುದು, ಅವನು ಗದ್ದಿಗೆಯನ್ನೇರುವುದು ಎಂದೂ ಹೇಳಿ ಕಳುಹಿಸಿದಳು. ಅವಳು ಬೇಕೆಂಬುದನ್ನು ಯಾರೂ ಬೇಡವೆನ್ನುವಂತಿರಲಿಲ್ಲ. ಅವಳ ಇಷ್ಟದಂತೆ ಎಲ್ಲವೂ ಸಿದ್ಧವಾಯಿತು.

ಮಾರನೆಯ ದಿನ ಗಿರಿಜವ್ವೆ ಬೆಳಗಾಗ ಎದ್ದು ಸ್ನಾನ ಮಾಡಿ ದೇವರ ಪೂಜೆಯನ್ನು ಮುಗಿಸಿಕೊಂಡು ಮಗುವನ್ನೆತ್ತಿಕೊಂಡು ಲಕುಮವ್ವೆಯ ಬಳಿಗೆ ಬಂದು "ಇದು ನನ್ನ ಹಣೆಯಲ್ಲಿ ಬರೆದಿತ್ತು ; ಇಂದಿನಿಂದ ಈ ಮಗು ನನ್ನದಲ್ಲ, ನಿಮ್ಮದು ; ಇದನ್ನು ಕಾಪಾಡುವ ಕೆಲಸ ನಿಮ್ಮದು" ಎಂದು ಹೇಳಿ "ನನಗೆ ಒಳ್ಳೆಯದಾಗುವಂತೆ ಹರಸಿ" ಎಂದು ಕಣ್ಣೀರು ಸುರಿಸಿದಳು. ಲಕುಮವ್ವೆ "ನಿನ್ನ ಬುದ್ಧಿಯೆಲ್ಲಾ ಎಲ್ಲಿ ಹೋಯಿತು ? ಅವನು ಕೇಳಿದರೆ ಬೇಡವೆನ್ನುವುದಕ್ಕೆ ನಿನಗೆ ತಿಳಿಯಲಿಲ್ಲವೇ ? ಈಗಲೂ ಇಷ್ಟವಿಲ್ಲದಿದ್ದರೆ ಬೇಡವೆನ್ನು" ಎಂದಳು. ಗಿರಿಜವ್ವೆ "ಹೇಳಿ ಆಯಿತು. ಇನ್ನು ಆ ಮಾತು ಬೇಡಿ. ಇನ್ನು ನನ್ನ ದಾರಿ ಬೇರೆ" ಎಂದು ಹೇಳಿ ಅರಮನೆಯಿಂದ ಹೊರಟಳು. ಬಾಗಿಲಲ್ಲಿ ಊರ ಪ್ರದಕ್ಷಿಣಕ್ಕೆ ಬೇಕಾದ ಏರ್ಪಾಡೆಲ್ಲಾ ಆಗಿತ್ತು. ಗಿರಿಜವ್ವೆ ಸುಮಂಗಲಿಯಂತೆ ಅಲಂಕಾರವನ್ನು ಮಾಡಿಕೊಂಡಿದ್ದಳು. ಜನರಿಗೆಲ್ಲ ಇದನ್ನು ನೋಡಿ ಅಸಹ್ಯ. ಗಿರಿಜವ್ವೆ ಕಸ್ತೂರಿಗೆ "ನೀನು ಈ ಕಡೆಯಿಂದ ಬಾ, ನಾನು ಆ ಕಡೆಯಿಂದ ಬರುತ್ತೇನೆ. ಕೊತ್ತಲದ ಬಳಿ ಇಬ್ಬರೂ ಸೇರೋಣ" ಎಂದಳು. ಅದರಂತೆ ಉತ್ಸವ ಹೊರಟಿತು.

ನಿಜಗಲ್ಲಿನ ಕೋಟೆ ಬಹಳ ಅಂದವಾದ ಕೋಟೆ. ಭೀಕರವಾದ ಬಂಡೆಯ ಮೇಲೆ ಶತ್ರುವನ್ನು ಧಿಕ್ಕರಿಸುವ ಗೋಡೆಗಳು. ಒಂದೇ ಕಡೆ ಬಾಗಿಲು. ಬಾಗಿಲಿಗೆ ಎದುರಾಗಿ

ಕೋಟೆಯ ಗೋಡೆಯು ಆ ಕಡೆ ಅರ್ಧದಲ್ಲಿ ಒಂದು ಕೊತ್ತಳ. ಅದರಿಂದ ಊರಿನೊಳಕ್ಕೆ ಇಳಿಯುವುದಕ್ಕೆ ಒಂದು ಸೊಗಸಾದ ಮೆಟ್ಟಿಲ ಪಂಕ್ತಿ. ನಾಯಕನು ವಿಹಾರಕ್ಕಾಗಿ ಕೆಲವು ವೇಳೆ ಇಲ್ಲಿಗೆ ಬಂದು ನಿಲ್ಲುವುದುಂಟು. ಇಲ್ಲಿಂದ ನೋಡಿದರೆ ಹತ್ತಾರು ಮೈಲಿಯ ದೂರಕ್ಕೂ ಇರುವ ಹಳ್ಳಿ, ಕೊಳ, ತೋಪು ಎಲ್ಲಾ ಚಿತ್ರಗಳಲ್ಲಿ ಬರೆದಂತೆ ಕಾಣುವುದು. ಹೊರಗಡೆ ಬಂಡೆ ಕೋಟೆಯ ಗೋಡೆಯ ಕೆಳಗೆ ಮುಂದಕ್ಕೆ ಚಾಚಿ ಪೀಠದಂತಾಗಿತ್ತು. ಪೀಠದ ಮೇಲೆ ಕೋಟೆಯ ಗೋಡೆ ಏಳಾಳೆತ್ತರ. ಆ ಬಂಡೆಯ ಆಚೆಗೆ ಅಗಳು. ಪೀಠವು ವಿಶಾಲವಾಗಿ, ಚಪ್ಪಟೆಯಾಗಿ ರಾಜರು ಕುಳ್ಳಿರುವ ಗದ್ದಿಗೆಯಂತೆ ಕಾಣುತ್ತಿದ್ದುದರಿಂದ ಅದಕ್ಕೆ ಜನ ಗದ್ದಿಗೆಯ ಬಂಡೆ ಎಂದು ಹೆಸರಿಟ್ಟಿದ್ದರು. ಹಾಗೆಯೇ ಆ ಕೊತ್ತಲವನ್ನು ಗದ್ದಿಗೆ ಕೊತ್ತಳ ಎನ್ನುವರು.

ಕಸ್ತೂರಿ ಒಂದು ಕಡೆಯಿಂದಲೂ, ತಾನು ಒಂದು ಕಡೆಯಿಂದಲೂ ಕೊತ್ತಳದ ಮೆಟ್ಟಿಲಿಗೆ ಬರುವುದೆಂದು ಏರ್ಪಾಡು ಮಾಡಿ ಗಿರಿಜವ್ವೆ ಒಬ್ಬ ಚೇಟಿಯನ್ನು ಕುರಿತು "ಇಂದು ನನ್ನ ತಮ್ಮನಿಗೆ ಆರತಿ ಮಾಡಬೇಕು, ಒಂದು ತಟ್ಟೆಯಲ್ಲಿ ಆರತಿ ತಂದಿರಿ" ಎಂದು ಹೇಳಿ, ಕೋಟೆಯ ಗೋಡೆಯ ಮೇಲೆ ಹೊರಟಳು. ಊರಿನಲ್ಲಿ ಜನವೆಲ್ಲ "ಇಂಥ ವಿಚಿತ್ರ ಉಂಟೆ. ಇವಳ ಸೊಗಸೇನು, ಈ ಆರತಿಯೇನು ? " ಎಂದು ವಿಸ್ಮಿತರಾಗಿ, ಕೋಟೆಯ ಮೇಲೆ ಎರಡು ಕಡೆಯಿಂದಲೂ ಬರುತ್ತಿರುವ ಮೆರವಣಿಗೆಯ ಗುಂಪನ್ನು ನೋಡುತ್ತಿದ್ದರು. ಒಂದು ಗಳಿಗೆಯ ಹೊತ್ತಿಗೆ ಎರಡು ಗುಂಪೂ ಗದ್ದಿಗೆಯ ಕೊತ್ತಳದ ಹತ್ತಿರ ಬಂದವು. ಗಿರಿಜವ್ವೆ ಅರ್ಧ ನಿಮಿಷ ಮುಂದಾಗಿ ಬಂದಿದ್ದು, ಕಸ್ತೂರಿ ಬಂದಾಗ್ಗೆ ಚೇಟಿಯ ಕೈಯಿಂದ ಆರತಿಯ ತಟ್ಟೆಯನ್ನು ತೆಗೆದುಕೊಂಡು ಮಾತನಾಡದೆ ಹತ್ತಿರಕ್ಕೆ ಬಂದಳು. ಇಬ್ಬರೂ ಕೊತ್ತಳದ ಮಧ್ಯೆ ನಿಂತಿದ್ದರು. ಇತ್ತ ಒಂದಿಪ್ಪತ್ತು ಜನ, ಅತ್ತ ಒಂದಿಪ್ಪತ್ತು ಜನ ಸದ್ದು ಮಾಡದೆ ನಿಂತಿದ್ದಾರೆ. ಗಿರಿಜವ್ವೆ ಎಂದಿನಂತೆ ಗಂಭೀರಭಾವದಲ್ಲಿ ತಮ್ಮನಿಗೆ ಆರತಿಯನ್ನೆತ್ತಿ ತಟ್ಟೆಯನ್ನು ಚೇಟಿಯ ಕೈಗೆ ಕೊಟ್ಟು, ಸ್ವಲ್ಪ ನಗುತ್ತಾ ತಮ್ಮನನ್ನು ಕುರಿತು ಮೃದುವಾದ ನುಡಿಯಿಂದ, "ಕಸ್ತೂರಿ, ನಿನ್ನಿಂದ ನನಗೆ ಈ ಪದವಿ ಬಂತು. ನಿನ್ನನ್ನು ನಾನು ಮರೆಯ ಬಾರದು. ನಿನಗೂ ಗದ್ದಿಗೆಯ ಮೇಲೆ ಆಸೆ" ಎಂದು ಹೇಳಿ, ಉತ್ತರ ಕ್ಷಣದಲ್ಲಿ ಕರ್ಕಶವಾದ ಧ್ವನಿಯಿಂದ "ನನ್ನ ನಿನ್ನಿಂದ ರಾಮರಸನ ಮನೆ ಕೆಟ್ಟಿತು. ನಮ್ಮನ್ನು ಹೆತ್ತವರಿಗೆ ಅಪಕೀರ್ತಿ ಬಂತು. ಕಸ್ತೂರಿ, ನಾವು ಬದುಕಬಾರದು" ಎಂದು ಕೂಗಿ, ಅವನನ್ನು ಭದ್ರವಾಗಿ ಅಪ್ಪಿ ಕೊಂಡು ಕೊತ್ತಳದಿಂದ ಗೋಡೆಯ ಹೊರಕ್ಕೆ ಧುಮುಕಿಬಿಟ್ಟಳು.

ಜನರು "ಹಾ" ಎನ್ನುವ ಮೊದಲು ಅಕ್ಕತಮ್ಮಂದಿರು ಗದ್ದಿಗೆಯ ಬಂಡೆಯನ್ನು ಸೇರಿದ್ದರು. ಆ ಎತ್ತರದಿಂದ ಬಂಡೆಯ ಮೇಲೆ ಬಿದ್ದವರಿಗೆ ಉಳಿವಿಲ್ಲ. ಎರಡು ಕ್ಷಣದಲ್ಲಿ ಅವರಿಬ್ಬರ ದೇಹಗಳೂ ಜೀವವನ್ನಳಿದು ಬಂಡೆಯಿಂದ ನೆಲಕ್ಕೆ ಉರುಳಿದ್ದುವು.

ರಾಮರಸನ ಮಗನನ್ನು ನಿಜಗಲ್ಲಿನ ನಾಯಕನಾಗಿ ಮಾಡಿದರು. ಲಕುಮವ್ವೆ ಅವನು ಮರಾಟೆಯವರ ವಶವರ್ತಿಯಾಗಿರುವುದಾಗಿ ಭರವಸೆ ಕೊಟ್ಟು, ರಾಜ್ಯದ ಆಡಳಿತವನ್ನು ಊರ

ಮುಖಂಡರ ಸಹಾಯದಿಂದ ನಡೆಯಿಸಿದಳು. ಊರಿಗೆ ಉಪದ್ರವದಂತೆ ಬಂದಿದ್ದ ಕಸ್ತೂರಿಯನ್ನು ಕೊನೆಗಾಣಿಸಿದ ಕಿರಿಯರಾಣಿಯನ್ನು ಜನರು ಪ್ರೀತಿಯಿಂದ ನೆನೆದು ಬಹು ವರ್ಷ ಊರ ದೇವಿಯೆಂದು ಪೂಜಿಸಿ, ಅವಳ ಹೆಸರಲ್ಲಿ ವರ್ಷವರ್ಷವೂ ಹಬ್ಬವನ್ನು ಮಾಡಿದರು. ಈಗ ಆ ಹಬ್ಬ ನಡೆಯುತ್ತಿಲ್ಲ. ಊರು ಪಾಳೆಯಗಾರರನ್ನು ಮರೆತಿದೆ. ಆದರೆ ನಿಜಗಲ್ಲಿಗೆ ಹೋದವರಿಗೆ ಊರ ಜನ ಅಲ್ಲಿಯ ರಾಣಿಯ ಈ ಕಥೆಯನ್ನು ಹೇಳುವರು ; ಆ ವೀರರಮಣಿಯ ಆತ್ಮಯಜ್ಞದಿಂದ ಪವಿತ್ರವಾದ ಆ ಬಂಡೆಯನ್ನು ತೋರಿಸುವರು.

## ಟಿಪ್ಪಣಿ

### ಕವಿ ಮತ್ತು ಕೃತಿ

'ನಿಜಗಲ್ಲಿನ ರಾಣಿ 'ಯನ್ನು ಬರೆದಿರುವವರು ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರು. 'ಶ್ರೀನಿವಾಸ' ಎಂಬುದು ಅವರ ಕಾವ್ಯನಾಮ. ಅವರು ಅನೇಕ ಸಣ್ಣಕತೆ, ಭಾವಗೀತೆ, ಕಾದಂಬರಿ, ನಾಟಕ, ವಿಮರ್ಶಾಗ್ರಂಥ—ಇತ್ಯಾದಿಗಳನ್ನು ಬರೆದಿದ್ದಾರೆ. ಅವರು ಅತ್ಯಂತ ಜನಪ್ರಿಯರಾಗಿರುವುದು ತಮ್ಮ ಸಣ್ಣ ಕತೆಗಳಿಂದ. ಅವರು ಹುಟ್ಟು ಕತೆಗಾರರು. ಕತೆಯನ್ನು ಆಸಕ್ತಿ ಕೆಡದಂತೆ ಹೇಳುವ ಕಲೆ ಅವರಿಗೆ ಸಿದ್ಧಿಸಿದೆ. ಅವರ ನೂರಾರು ಕತೆಗಳಲ್ಲಿ ಯಾವುದನ್ನು ತೆಗೆದುಕೊಂಡರೂ ಈ ಮಾತಿನ ಸತ್ಯತೆ ಗೋಚರವಾಗುತ್ತದೆ. ಕನ್ನಡದಲ್ಲಿ ಸಣ್ಣ ಕತೆಗಳನ್ನು ಬಿತ್ತಿ ಬೆಳೆಸಿ, ಪ್ರಭಾವಯುತವಾಗಿ ಮಾಡಿದ ಕೀರ್ತಿ ಅವರಿಗೆ ಸಲ್ಲುತ್ತದೆ.

ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರು ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಸರ್ಕಾರದ ಉನ್ನತಾಧಿಕಾರಿಗಳಾಗಿದ್ದವರು. ಕನ್ನಡವೆಂದರೆ ಜನ ಮೂಗು ಮುರಿಯುತ್ತಿದ್ದ ಕಾಲದಲ್ಲಿ, ಇವರು ಅಪಾರವಾದ ಕನ್ನಡ ಅಭಿಮಾನದಿಂದ ಸಾಹಿತ್ಯರಂಗದಲ್ಲಿ ಸೇವೆಯನ್ನು ಸಲ್ಲಿಸಿ, ಹೊಸಗನ್ನಡ ಸಾಹಿತ್ಯವನ್ನು ತಮ್ಮ ಬರವಣಿಗೆಗಳಿಂದ ಶ್ರೀಮಂತಗೊಳಿಸಿದವರು. ಬಹು ದೊಡ್ಡಸಾಹಿತಿಗಳೂ ಸುಸಂಸ್ಕೃತರೂ ಆದ ಇವರು ಕೇಂದ್ರ ಸಾಹಿತ್ಯ ಅಕೆಡೆಮಿಯ ಬಹುಮಾನ ವಿಜೇತರು.

### ಕಠಿಣ ಪದಗಳ ಅರ್ಥ

ಪಾಳೆಯಪಟ್ಟು—ಸೈನ್ಯ ಇಡುವ ಠಾಣ್ಯ. ಸಾಮಂತ—ಆಶ್ರಿತ. ಗದ್ದಿಗೆ—ಸಿಂಹಾಸನ. ನಿರೂಪ—ಆಜ್ಞೆ ; ಆದೇಶ. ಬಿನ್ನಹ—ಅರಿಕೆ. ಅಳಿ—ನಾಶವಾಗು. ಅಸಡ್ಡೆ—ಉದಾಸೀನ ; ಅಶ್ರದ್ಧೆ (ತ್ಸ). ಹರಿಸು—ತೀರಿಸು. ತೊತ್ತು—ದಾಸಿ. ಶಂಕೆ—ಸಂಶಯ. ಅಂತಸ್ತಾಪ—ಒಳಗುದಿ. ಕೂಳು—ಅನ್ನ. ಸ್ವಸ್ಥಚಿತ್ತ—ಸಮಾಧಾನಹೊಂದಿದ ಮನಸ್ಸು. ದುರ್ಗಮ—ಪ್ರವೇಶಿಸಲು ಅಸಾಧ್ಯವಾದ. ಸಗ್ಗು—ಜಗ್ಗು ; ವಶವಾಗು. ವದಂತಿ—ಸಮಾಚಾರ. ಅರಗುವರ—ಅರಸನ ಮಗ ; ರಾಜಕುಮಾರ. ಮೇರೆ—ಎಲ್ಲೆ. ಕಿಂಕರ—ದಾಸ. ಕುಲಸ್ತ್ರೀ—ಉತ್ತಮ

ಕೋಟೆಯ ಗೋಡೆಯ ಆ ಕಡೆ ಅರ್ಧದಲ್ಲಿ ಒಂದು ಕೊತ್ತಳ. ಅದರಿಂದ ಊರಿನೊಳಕ್ಕೆ ಇಳಿಯುವುದಕ್ಕೆ ಒಂದು ಸೊಗಸಾದ ಮೆಟ್ಟಿಲ ಪಂಕ್ತಿ. ನಾಯಕನು ವಿಹಾರಕ್ಕಾಗಿ ಕೆಲವು ವೇಳೆ ಇಲ್ಲಿಗೆ ಬಂದು ನಿಲ್ಲುವುದುಂಟು. ಇಲ್ಲಿಂದ ನೋಡಿದರೆ ಹತ್ತಾರು ಮೈಲಿಯ ದೂರಕ್ಕೂ ಇರುವ ಹಳ್ಳಿ, ಕೊಳ, ತೋಪು ಎಲ್ಲಾ ಚಿತ್ರಗಳಲ್ಲಿ ಬರೆದಂತೆ ಕಾಣುವುದು. ಹೊರಗಡೆ ಬಂಡೆ ಕೋಟೆಯ ಗೋಡೆಯ ಕೆಳಗೆ ಮುಂದಕ್ಕೆ ಚಾಚಿ ಪೀಠದಂತಾಗಿತ್ತು. ಪೀಠದ ಮೇಲೆ ಕೋಟೆಯ ಗೋಡೆ ಏಳಾಳೆತ್ತರ. ಆ ಬಂಡೆಯ ಆಚೆಗೆ ಅಗಳು. ಪೀಠವು ವಿಶಾಲವಾಗಿ, ಚಪ್ಪಟೆಯಾಗಿ ರಾಜರು ಕುಳ್ಳಿರುವ ಗದ್ದಿಗೆಯಂತೆ ಕಾಣುತ್ತಿದ್ದುದರಿಂದ ಅದಕ್ಕೆ ಜನ ಗದ್ದಿಗೆಯ ಬಂಡೆ ಎಂದು ಹೆಸರಿಟ್ಟಿದ್ದರು. ಹಾಗೆಯೇ ಆ ಕೊತ್ತಲವನ್ನು ಗದ್ದಿಗೆ ಕೊತ್ತಳ ಎನ್ನುವರು.

ಕಸ್ತೂರಿ ಒಂದು ಕಡೆಯಿಂದಲೂ, ತಾನು ಒಂದು ಕಡೆಯಿಂದಲೂ ಕೊತ್ತಳದ ಮೆಟ್ಟಲಿಗೆ ಬರುವುದೆಂದು ಏರ್ಪಾಡು ಮಾಡಿ ಗಿರಿಜವ್ವೆ ಒಬ್ಬ ಚೇಟಿಯನ್ನು ಕುರಿತು "ಇಂದು ನನ್ನ ತಮ್ಮನಿಗೆ ಆರತಿ ಮಾಡಬೇಕು, ಒಂದು ತಟ್ಟೆಯಲ್ಲಿ ಆರತಿ ತಂದಿರಿ" ಎಂದು ಹೇಳಿ, ಕೋಟೆಯ ಗೋಡೆಯ ಮೇಲೆ ಹೊರಟಳು. ಊರಿನಲ್ಲಿ ಜನವೆಲ್ಲ "ಇಂಥ ವಿಚಿತ್ರ ಉಂಟೆ, ಇವಳ ಸೊಗಸೇನು, ಈ ಆರತಿಯೇನು ?" ಎಂದು ವಿಸ್ಮಿತರಾಗಿ. ಕೋಟೆಯ ಮೇಲೆ ಎರಡು ಕಡೆಯಿಂದಲೂ ಬರುತ್ತಿರುವ ಮೆರವಣಿಗೆಯ ಗುಂಪನ್ನು ನೋಡುತ್ತಿದ್ದರು. ಒಂದು ಗಳಿಗೆಯ ಹೊತ್ತಿಗೆ ಎರಡು ಗುಂಪೂ ಗದ್ದಿಗೆಯ ಕೊತ್ತಳದ ಹತ್ತಿರ ಬಂದವು. ಗಿರಿಜವ್ವೆ ಅರ್ಧ ನಿಮಿಷ ಮುಂದಾಗಿ ಬಂದಿದ್ದು, ಕಸ್ತೂರಿ ಬಂದಾಗ್ಗೆ ಚೇಟಿಯ ಕೈಯಿಂದ ಆರತಿಯ ತಟ್ಟೆಯನ್ನು ತೆಗೆದುಕೊಂಡು ಮಾತನಾಡದೆ ಹತ್ತಿರಕ್ಕೆ ಬಂದಳು. ಇಬ್ಬರೂ ಕೊತ್ತಳದ ಮಧ್ಯೆ ನಿಂತಿದ್ದರು. ಇತ್ತ ಒಂದಿಪ್ಪತ್ತು ಜನ, ಅತ್ತ ಒಂದಿಪ್ಪತ್ತು ಜನ ಸದ್ದು ಮಾಡದೆ ನಿಂತಿದ್ದಾರೆ. ಗಿರಿಜವ್ವೆ ಎಂದಿನಂತೆ ಗಂಭೀರಭಾವದಲ್ಲಿ ತಮ್ಮನಿಗೆ ಆರತಿಯನ್ನೆತ್ತಿ ತಟ್ಟೆಯನ್ನು ಚೇಟಿಯ ಕೈಗೆ ಕೊಟ್ಟು, ಸ್ವಲ್ಪ ನಗುತ್ತಾ ತಮ್ಮನನ್ನು ಕುರಿತು ಮೃದುವಾದ ನುಡಿಯಿಂದ, "ಕಸ್ತೂರಿ, ನಿನ್ನಿಂದ ನನಗೆ ಈ ಪದವಿ ಬಂತು. ನಿನ್ನನ್ನು ನಾನು ಮರೆಯ ಬಾರದು. ನಿನಗೂ ಗದ್ದಿಗೆಯ ಮೇಲೆ ಆಸೆ" ಎಂದು ಹೇಳಿ, ಉತ್ತರ ಕ್ಷಣದಲ್ಲಿ ಕರ್ಕಶವಾದ ಧ್ವನಿಯಿಂದ "ನನ್ನ ನಿನ್ನಿಂದ ರಾಮರಸನ ಮನೆ ಕೆಟ್ಟಿತು. ನಮ್ಮನ್ನು ಹೆತ್ತವರಿಗೆ ಅಪಕೀರ್ತಿ ಬಂತು. ಕಸ್ತೂರಿ, ನಾವು ಬದುಕಬಾರದು" ಎಂದು ಕೂಗಿ, ಅವನನ್ನು ಭದ್ರವಾಗಿ ಅಪ್ಪಿ ಕೊಂಡು ಕೊತ್ತಳದಿಂದ ಗೋಡೆಯ ಹೊರಕ್ಕೆ ಧುಮುಕಿಬಿಟ್ಟಳು.

ಜನರು "ಹಾ" ಎನ್ನುವ ಮೊದಲು ಅಕ್ಕತಮ್ಮಂದಿರು ಗದ್ದಿಗೆಯ ಬಂಡೆಯನ್ನು ಸೇರಿದ್ದರು. ಆ ಎತ್ತರದಿಂದ ಬಂಡೆಯ ಮೇಲೆ ಬಿದ್ದವರಿಗೆ ಉಳಿವಿಲ್ಲ. ಎರಡು ಕ್ಷಣದಲ್ಲಿ ಅವರಿಬ್ಬರ ದೇಹಗಳೂ ಜೀವವನ್ನಳಿದು ಬಂಡೆಯಿಂದ ನೆಲಕ್ಕೆ ಉರುಳಿದ್ದುವು.

ರಾಮರಸನ ಮಗನನ್ನು ನಿಜಗಲ್ಲಿನ ನಾಯಕನಾಗಿ ಮಾಡಿದರು. ಲಕುಮವ್ವೆ ಅವನ ಮರಾಟೆಯವರ ವಶವರ್ತಿಯಾಗಿರುವುದಾಗಿ ಭರವಸೆ ಕೊಟ್ಟು, ರಾಜ್ಯದ ಆಡಳಿತವನ್ನು ಊರ

ಮುಖಂಡರ ಸಹಾಯದಿಂದ ನಡೆಯಿಸಿದಳು. ಊರಿಗೆ ಉಪದ್ರವದಂತೆ ಬಂದಿದ್ದ ಕಸ್ತೂರಿಯನ್ನು ಕೊನೆಗಾಣಿಸಿದ ಕಿರಿಯರಾಣಿಯನ್ನು ಜನರು ಪ್ರೀತಿಯಿಂದ ನೆನೆದು ಬಹು ವರ್ಷ ಊರ ದೇವಿಯೆಂದು ಪೂಜಿಸಿ, ಅವಳ ಹೆಸರಲ್ಲಿ ವರ್ಷವರ್ಷವೂ ಹಬ್ಬವನ್ನು ಮಾಡಿದರು. ಈಗ ಆ ಹಬ್ಬ ನಡೆಯುತ್ತಿಲ್ಲ. ಊರು ಪಾಳೆಯಗಾರರನ್ನು ಮರೆತಿದೆ. ಆದರೆ ನಿಜಗಲ್ಲಿಗೆ ಹೋದವರಿಗೆ ಊರ ಜನ ಅಲ್ಲಿಯ ರಾಣಿಯ ಈ ಕಥೆಯನ್ನು ಹೇಳುವರು; ಆ ವೀರರಮಣಿಯ ಆತ್ಮಯಜ್ಞದಿಂದ ಪವಿತ್ರವಾದ ಆ ಬಂಡೆಯನ್ನು ತೋರಿಸುವರು.

## ಟಿಪ್ಪಣಿ

### ಕವಿ ಮತ್ತು ಕೃತಿ

'ನಿಜಗಲ್ಲಿನ ರಾಣಿ'ಯನ್ನು ಬರೆದಿರುವವರು ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರು. 'ಶ್ರೀನಿವಾಸ' ಎಂಬುದು ಅವರ ಕಾವ್ಯನಾಮ. ಅವರು ಅನೇಕ ಸಣ್ಣಕತೆ, ಭಾವಗೀತೆ, ಕಾದಂಬರಿ, ನಾಟಕ, ವಿಮರ್ಶಾಗ್ರಂಥ—ಇತ್ಯಾದಿಗಳನ್ನು ಬರೆದಿದ್ದಾರೆ. ಅವರು ಅತ್ಯಂತ ಜನಪ್ರಿಯರಾಗಿರುವುದು ತಮ್ಮ ಸಣ್ಣ ಕತೆಗಳಿಂದ. ಅವರು ಹುಟ್ಟು ಕತೆಗಾರರು. ಕತೆಯನ್ನು ಆಸಕ್ತಿ ಕೆಡದಂತೆ ಹೇಳುವ ಕಲೆ ಅವರಿಗೆ ಸಿದ್ಧಿಸಿದೆ. ಅವರ ನೂರಾರು ಕತೆಗಳಲ್ಲಿ ಯಾವುದನ್ನು ತೆಗೆದುಕೊಂಡರೂ ಈ ಮಾತಿನ ಸತ್ಯತೆ ಗೋಚರವಾಗುತ್ತದೆ. ಕನ್ನಡದಲ್ಲಿ ಸಣ್ಣ ಕತೆಗಳನ್ನು ಬಿತ್ತಿ ಬೆಳೆಸಿ, ಪ್ರಭಾವಯುತವಾಗಿ ಮಾಡಿದ ಕೀರ್ತಿ ಅವರಿಗೆ ಸಲ್ಲುತ್ತದೆ.

ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರು ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಸರ್ಕಾರದ ಉನ್ನತಾಧಿಕಾರಿಗಳಾಗಿದ್ದವರು. ಕನ್ನಡವೆಂದರೆ ಜನ ಮೂಗು ಮುರಿಯುತ್ತಿದ್ದ ಕಾಲದಲ್ಲಿ, ಇವರು ಅಪಾರವಾದ ಕನ್ನಡ ಅಭಿಮಾನದಿಂದ ಸಾಹಿತ್ಯರಂಗದಲ್ಲಿ ಸೇವೆಯನ್ನು ಸಲ್ಲಿಸಿ, ಹೊಸಗನ್ನಡ ಸಾಹಿತ್ಯವನ್ನು ತಮ್ಮ ಬರೆವಣಿಗೆಗಳಿಂದ ಶ್ರೀಮಂತಗೊಳಿಸಿದವರು. ಬಹು ದೊಡ್ಡಸಾಹಿತಿಗಳೂ ಸುಸಂಸ್ಕೃತರೂ ಆದ ಇವರು ಕೇಂದ್ರ ಸಾಹಿತ್ಯ ಅಕೆಡೆಮಿಯ ಬಹುಮಾನ ವಿಜೇತರು.

### ಕಠಿಣ ಪದಗಳ ಅರ್ಥ

ಪಾಳೆಯಪಟ್ಟು—ಸೈನ್ಯ ಇಡುವ ಠಾಣ್ಯ. ಸಾಮಂತ—ಆಶ್ರಿತ. ಗದ್ದಿಗೆ—ಸಿಂಹಾಸನ. ನಿರೂಪ—ಆಜ್ಞೆ; ಆದೇಶ. ಬಿನ್ನಹ—ಅರಿಕೆ. ಅಳಿ—ನಾಶವಾಗು. ಅಸಡ್ಡೆ—ಉದಾಸೀನ; ಅಶ್ರದ್ಧೆ (ತ್ಸ). ಹರಿಸು—ತೀರಿಸು. ತೊತ್ತು—ದಾಸಿ. ಶಂಕೆ—ಸಂಶಯ. ಅಂತಸ್ತಾಪ—ಒಳಗುದಿ. ಕೂಳು—ಅನ್ನ. ಸ್ವಸ್ಥಚಿತ್ತ—ಸಮಾಧಾನಹೊಂದಿದ ಮನಸ್ಸು. ದುರ್ಗಮ—ಪ್ರವೇಶಿಸಲು ಅಸಾಧ್ಯವಾದ. ಸಗ್ಗು—ಜಗ್ಗು; ವಶವಾಗು. ವದಂತಿ—ಸಮಾಚಾರ. ಅರಗುವರ—ಅರಸನ ಮಗ; ರಾಜಕುಮಾರ. ಮೇರೆ—ಎಲ್ಲೆ. ಕಿಂಕರ—ದಾಸ. ಕುಲಸ್ತ್ರೀ—ಉತ್ತಮ

ವಂಶದ ಹೆಂಗಸು. ಆಕ್ರೋಶ—ಕೋಪ. ಸಂಚು—ವಂಚನೆಯಿಂದ ಕೂಡಿದ ಉಪಾಯ. ಬೇಹು—ಕಾವಲು. ಕಡೆಹಾಯಿ—ತಪ್ಪಿಸಿಕೊಳ್ಳು ; ಪಾರಾಗು ; ದಾಟು. ಪಹರೆ—ಕಾವಲು. ಊಳಿಗದವರು—ಕೆಲಸಮಾಡುವವರು. ಕಿಲ್ಲೆ—ಕೋಟೆ. ಬಾಧ್ಯರು—ಹಕ್ಕುದಾರರು. ಕಳೇಬರ—ಹೆಣ ; ಶವ. ಸಹಗಮನ—ಸತ್ತ ಗಂಡನೊಡನೆ ಹೆಂಡತಿಯು ಅಗ್ನಿಪ್ರವೇಶಮಾಡುವುದು. ಸುಮಂಗಲಿ—ಮುತ್ತೈದೆ. ಕೊತ್ತಳ—ಕೋಟೆಯ ಬುರುಜು. ಅಗಳು—ಕೋಟೆಯ ಸುತ್ತಲೂ ತೋಡಿರುವ ಕಂದಕ. ವಿಸ್ಮಿತರಾಗಿ—ಆಶ್ಚರ್ಯದಿಂದ ಕೂಡಿದವರಾಗಿ.

ಪ್ರಶ್ನೆಗಳು :

೧. ರಾಮರಸನಾಯಕನು ಮಾಡಿಸಿದ ಧರ್ಮಕಾರ್ಯಗಳಾವುವು ? ಅವನ್ನು ಏಕೆ ಮಾಡಿಸಿದನು ?
೨. ನಾಯಕನು ಎರಡನೆಯ ಮದುವೆಯಾಗುವುದಕ್ಕಾಗಿ ಲಕುಮವ್ವೆ ಮಾಡಿದ ಉಪಾಯವೇನು ?
೩. ತನ್ನ ಸಂಬಂಧಿಗಳ ಬೋಧನೆಗೆ ಗಿರಿಜವ್ವೆ ಹೇಳಿದ ಉತ್ತರವೇನು ?
೪. ನಾಯಕನು ಕಸ್ತೂರಿಯನ್ನು ಥೀಗುಟ್ಟಲು ಕಾರಣವೇನು ?
೫. ಕಸ್ತೂರಿಯ ಮನಸ್ಸಿನಲ್ಲಿ ಹುಟ್ಟಿದ ದುರಾಲೋಚನೆಯೇನು ?
೬. ಮರಾಟರ ಸೈನ್ಯ ಕೋಟೆಯೊಳಕ್ಕೆ ಹೇಗೆ ನುಗ್ಗಿತು ?
೭. ಗಿರಿಜವ್ವೆ ತಮ್ಮನೊಡನೆ ಆತ್ಮಾರ್ಪಣೆ ಮಾಡಿಕೊಂಡ ಉದ್ದೇಶವೇನು ?
೮. ಗಿರಿಜವ್ವೆ ಕಸ್ತೂರಿಯೊಡನೆ ಹೇಗೆ ಆತ್ಮಾರ್ಪಣೆ ಮಾಡಿಕೊಂಡಳು ? ವಿವರಿಸಿ.

ಇವುಗಳನ್ನು ಸಂದರ್ಭಸಹಿತ ಸ್ಪಷ್ಟೀಕರಿಸಿ :

೧. ' ನನಗೆ ಫಲ ಇಲ್ಲದಿದ್ದರೆ ಕುಲ ಏತಕ್ಕೆ ಅಳಿಯಬೇಕು ?'
೨. ' ನಾನು ಆ ಸಾಲವನ್ನೇ ಹರಿಸಬೇಕಾಗಿದೆ.'
೩. " ಊರು ಗೆದ್ದ ಮೇಲೆ ನೀವೇ ಕರ್ತರು ; ಎಲ್ಲ ಸರಿಯಾಗಿ ನಡೆಸುವುದಕ್ಕೆ ನೀವೇ ಬಾಧ್ಯರು."
೪. " ಅದು ನಿಮ್ಮಿಂದ ಆಗುವುದಲ್ಲದೆ ನನ್ನಿಂದ ಆಗುತ್ತದೆಯೇ ?"
೫. " ನೀವು ಹೋಗುವುದಾದರೆ ನಾನು ಹೋಗುವುದು ಖಂಡಿತ. "
೬. " ಇದು ನನ್ನ ಹಣೆಯಲ್ಲಿ ಬರೆದಿತ್ತು; ಇಂದಿನಿಂದ ಈ ಮಗು ನನ್ನದಲ್ಲ, ನಿಮ್ಮದು."
೭. " ನಿನಗೂ ಗದ್ದಿಗೆಯ ಮೇಲೆ ಆಸೆ. "

ಈ ಮಾತುಗಳನ್ನು ಸ್ವಂತ ವಾಕ್ಯಗಳಲ್ಲಿ ಬರೆಯಿರಿ :

ವದಂತಿ, ಹಬ್ಬಿಸು, ಕೋಲಾಹಲ, ಎರಡೆಣಿಸು, ಥೀಗುಟ್ಟು.

ಇವುಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ :

ಸೋಲು, ಪ್ರತ್ಯಕ್ಷ, ಶಬ್ದ, ಆಸೆ, ಕೀರ್ತಿ,



* * * *

# ಘೋಷಯಾತ್ರೆ

—ಎ. ಆರ್. ಕೃಷ್ಣಶಾಸ್ತ್ರೀ

ಪಾಂಡವರು ದ್ವೈತವನದಲ್ಲಿದ್ದಾಗ ಅಲ್ಲಿಂದ ಹಸ್ತಿನಾವತಿಗೆ ಬಂದ ಬ್ರಾಹ್ಮಣನೊಬ್ಬನು ಧೃತರಾಷ್ಟ್ರನಿಗೆ ಪಾಂಡವರ ಸ್ಥಿತಿಗತಿಗಳನ್ನು ವಿವರಿಸಿದನು. "ಅವರು ಗಾಳಿ ಮಳೆ ಬಿಸಿಲುಗಳಿಗೆ ಸಿಕ್ಕಿ ತುಂಬ ಬಡವಾಗಿದ್ದಾರೆ. ಕೃಷ್ಣೆಯು ವೀರರಾದ ಗಂಡಂದಿರಿದ್ದರೂ ಅನಾಥೆಯಂತೆ ಬಹು ಕ್ಲೇಶಗಳಿಗೆ ಸಿಕ್ಕಿ ಬಳಲಿದ್ದಾಳೆ!" ಎಂದನು. ಧೃತರಾಷ್ಟ್ರನಿಗೆ ಅದನ್ನು ಕೇಳಿ ಮನಸ್ಸು ಮರುಗಿತು. ಅವರಿಗೆ ಆ ಕಷ್ಟವೆಲ್ಲಾ ಉಂಟಾದದ್ದು ತನ್ನಿಂದಲೇ ಎಂದುಕೊಂಡು, "ಮನುಷ್ಯನು ಒಳ್ಳೆಯದೋ, ಕೆಟ್ಟದ್ದೋ ಕರ್ಮವನ್ನು ಮಾಡಿದ ಮೇಲೆ ಅದರ ಫಲವನ್ನು ಅನುಭವಿಸಿಯೇ ತೀರಬೇಕು. ನೆಲವನ್ನು ಉತ್ತು ಬಿತ್ತಿ ಮಳೆಯೂ ಬಂದರೆ ಪಯಿರಾಗದೇ ಇರುತ್ತದೆಯೇ? ಬಸಿರಾದವಳು ಹೆರದೆ ಇರುತ್ತಾಳೆಯೇ? ಫಲಪ್ರಾಪ್ತಿಕಾಲ ಬಂದರೆ ಅದನ್ನು ಅಡ್ಡಿಪಡಿಸುವುದಕ್ಕಾಗುತ್ತದೆಯೇ? ಅರ್ಜುನನು ಕಾಡಿನಲ್ಲಿದ್ದರೂ, ಅಲ್ಲಿಂದ ಇಂದ್ರಲೋಕಕ್ಕೆ ಹೋಗಿ ನಾಲ್ಕು ವಿಧವಾದ ಅಸ್ತ್ರಗಳನ್ನು ಸಂಪಾದಿಸಿಕೊಂಡು ಮನುಷ್ಯ ಲೋಕಕ್ಕೆ ಹಿಂದಿರುಗಿ ಬಂದ! ಸಶರೀರನಾಗಿ ಸ್ವರ್ಗಕ್ಕೆ ಹೋಗಿ ಯಾವನು ಹಿಂದಕ್ಕೆ ಬರಲಿಷ್ಟಪಡುತ್ತಾನೆ? ಕಾಲವಶರಾಗಿ ಸಾಯಲಿರುವ ಕೌರವರನ್ನು ನೋಡಬೇಕೆಂದಲ್ಲವೇ ಅವನು ಬಂದದ್ದು? ಅರ್ಜುನ, ಅವನ ಗಾಂಡೀವ, ಅವನ ಅಸ್ತ್ರಗಳು ಇವುಗಳ ತೇಜಸ್ಸನ್ನು ಯಾರು ಸಹಿಸಿಕೊಂಡಾರು?" ಎಂದು ವ್ಯಥೆಪಟ್ಟನು. ಅವನ ಆ ಮಾತನ್ನು ಕೇಳುತ್ತಿದ್ದ ಕರ್ಣನು ಶಕುನಿಯೊಡನೆ ದುರ್ಯೋಧನನಲ್ಲಿಗೆ ಹೋಗಿ, "ಮಹಾರಾಜ! ನಿನ್ನ ಶೌರ್ಯದಿಂದ ಪಾಂಡವರನ್ನು ಕಾಡಿಗೆ ಅಟ್ಟಿ ಭೂಮಂಡಲದಲ್ಲಿ ಏಕಚ್ಛತ್ರಾಧಿಪತ್ಯ ಮಾಡುತ್ತಿದ್ದೀಯೆ. ಎಲ್ಲ ದಿಕ್ಕಿನ ರಾಜರೂ ನಿನಗೆ ಕಪ್ಪವನ್ನು ಸಲ್ಲಿಸುತ್ತಿದ್ದಾರೆ; 'ಏನಪ್ಪಣೆ?' ಎಂದು ನಿನ್ನಾಜ್ಞೆಯನ್ನು ಎದುರುನೋಡುತ್ತಿದ್ದಾರೆ. ನಿನ್ನನ್ನು ಹಿಂದೆ ಲಕ್ಷ್ಯಮಾಡದೆ ಇದ್ದ ಪಾಂಡವರು ಇಂದು ಹೀನಸ್ಥಿತಿಗೆ ಬಂದು ಕಾಡಿನಲ್ಲಿ ಅಲೆಯುತ್ತಿದ್ದಾರೆ. ಅವರು ದ್ವೈತವನದಲ್ಲಿರುವ ಸರೋವರದ ಹತ್ತಿರ ವಾಸವಾಗಿದ್ದಾರಂತೆ. ಅಲ್ಲಿಗೆ ನಿನ್ನ ಸಕಲೈಶ್ವರ್ಯ ವೈಭವಗಳೊಡನೆ ಹೋಗಿ ಅವರನ್ನು, ಸೂರ್ಯನು ಕಣ್ಣು ಕುಕ್ಕುವಂತೆ, ಬೆರಗುಗೊಳಿಸು. ರಾಜ್ಯಭ್ರಷ್ಟರೂ, ನಿರ್ಭಾಗ್ಯರೂ ಆದ ಅವರು

ರಾಜ್ಯಸಂಪನ್ನನೂ, ಸಂಪದ್ಯುಕ್ತನೂ ಆದ ನಿನ್ನನ್ನು ನೋಡಲಿ! ಐಶ್ವರ್ಯವಿದ್ದದ್ದಕ್ಕೆ ನಮ್ಮ ಸ್ನೇಹಿತರೂ ಶತ್ರುಗಳೂ ಅದನ್ನು ನೋಡಿದರೆ ಸಾರ್ಥಕ! ಬೆಟ್ಟದ ಮೇಲಿರುವವನು ನೆಲದ ಮೇಲೆ ನಿಂತಿರುವವರನ್ನು ನೋಡುವುದಕ್ಕಿಂತ ಸಂತೋಷ ಇನ್ನು ಉಂಟೇ? ನಮ್ಮ ಶತ್ರುಗಳ ಕಷ್ಟವನ್ನು ನೋಡುವುದರಿಂದ ಆಗುವ ಸಂತೋಷ ಪುತ್ರಪ್ರಾಪ್ತಿಯಿಂದಾಗಲಿ, ರಾಜ್ಯಪ್ರಾಪ್ತಿ ಯಿಂದಾಗಲಿ ಆಗುವುದಿಲ್ಲ! ಅರ್ಜುನನು ನಾರುಮಡಿಯನ್ನೂ, ಕೃಷ್ಣಾಜಿನವನ್ನೂ ಧರಿಸಿ ಆಶ್ರಮ ದಲ್ಲಿ ವಾಸಿಸುತ್ತಿರುವುದನ್ನು ನೋಡುವುದಕ್ಕಿಂತ ಹೆಚ್ಚಿನ ಸುಖವಿದ್ದೀತೇ? ಅದರಂತೆಯೇ ನಿನ್ನ ಹೆಂಡತಿಯೂ ಚೆನ್ನಾಗಿ ಉಟ್ಟು ತೊಟ್ಟು ಹೋಗಿ, ಜಿಂಕೆಯ ಚರ್ಮವನ್ನು ಸುತ್ತಿಕೊಂಡು ಕ್ಲೇಶಪಡುತ್ತಿರುವ ದ್ರೌಪದಿಯನ್ನು ನೋಡಲಿ! ಆಗ ಅವಳು ತನ್ನ ದರಿದ್ರ ಬಾಳನ್ನು ನಿಂದಿಸಿಕೊಳ್ಳಲಿ! ನಿನ್ನ ಹೆಂಡತಿ ಅಲಂಕಾರಭೂಷಿತಳಾಗಿರುವುದನ್ನು ನೋಡಿದರೆ ಅವಳಿಗೆ ಸಭಾಮಧ್ಯದಲ್ಲಿ ಆದ ಸಂಕಟಕ್ಕಿಂತ ಹೆಚ್ಚಿನ ಸಂಕಟವಾಗುತ್ತದೆ!" ಎಂದನು. ದುರ್ಯೋಧನನಿಗೆ ಈ ಮಾತನ್ನು ಕೇಳಿ ಉಲ್ಲಾಸವುಂಟಾಯಿತು. ಆದರೆ ನಿರುತ್ಸಾಹದಿಂದ "ನೀನು ಹೇಳಿದುದೆಲ್ಲಾ ನನ್ನ ಮನಸ್ಸಿನಲ್ಲಿಯೂ ಉಂಟು, ಕರ್ಣ! ಆದರೆ ಪಾಂಡವರಿರುವ ಕಡೆಗೆ ನಾನು ಹೋಗಲು ಧೃತರಾಷ್ಟ್ರನು ಅನುಮತಿ ಕೊಡುವುದಿಲ್ಲ. ನಮಗಿಂತ ಅವರು ವೀರರು, ತಪೋಬಲವುಳ್ಳವರು ಎಂದು ತಿಳಿದುಕೊಂಡಿದ್ದಾನೆ. ಅವರ ಹೊಟ್ಟೆ ಉರಿಸುವುದು ಹೊರತು ನಮಗೆ ದ್ವೈತವನದಲ್ಲಿ ಬೇರೆ ಕೆಲಸವಿಲ್ಲ. ಹಿಂದೆ ಜೂಜಿನ ಸಂದರ್ಭದಲ್ಲಿ ವಿದುರನು ಆಡಿದ ಮಾತುಗಳು ಜ್ಞಾಪಕವಿದೆಯೋ ಇಲ್ಲವೋ? ಆ ರಗಳೆಯ ನ್ನೆಲ್ಲಾ ಯೋಚಿಸಿಕೊಂಡರೆ ಹೋಗುವುದು ಬೇಡವೆನಿಸುತ್ತದೆ. ನನಗೂ ದ್ರೌಪದಿಯು ಕಾವಿಯುಟ್ಟಿರುವುದನ್ನೂ, ಪಾಂಡವರು ನಾರುಬಟ್ಟೆಯುಟ್ಟಿರುವುದನ್ನೂ ನೋಡಬೇಕೆಂದು ಆಸೆ. ಆದರೆ ಅಲ್ಲಿಗೆ ಹೋಗಲು ನಮ್ಮ ತಂದೆ ಒಪ್ಪುವಂಥ ಯಾವುದಾದರೂ ಒಂದು ನೆವವನ್ನು ಯೋಚಿಸಬೇಕು. ಇವೊತ್ತು ರಾತ್ರಿ ಯೋಚಿಸಿ ಬಂದು ಹೇಳು!" ಎಂದನು. ಅದರಂತೆ ಕರ್ಣನು ಬೆಳಗಾದ ಕೂಡಲೇ ಬಂದು, "ನನಗೆ ಉಪಾಯ ಹೊಳೆಯಿತು. ಮಹಾರಾಜ! ದ್ವೈತವನದಲ್ಲಿ ನೀನು ನೋಡಬೇಕಾದ ಗೊಲ್ಲರ ಗ್ರಾಮಗಳಿವೆ. ಅವುಗಳನ್ನು ನೋಡುವ ನೆವದಿಂದ ಹೋಗೋಣ!" ಎಂದನು. ಶಕುನಿಯೂ ಅದನ್ನು ಅನುಮೋದಿಸಿದನು. "ದ್ವೈತವನದ ಹಳ್ಳಿಗಳವರೆಲ್ಲರೂ ನಿನ್ನನ್ನು ನಿರೀಕ್ಷಿಸು ತ್ತಿದ್ದಾರೆ" ಎಂದನು. ಆಮೇಲೆ ಅವರು ಒಬ್ಬರ ಕೈ ಒಬ್ಬರು ಹಿಡಿದುಕೊಂಡು ನಗುತ್ತ ಧೃತರಾಷ್ಟ್ರನ ಹತ್ತಿರಕ್ಕೆ ಹೋದರು. ಅವರು ಅಲ್ಲಿ ಯೋಗಕ್ಷೇಮದ ಮಾತುಗಳನ್ನು ಆಡುತ್ತಿದ್ದಾಗ ಮೊದಲೇ ಹೇಳಿಕೊಟ್ಟಿದ್ದ ಸಮಂಗನೆಂಬ ಗೊಲ್ಲನೊಬ್ಬನು ಬಂದು ಧೃತರಾಷ್ಟ್ರ ನಲ್ಲಿ "ಹಸುಗಳು ಬಂದಿವೆ!" ಎಂದು ತಿಳಿಸಿದನು. ಆಗ ಶಕುನಿಯೂ, ಕರ್ಣನೂ ಬಾಯಿಹಾಕಿ "ಮಹಾರಾಜ! ಗೊಲ್ಲರ ಗ್ರಾಮಗಳಿಗೆ ಹೋಗಿ ದನಕರುಗಳನ್ನು ನೋಡಿಕೊಂಡು ಎಣಿ ಕೊಂಡು ಬರಬೇಕು; ಬೇಟೆಗೂ ಇದು ಅನುಕೂಲವಾದ ಕಾಲವಾಗಿದೆ; ಆದ್ದರಿಂದ ನಿನ್ನ ಮಗನಿಗೆ ಹೋಗುವುದಕ್ಕೆ ಅನುಜ್ಞೆ ಕೊಡು" ಎಂದನು. ಧೃತರಾಷ್ಟ್ರನು, "ಬೇಟೆಯೂ

ದನಕರುಗಳ ಪರಿಶೀಲನೆಯೂ ಒಳ್ಳೆಯದೇ ! ಗೊಲ್ಲರನ್ನೇ ನಂಬಿಕೊಂಡಿರಬಾರದು. ಆದರೆ ಪಾಂಡವರು ಅಲ್ಲಿಯೇ ಇದ್ದಾರಂತೆ ; ಆದ್ದರಿಂದ ಅಲ್ಲಿಗೇ ನೀವೇ ಹೋಗುವುದು ನನಗೆ ಸಮ್ಮತವಲ್ಲ. ಅವರು ಮೋಸಕ್ಕೆ ಸಿಕ್ಕಿ ಸೋತು ಕಾಡಿನಲ್ಲಿ ನವೆದಿದ್ದಾರೆ ; ಆದರೆ ತಪೋನಿರತರು, ಮಹಾರಥರು ; ಧರ್ಮರಾಜನು ಕೋಪಕ್ಕೆ ವಶನಾಗದಿದ್ದರೂ ಭೀಮನು ಸಹನೆಯುಳ್ಳವನಲ್ಲ ; ದ್ರೌಪದಿಯೋ ಸಾಕ್ಷಾತ್ ಬೆಂಕಿಯೇ ; ನೀವೂ ದರ್ಪಮೋಹಗಳಿಂದ ಏನಾದರೂ ಅಪರಾಧ ಮಾಡುತ್ತೀರಿ ; ಅವರು ತಪಸ್ಸಿನಿಂದಲೋ, ಶಸ್ತ್ರದಿಂದಲೋ ನಿಮ್ಮನ್ನು ನಾಶಮಾಡುತ್ತಾರೆ ; ನೀವು ಬಹು ಜನರಿದ್ದೀರೆಂದುಕೊಂಡು ಅವರ ಮೇಲೆ ಬಿದ್ದರೆ ಅದು ಒಂದು ಕಡೆ ಅನ್ಯಾಯ, ಇನ್ನೊಂದು ಕಡೆ ಅಸಾಧ್ಯ. ಅರ್ಜುನನು ಈಗ ಇಂದ್ರಲೋಕಕ್ಕೆ ಹೋಗಿ ಅಸ್ತ್ರಗಳನ್ನು ತಂದಿದ್ದಾನೆ ; ಅವು ಇಲ್ಲದೆಯೇ ಹಿಂದೆ ಅವನು ಭೂಮಂಡಲವನ್ನು ಜಯಿಸಿಕೊಂಡು ಬಂದ. ಇನ್ನು ಈಗ ಕೇಳಬೇಕೆ ? ಅಥವಾ ನನ್ನ ಮಾತಿನ ಮೇಲೆ ನೀವು ಸುಮ್ಮನಿದ್ದರೂ, ನಿಮಗೇನು ಅಲ್ಲಿ ಸುಖವಿರುವುದಿಲ್ಲ ; ಇಲ್ಲದಿದ್ದರೆ, ಸೈನಿಕರು ಏನಾದರೂ ಅವಿವೇಕ ಮಾಡಬಹುದು ; ಅದು ನಮ್ಮ ಮೇಲೇ ಬರುತ್ತದೆ. ಆದ್ದರಿಂದ ಯಾರಾದರೂ ನಂಬಿಕೆಯುಳ್ಳ ಸೇವಕರನ್ನು ಕಳುಹಿಸಿ ; ನೀವೇ ಹೋಗಬೇಡಿ" ಎಂದನು. ಶಕುನಿಯು "ಮಹಾರಾಜ ! ಧರ್ಮರಾಜನು ಹನ್ನೆರಡು ವರ್ಷ ವನವಾಸಮಾಡುತ್ತೇವೆಂದು ತುಂಬಿದ ಸಭೆಯಲ್ಲಿ ಪ್ರತಿಜ್ಞೆ ಮಾಡಿದ್ದಾನೆ. ಅವನ ತಮ್ಮಂದಿರೂ ಅವನಿಗೆ ವಿಧೇಯರಾಗಿದ್ದಾರೆ. ಯುಧಿಷ್ಠಿರನೂ ಕೋಪ ಮಾಡಿಕೊಳ್ಳುವವನಲ್ಲ. ಬೇಟೆಯಾಡಿಕೊಂಡು ಬರಬೇಕೆಂದು ನಮಗೆ ತುಂಬ ಆಸೆಯಾಗಿದೆ. ಹಾಗೆಯೇ ದನಕರುಗಳನ್ನೂ ನೋಡಿಕೊಂಡು ಬರುತ್ತೇವೆ. ನಾವು ಪಾಂಡವರನ್ನು ತಾನೇ ಏಕೆ ನೋಡಬೇಕು ? ಅವರಿರುವ ಕಡೆಗೆ ಸುಳಿಯದಿದ್ದರೆ ಅವರ ವಿಚಾರದಲ್ಲಿ ಅವಿವೇಕವಾದ ನಡತೆಗೆ ಅವಕಾಶವೆಲ್ಲಿ ? " ಎಂದನು.

ಇಷ್ಟು ಹೇಳಿದ ಮೇಲೆ ಧೃತರಾಷ್ಟ್ರನು ಸಮ್ಮತಿಸಿದನು. ದುರ್ಯೋಧನನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ದುಶ್ಶಾಸನ, ಶಕುನಿ, ಅಂತಃಪುರದ ಸ್ತ್ರೀಯರು ಮೊದಲಾದವ ರನ್ನೊಡಗೂಡಿ ದ್ವೈತವನಕ್ಕೆ ಹೊರಟನು. ಅವನ ಹಿಂದೆ ಎಷ್ಟೋ ಪುರಜನರೂ, ಗಾಡಿಗಳೂ, ಅಂಗಡಿಗಳೂ, ವೇಶ್ಯೆಯರೂ, ವರ್ತಕರೂ, ಬೇಟೆಗಾರರೂ ಹೊರಟರು. ಮಳೆಗಾಲದಲ್ಲಿ ಬಿರುಗಾಳಿ ಎದ್ದಾಗ ಆಗುವ ಅವಾಂತರದಂತೆ ದೊಡ್ಡ ಗದ್ದಲದಿಂದ ನಾನಾ ಯಾನವಾಹನ ಗಳು ಹೊರಟವು.

ಗೊಲ್ಲರ ಹಳ್ಳಿಗೆ ತಲುಪಿದಮೇಲೆ ನೀರೂ ನೆರಳೂ ಇದ್ದು ಸಮತಲವಾದ ಒಂದು ಸುಂದರ ಪ್ರದೇಶದಲ್ಲಿ ಬೀಡು ಬಿಟ್ಟಿತು. ದನಗಳನ್ನು ನೋಡಿ ಲೆಕ್ಕಮಾಡಿಯಾಯಿತು. ಗೋಪಾಲಕರೂ, ಅವರ ಹೆಂಗಸರೂ ಅಲಂಕರಿಸಿಕೊಂಡು ನೃತ್ಯಗೀತಗಳಿಂದ ಎಲ್ಲರನ್ನೂ ಸಂತೋಷಪಡಿಸಿದರು. ಅವರಿಗೆ ದುರ್ಯೋಧನನು ತಿಂಡಿತೀರ್ಥಗಳನ್ನೂ, ಹಣವನ್ನೂ ಕೊಡಿಸಿದನು. ಆಮೇಲೆ ಬೇಟೆಯಾಡಿಕೊಂಡು, ಸುಂದರವಾದ ಸ್ಥಳಗಳನ್ನೂ, ಹೂಗಳಿಂದ ನಿಬಿಡವಾಗಿ ದುಂಬಿಗಳ

ಝೇಂಕಾರದಿಂದಲೂ, ನವಿಲುಗಳ ನರ್ತನದಿಂದಲೂ ರಮಣೀಯವಾಗಿದ್ದ ಪ್ರದೇಶಗಳನ್ನೂ ನೋಡುತ್ತ ದ್ವೈತವನದ ಸರೋವರದ ಹತ್ತಿರಕ್ಕೆ ದೇವೇಂದ್ರನಂತೆ ಮಹಾವೈಭವದಿಂದ ಬಂದನು. ಅವನ ಅಪ್ಪಣೆಯಂತೆ ಅಲ್ಲಿ ಕ್ರೀಡಾಸ್ಥಾನಗಳನ್ನು ಸಿದ್ಧಪಡಿಸುವುದಕ್ಕೆ ಹೋದಾಗ ಅವನ ಸೇವಕರನ್ನು ಅಲ್ಲಿದ್ದ ಗಂಧರ್ವರು ತಡೆದರು. ಅವರು ಕುಬೇರಭವನದಿಂದ ಮೊದಲೇ ಅಲ್ಲಿಗೆ ಬಂದು ಬೀಡು ಬಿಟ್ಟಿದ್ದರು. ದುರ್ಯೋಧನನ ಹತ್ತಿರಕ್ಕೆ ದೂರು ಹೋಗಲು ಅವನು ಸೇನೆಯನ್ನು ಕಳುಹಿಸಿದನು. ಅವರು ಹೋಗಿ "ನಮ್ಮ ಮಹಾರಾಜನಾದ ದುರ್ಯೋಧನನು ಇಲ್ಲಿ ಕ್ರೀಡೆಗಾಗಿ ಬರುತ್ತಾನೆ; ದಾರಿ ಬಿಡಿ!" ಎಂದರು. ಗಂಧರ್ವರು ನಗುತ್ತ, "ನಿಮ್ಮ ರಾಜನಾದ ದುರ್ಯೋಧನನಿಗೆ ಬುದ್ಧಿಯಿಲ್ಲ; ದೇವತೆಗಳಾದ ನಮ್ಮನ್ನು ಹೀಗೆ ಆಜ್ಞೆಮಾಡಲು ನಾವೇನು ಅವನ ಕೈಕೆಳಗಿನವರು ಕೆಟ್ಟು ಹೋದೆವೇ? ಅವನ ಮಾತನ್ನು ಕೇಳಿಕೊಂಡು ಬಂದ ನಿಮಗೂ ಬುದ್ಧಿಯಿಲ್ಲ; ಜೀವದ ಮೇಲೆ ಆಸೆಯಿದ್ದರೆ ನಿಮ್ಮ ಕೌರವನಿರುವ ಕಡೆಗೆ ಓಡಿ!" ಎಂದು ಗದರಿಸಿದರು. ದುರ್ಯೋಧನನು ಇದನ್ನು ಕೇಳಿ ಕೋಪಗೊಂಡು "ದೇವೇಂದ್ರನೇ ದೇವತೆಗಳನ್ನೆಲ್ಲಾ ಕಟ್ಟಿಕೊಂಡು ಅಲ್ಲಿ ವಿಹರಿಸುತ್ತಿದ್ದರೂ ಚಿಂತೆಯಿಲ್ಲ; ಹೋಗಿ; ನನಗೆ ವಿರೋಧವಾಗಿ ನಡೆಯುವ ಅವರನ್ನು ಶಿಕ್ಷಿಸಿ!" ಎಂದು ಆಜ್ಞೆಮಾಡಿದನು. ಅದರಂತೆ ಅವರು ಆ ವನಕ್ಕೆ ನುಗ್ಗಿ ಸಿಂಹನಾದ ಮಾಡುತ್ತ ಗಂಧರ್ವರನ್ನು ತದಕುವುದಕ್ಕೆ ಮೊದಲುಮಾಡಿದರು. ಅವರು ಒಳ್ಳೆಯ ಮಾತಿನಲ್ಲಿ ಹೇಳಿನೋಡಿದರು, ಕೇಳಲಿಲ್ಲ. ಆದ್ದರಿಂದ ಗಂಧರ್ವರೂ ಆಯುಧ ಹಿಡಿದು ಯುದ್ಧಕ್ಕೆ ನಿಂತರು. ಅವರ ಏಟನ್ನು ತಡೆಯಲಾರದೆ ಕೌರವನ ಸೈನಿಕರು ಓಡಿದರು. ಆಗ ದುರ್ಯೋಧನ, ಕರ್ಣ, ಶಕುನಿ ಮುಂತಾದ ನಾಯಕರು ಮುಂದೆ ಬಂದು ಶೌರ್ಯದಿಂದ ಕಾದಿದರು. ಗಂಧರ್ವರ ಕೈ ಬೀಳಾಗಲು ಅವರು ಮಾಯಾಯುದ್ಧಕ್ಕೆ ಮೊದಲುಮಾಡಿದರು. ಕರ್ಣನು ಅವರ ಏಟನ್ನು ತಡೆಯಲಾರದೆ ಕತ್ತಿ ಗುರಾಣಿಗಳೊಡನೆ ವಿಕರ್ಣನ ರಥಕ್ಕೆ ನೆಗೆದು ಯುದ್ಧದಿಂದ ತಪ್ಪಿಸಿಕೊಂಡು ಹೋದನು. ದುರ್ಯೋಧನ, ದುಶ್ಶಾಸನ, ವಿವಿಂಶತಿ ಮುಂತಾದವರು ಸೆರೆಸಿಕ್ಕಿದರು. ಆಗ ಕೌರವ ಸೈನಿಕರೂ, ಬಂಡಿಯವರೂ, ಅಂಗಡಿ ಮುಂಗಟ್ಟಿನವರೂ ಯುಧಿಷ್ಠಿರನನ್ನು ಕಂಡು ತಮ್ಮ ರಾಜನನ್ನು ಬಿಡಿಸಿಕೊಡಬೇಕೆಂದು ಆರ್ತರಾಗಿ ಬೇಡಿಕೊಂಡರು. ಅದನ್ನು ಕೇಳಿ ಭೀಮನು, "ಏನೋ ಮಾಡುವುದಕ್ಕೆ ಹೋಗಿ ಏನೋ ಆಯಿತು! ನಾವು ಮಾಡಬೇಕಾದದ್ದನ್ನು ಗಂಧರ್ವರು ಮಾಡಿದರು! ಭಾಗ್ಯವಶದಿಂದ, ನಮಗೂ ಬೇಕಾದವರಿದ್ದಾರೆ ಎಂದು ತಿಳಿದಹಾಗಾಯಿತು. ಬಿಸಿಲು ಮಳೆ ಗಾಳಿಗಳಿಗೆ ಸಿಕ್ಕಿ ತಪಸ್ಸಿನಲ್ಲಿ ನವೆಯುತ್ತಿದ್ದ ನಮ್ಮನ್ನು ಸುಖವಾಗಿದ್ದ ಈ ದುಷ್ಟ ನೋಡಿ ಹೊಟ್ಟೆ ತಣ್ಣಗೆ ಮಾಡಿಕೊಳ್ಳಬೇಕೆಂದು ಬಂದನು. ಈ ಅಧರ್ಮಾಚರಣೆಗೆ ತಕ್ಕ ಶಾಸ್ತಿಯಾಯಿತು. ಆದರೆ ಪಾಂಡವರು ಹಿಂಸೆ ಮಾಡುವವರಲ್ಲ!" ಎಂದನು. ಧರ್ಮರಾಜನು ಅವನನ್ನು ತಡೆದು "ಇದು ಕಠಿಣವಾದ ಮಾತಿಗೆ ಕಾಲವಲ್ಲ, ಭೀಮ! ಹೆದರಿ ಶರಣಾಗತರಾಗಿ ಬಂದಿರುವವರಿಗೆ ಹೀಗೆಂದು ಹೇಳಬಹುದೇ? ದಾಯಾದಿಗಳಿಗೆ ಜಗಳ ಬರುತ್ತದೆ, ಹೋಗುತ್ತದೆ; ಆದರೆ

ನಂಟು ಹೋಗುತ್ತದೆಯೇ ? ಹೊರಗಿನವನು ಬಂದು ಮೇಲೆ ಬಿದ್ದಾಗ ಅದನ್ನು ನೋಡಿ ಕೊಂಡು ಸುಮ್ಮನಿರುವುದೇ ? ಗಂಧರ್ವರು ದುರ್ಯೋಧನನನ್ನೂ, ಅವನ ಹೆಂಡಿರನ್ನೂ ಎಳೆದುಕೊಂಡು ಹೋದರೆ ಅದು ನಮ್ಮ ಕುಲಕ್ಕೆ ಅವಮಾನ ! ಆದ್ದರಿಂದ ಏಳಿ ! ಹೋಗಿ ಅವರನ್ನು ಬಿಡಿಸಿಕೊಂಡು ಬನ್ನಿ ! ಕೌರವರ ರಥಗಳೇ ಇವೆ ; ಅವರ ಸಾರಥಿಗಳೇ ಇದ್ದಾರೆ. ಶರಣು ಬಂದವರಿಗೆ ಒಬ್ಬ ಸಾಮಾನ್ಯನಾದ ರಾಜನೂ ಸಹಾಯಮಾಡುತ್ತಾನೆ ; ಅಂಥದರಲ್ಲಿ ನೀವು ಸುಮ್ಮನಿರುವುದೇ ? ಆಪತ್ತಿಗೆ ಸಿಕ್ಕಿದ ದುರ್ಯೋಧನನು ನಿಮ್ಮ ಬಾಹುಬಲದಿಂದ ಉಳಿದುಕೊಂಡು ತನ್ನ ಬಾಳನ್ನು ನೂಕುವಂತಾದರೆ ಅದಕ್ಕಿಂತ ಅತಿಶಯವಾದದ್ದು ಇನ್ನೇನು ಬೇಕು ?" ಎಂದನು. ಆ ಮಾತನ್ನು ಕೇಳಿ, ಭೀಮಾರ್ಜುನ ನಕುಲ ಸಹದೇವರು ನಾಲ್ವರೂ ಸಜ್ಜಾಗಿ ಹೊರಟರು. ಅರ್ಜುನನು ಗಂಧರ್ವರನ್ನು ನೋಡಿ " ಈ ನೀಚ ಕೆಲಸ ಗಂಧರ್ವರಿಗೆ ಯೋಗ್ಯವಾದದ್ದಲ್ಲ ; ಕೌರವರನ್ನೂ, ಅವರ ಹೆಂಡಿರನ್ನೂ ಬಿಟ್ಟು ಬಿಡಿ ! ಇದು ಧರ್ಮರಾಜನ ಆಜ್ಞೆ " ಎಂದು ಒಳ್ಳೆಯ ಮಾತಿನಲ್ಲಿ ಹೇಳಿದನು. ಅವರು " ಇಂದ್ರನೊಬ್ಬನೇ ನಮಗೆ ಯಜಮಾನ ! ನಾವು ಅವನು ಹೇಳಿದ ಹಾಗೆ ಮಾತ್ರ ಕೇಳತಕ್ಕವರು ! " ಎಂದು ಉತ್ತರ ಕೊಟ್ಟರು. ಅರ್ಜುನನು "ನೀವು ಬಿಡದಿದ್ದರೆ ನಾನು ಬಿಡಿಸಿಕೊಳ್ಳುತ್ತೇನೆ !" ಎಂದು ಬಾಣಪ್ರಯೋಗಕ್ಕೆ ಆರಂಭಿಸಿದನು. ತುಮುಲಯುದ್ಧದಲ್ಲಿ ಪಾಂಡವರ ಕೈ ಮೇಲಾಯಿತು. ಅವರ ಏಟನ್ನು ತಡೆಯಲಾರದೆ ಗಂಧರ್ವರು ಆಕಾಶಕ್ಕೆ ಹಾರಿದರು. ಅರ್ಜುನನು ತನ್ನ ಶರಜಾಲದಿಂದ ಹಕ್ಕಿಗಳನ್ನು ಪಂಜರದಲ್ಲಿ ಕೂಡಿದಂತೆ, ಅವರ ರಥಗಳನ್ನು ಮುಚ್ಚಿದನು. ಗಂಧರ್ವರಾಜನು ಮಾಯೆಯಿಂದ ಅಂತರ್ಧಾನವಾಗಿ ಬಾಣ ಬಿಡುವುದಕ್ಕೆ ಮೊದಲು ಮಾಡಿದನು. ಅರ್ಜುನನು ಶಬ್ದವೇಧಿಗಳಿಂದ ಯುದ್ಧವಾರಂಭಿಸಿದನು. ಆಗ ಅವನು ಕಾಣಿಸಿಕೊಂಡು " ಅಯ್ಯಾ ! ನಾನು ನಿನ್ನ ಸ್ನೇಹಿತ, ಚಿತ್ರಸೇನ !" ಎಂದನು. ಅವನನ್ನು ಕಂಡು ಅರ್ಜುನನು ಬಾಣವನ್ನು ಉಪಸಂಹರಿಸಿದನು. ಚಿತ್ರಸೇನನು ದುರ್ಯೋಧನನ ದುರುದ್ದೇಶಗಳನ್ನು ತಿಳಿಸಿ ತಾನು ದೇವೇಂದ್ರನ ಅಪ್ಪಣೆಯಂತೆ ಅಲ್ಲಿಗೆ ಬಂದಿದ್ದಾಗಿಯೂ, ದುರ್ಯೋಧನನನ್ನು ದೇವೇಂದ್ರನಲ್ಲಿಗೆ ಸೆರೆಹಿಡಿದುಕೊಂಡು ಹೋಗುತ್ತಿದ್ದು ದಾಗಿಯೂ ತಿಳಿಸಿದನು. ಅರ್ಜುನನು, " ಚಿತ್ರಸೇನ ! ಎಷ್ಟಾದರೂ ದುರ್ಯೋಧನನು ನಮಗೆ ಸೋದರನಾಗಬೇಕು ; ಅಲ್ಲದೆ ಅವನನ್ನು ಬಿಡಿಸಿಕೊಂಡು ಬರಬೇಕೆಂದು ಧರ್ಮರಾಜನು ಆಜ್ಞೆಮಾಡಿದ್ದಾನೆ" ಎಂದನು. ಚಿತ್ರಸೇನನು " ಈ ಪಾಪಿಯನ್ನು ಬಿಡುವುದು ತರವಲ್ಲ ; ಆದರೆ ಧರ್ಮರಾಜನ ಇಷ್ಟವಾದರೆ ಹಾಗೆಯೇ ಆಗಲಿ !" ಎಂದು ಎಲ್ಲರೂ ಯುಧಿಷ್ಠಿರನ ಬಳಿಗೆ ಹೋದರು. ಧರ್ಮರಾಜನು ಗಂಧರ್ವರನ್ನು ಉಪಚಾರಮಾಡಿ ಕಳುಹಿಸಿ ದುರ್ಯೋಧನನನ್ನೂ, ಇತರ ಕೌರವರನ್ನೂ ಕುರಿತು, " ಇನ್ನುಮೇಲೆ ಇಂಥ ಸಾಹಸಕ್ಕೆ ಕೈಯಿಡಬೇಡಿರಪ್ಪ ! ಬರಿಯ ಸಾಹಸದಿಂದ ಸುಖವಿಲ್ಲ. ಮನಸ್ಸನ್ನು ಕಹಿಮಾಡಿಕೊಳ್ಳದೆ ತಮ್ಮಂದಿರನ್ನು ಕರೆದುಕೊಂಡು ಮನೆಗೆ ಹಿಂದಿರುಗಿ ಹೋಗು ದುರ್ಯೋಧನ ! " ಎಂದು ಬುದ್ಧಿ ಹೇಳಿ ಕಳುಹಿಸಿದನು.

## ಟಿಪ್ಪಣಿ

### ಕವಿ ಮತ್ತು ಕೃತಿ :

ಈ ಕಥಾಭಾಗವನ್ನು ದಿವಂಗತ ಶ್ರೀಮಾನ್ ಅಂಬಳೆ ರಾಮಕೃಷ್ಣಶಾಸ್ತ್ರಿ, ಕೃಷ್ಣಶಾಸ್ತ್ರಿಗಳ 'ವಚನಭಾರತ'ದ ಆರಣ್ಯಪರ್ವದಿಂದ ಆಯ್ದುಕೊಂಡಿದೆ. ಶ್ರೀ ಕೃಷ್ಣಶಾಸ್ತ್ರಿಗಳು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಎಂ. ಎ. ಪದವೀಧರರಾದ ಮೇಲೆ ಬೆಂಗಳೂರಿನ ಸೆಂಟ್ರಲ್ ಕಾಲೇಜು ಮತ್ತು ಮೈಸೂರಿನ ಮಹಾರಾಜ ಕಾಲೇಜುಗಳಲ್ಲಿ ಕನ್ನಡದ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಕನ್ನಡದ ಏಳಿಗೆಗಾಗಿ ಬಾಳನ್ನು ಸವೆಸಿದ ಕರ್ಮಯೋಗಿಗಳು. ಕನ್ನಡ, ಸಂಸ್ಕೃತ ಮತ್ತು ಬಂಗಾಳಿ ಭಾಷೆಗಳಲ್ಲಿ ಅವರಿಗೆ ಅಪಾರವಾದ ಜ್ಞಾನವಿತ್ತು. ಅವರು 'ಸಂಸ್ಕೃತ ನಾಟಕ', 'ಭಾಸಕವಿ', 'ಸರ್ವಜ್ಞಕವಿ', 'ನಾಗಮಹಾಶಯ', 'ಶ್ರೀ ಪ ತಿ ಯ ಕ ಥೆ ಗ ಳು', 'ಕಥಾಮೃತ'—ಇತ್ಯಾದಿ ಗ್ರಂಥಗಳನ್ನು ಬರೆದಿದ್ದಾರೆ. ಸುಪ್ರಸಿದ್ಧ ಕನ್ನಡ ತ್ರೈಮಾಸಿಕ ಪತ್ರಿಕೆ 'ಪ್ರಬುದ್ಧ ಕರ್ಣಾಟಕ' ವನ್ನು ನೆಟ್ಟು ಬೆಳೆಸಿದ ಕೀರ್ತಿ ಶ್ರೀ ಶಾಸ್ತ್ರಿಗಳಿಗೆ ಸಲ್ಲುತ್ತದೆ. ಶ್ರೀ ಶಾಸ್ತ್ರಿಗಳ ಬರವಣಿಗೆ ಸರಳ, ಸ್ಪಷ್ಟ, ಸಂಗ್ರಹ, ಸರಸ, ಸಾರಭೂತ. ಇವರು ಕೇಂದ್ರ ಸಾಹಿತ್ಯ ಅಕೆಡಮಿಯ ಬಹುಮಾನ ವಿಜೇತರು.

### ಕಥಾಸಂದರ್ಭ :

ಪಾಂಡವರು ವನವಾಸದಲ್ಲಿದ್ದಾಗ, ದುರ್ಯೋಧನನು ತನ್ನ ಅಷ್ಟೈಶ್ವರ್ಯವನ್ನು ಅವರ ಮುಂದೆ ಮೆರೆಸಿ, ಅವರ ಹೊಟ್ಟೆಯುರಿಸಬೇಕೆಂಬ ದುರ್ಬುದ್ಧಿಯಿಂದ, ತನ್ನ ಸಕಲ ಪರಿವಾರ ದೊಡನೆ ಅಟ್ಟಹಾಸದಿಂದ ಅಲ್ಲಿಗೆ ಹೋಗುತ್ತಾನೆ. ಆದರೆ ಗಂಧರ್ವರಾಜನಿಂದ ಬಂಧಿತನಾಗಿ ಅಪಮಾನಕ್ಕೀಡಾಗುತ್ತಾನೆ. ತಾನು ಕೆಡಕು ಮಾಡಹೊರಟವರಿಂದಲೇ ಅವನು ಬಂಧ ಮುಕ್ತನಾಗಬೇಕಾಗುತ್ತದೆ.

### ಕಠಿಣ ಪದಗಳ ಅರ್ಥ :

ಘೋಷಯಾತ್ರೆ—ಗೊಲ್ಲರ ಹಟ್ಟಿಗೆ ಯಾತ್ರೆ. ಅನಾಥೆ—ದಿಕ್ಕಿಲ್ಲದವಳು. ಕ್ಲೇಶ—ಕಷ್ಟ ಕರ್ಮ—ಕಾರ್ಯ; ಕೆಲಸ. ಅಸ್ತ್ರ—ಮಂತ್ರದ ಬಾಣ. ಸಶರೀರ—ಶರೀರಸಹಿತ; ದೇಹ ದೊಡನೆ. ಗಾಂಡೀವ—ಒಂದು ದಿವ್ಯಧನುಸ್ಸು. ಖಾಂಡವವನ ದಹನದ ಸಮಯದಲ್ಲಿ ಅರ್ಜುನನು ತನಗೆ ಮಾಡಿದ ಉಪಕಾರಕ್ಕಾಗಿ ಅಗ್ನಿಯು ಅರ್ಜುನನಿಗೆ ಅದನ್ನು ಕೊಟ್ಟನು. ಇದರಿಂದ ಅರ್ಜುನನಿಗೆ ಗಾಂಡೀವಿ ಎಂದು ಹೆಸರಾಯಿತು.

ಏಕಚ್ಛತ್ರಾಧಿಪತ್ಯ—ಇಡೀ ಭೂಮಂಡಲ ಒಬ್ಬನ ಆಧಿಪತ್ಯಕ್ಕೆ ಒಳಪಟ್ಟಿರುವುದು. ಕಪ್ಪ—ಆಶ್ರಿತರಾಜರು ಚಕ್ರವರ್ತಿಗೆ ಕೊಡುವ ತೆರಿಗೆ. ಲಕ್ಷ್ಯ—ಗಣನೆ; ಗಮನ. ಸಕಲೈಶ್ವರ್ಯ—ಸಕಲ+ಐಶ್ವರ್ಯ (ವೃ. ಸಂ). ಕುಕ್ಕು—ಚುಚ್ಚು. ಬೆರಗು—ಆಶ್ಚರ್ಯ. ರಾಜ್ಯಭ್ರಷ್ಟ—

ರಾಜ್ಯದಿಂದ+ಭ್ರಷ್ಟ (ತೃ.ತ.ಸ.)–ರಾಜ್ಯವನ್ನು ಕಳೆದುಕೊಂಡವನು. ಸಂಪದ್ಯುಕ್ತ––ಸಂಪತ್+ ಯುಕ್ತ (ಜ. ಸಂ)-ಐಶ್ವರ್ಯದಿಂದ ಕೂಡಿದ. ಕೃಷ್ಣಾಜಿನ – ಕೃಷ್ಣ+ಅಜಿನ (ಸ.ದೀ.ಸಂ.)– ಹುಲ್ಲೆಯ ಚರ್ಮ. ಸುಳಿ—ತಲೆಹಾಕು; ಕಾಣಿಸಿಕೊಳ್ಳು. ಅವಾಂತರ – ಕೋಲಾಹಲ. ಯಾನವಾಹನ – ಪ್ರಯಾಣಸೌಕರ್ಯ (ರಥ, ಕುದುರೆ ಇತ್ಯಾದಿ). ಸಮತಲ—ಒಂದೇಮಟ್ಟ ವಾಗಿರುವ. ಬೀಡು—ತಾಣ ; ನೆಲೆ. ನಿಬಿಡ – ಒತ್ತಾದ ; ಎಡೆಬಿಡದ. ತದಕು—ಹೊಡೆ. ಗುರಾಣಿ—ಆಯುಧದ ಏಟನ್ನು ತಪ್ಪಿಸಿಕೊಳ್ಳಲು ಯೋಧರು ಹಿಡಿದುಕೊಳ್ಳುವ ಲೋಹದ ತಟ್ಟೆಯಾಕಾರದ ಒಂದು ಸಾಧನ. ಚಿತ್ರಸೇನ—ವಿಶ್ವಾವಸು ಎಂಬ ಗಂಧರ್ವನ ಮಗ; ಅರ್ಜುನನಿಗೆ ದೇವಲೋಕದಲ್ಲಿ ಗಾಂಧರ್ವವೇದವನ್ನು ಕಲಿಸಿದವ.

ಮುಂಗಟ್ಟು—ಬೀದಿಯ ಮಾರಾಟ. ಆರ್ತ – ದೀನ. ಶಾಸ್ತಿ—ಶಿಕ್ಷೆ. ತುಮುಲ— ಕ್ಷೋಭೆಯಿಂದ ಕೂಡಿದ ; ಭಯಂಕರವಾದ. ಶರಜಾಲ—ಬಾಣ ಸಮೂಹ. ಶಬ್ದವೇಧಿ—ಶಬ್ದ ಬಂದ ಕಡೆಗೆ ಬಾಣವನ್ನು ಹೊಡೆದು ಲಕ್ಷ್ಯವನ್ನು ಭೇದಿಸುವುದು. ಅಂತರ್ಧಾನ – ಮಾಯ. ಉಪಸಂಹಾರ—ಮುಕ್ತಾಯಮಾಡುವುದು.

ಪ್ರಶ್ನೆಗಳು :

೧. ಬ್ರಾಹ್ಮಣನು ಪಾಂಡವರ ಸ್ಥಿತಿಗತಿಗಳನ್ನು ಕುರಿತು ಧೃತರಾಷ್ಟ್ರನೊಡನೆ ಏನು ಹೇಳಿದನು ? ಅದರಿಂದ ಧೃತರಾಷ್ಟ್ರನ ಮೇಲೆ ಆದ ಪರಿಣಾಮವೇನು ?

೨. ಪಾಂಡವರ ಹೊಟ್ಟೆಯುರಿಸಲು ಕರ್ಣನು ದುರ್ಯೋಧನನಿಗೆ ನೀಡಿದ ಸಲಹೆ ಯೇನು ?

೩. ದ್ವೈತವನಕ್ಕೆ ಹೋಗಲು ಧೃತರಾಷ್ಟ್ರನಿಂದ ಅನುಮತಿ ಪಡೆಯಲು ಕರ್ಣಾದಿಗಳು ಮಾಡಿದ ಉಪಾಯವೇನು ?

೪. ದ್ವೈತವನಕ್ಕೆ ಹೋಗಲು ಅನುಮತಿ ಕೊಟ್ಟ ಧೃತರಾಷ್ಟ್ರನು ಮಗನಿಗೆ ಹೇಳಿದ ಬುದ್ಧಿವಾದವೇನು ?

೫. ದುರ್ಯೋಧನನನ್ನು ಗಂಧರ್ವರು ಕಟ್ಟಿ ಎಳೆದುಕೊಂಡು ಹೋದ ಸಂದರ್ಭವನ್ನು ವರ್ಣಿಸಿ.

೬. ಕೌರವರಿಗೆ ಸಹಾಯಮಾಡಲು ನಿರಾಕರಿಸಿದ ಭೀಮನಿಗೆ ಧರ್ಮರಾಯನು ಹೇಳಿದ ಬುದ್ಧಿವಾದವೇನು ?

೭. ಚಿತ್ರಸೇನ ಮತ್ತು ಅರ್ಜುನರ ಸಂಭಾಷಣೆಯನ್ನು ಸಂಗ್ರಹಿಸಿ ಬರೆಯಿರಿ.

೮. ಧರ್ಮರಾಯನು ಕೌರವನನ್ನು ಕುರಿತು ಹೇಳಿದ ಬುದ್ಧಿವಾದವೇನು ?

ಇವುಗಳನ್ನು ಸಂದರ್ಭ ಸಹಿತ ಸ್ಪಷ್ಟೀಕರಿಸಿ :

೧. 'ಮನುಷ್ಯನು ಒಳ್ಳೆಯದೋ, ಕೆಟ್ಟದ್ದೋ ಕರ್ಮವನ್ನು ಮಾಡಿದ ಮೇಲೆ ಅದು ಫಲವನ್ನು ಅನುಭವಿಸಿಯೇ ತೀರಬೇಕು.'

೨. 'ಬೆಟ್ಟದ ಮೇಲಿರುವವನು ನೆಲದ ಮೇಲೆ ನಿಂತಿರುವವರನ್ನು ನೋಡುವುದಕ್ಕಿಂತ ಸಂತೋಷ ಇನ್ನು ಉಂಟೆ ?'

೩. 'ಶತ್ರುಗಳ ಕಷ್ಟವನ್ನು ನೋಡುವುದರಿಂದ ಆಗುವ ಸಂತೋಷ ಪುತ್ರಪ್ರಾಪ್ತಿಯಿಂದಾಗಲೀ. ರಾಜ್ಯಪ್ರಾಪ್ತಿಯಿಂದಾಗಲೀ ಆಗುವುದಿಲ್ಲ'.

೪. 'ಭಾಗ್ಯವಶದಿಂದ ನಮಗೂ ಬೇಕಾದವರಿದ್ದಾರೆ ಎಂದು ತಿಳಿದಹಾಗಾಯಿತು'

೫. 'ದಾಯಾದಿಗಳಿಗೆ ಜಗಳ ಬರುತ್ತದೆ, ಹೋಗುತ್ತದೆ; ಆದರೆ ನಂಟು ಹೋಗುತ್ತದೆಯೆ ?'

ವಿಗ್ರಹವಾಕ್ಯ ಬರೆದು ಸಮಾಸದ ಹೆಸರನ್ನು ತಿಳಿಸಿ :

ದನಕರು : ಇಂದ್ರಲೋಕ ; ಬಿರುಗಾಳಿ ; ತಿಂಡಿತೀರ್ಥ.

ಈ ಶಬ್ದಗಳನ್ನು ಬಿಡಿಸಿ ಸಂಧಿಯನ್ನು ಹೇಳಿ :

ದೇವೇಂದ್ರ : ಮಳೆಗಾಲ ; ಬುದ್ಧಿಯಿಲ್ಲ : ಅಧರ್ಮಾಚರಣೆ.

* * * *

# ಭಾರತದ ಇಂದಿನ ಕುಟುಂಬ ಜೀವನದ ಸಮಸ್ಯೆಗಳು

—ಜಿ. ಹನುಮಂತರಾವ್

ಭಾರತದ ಕುಟುಂಬ ರಚನೆಗೆ ಮೂರು ಕಾರಣಗಳು ಮುಖ್ಯವಾದವು. ನಮ್ಮಲ್ಲಿ ಹೆಚ್ಚಿನ ಜನ ಹಳ್ಳಿಯಲ್ಲಿ ವಾಸಮಾಡುತ್ತಿರುವುದು ಒಂದು, ಜಾತಿಪದ್ಧತಿ ಎರಡನೆಯದು, ಅವಿಭಕ್ತಕುಟುಂಬ ಮೂರನೆಯದು. ನಮ್ಮಲ್ಲಿ ಮುಕ್ಕಾಲುಪಾಲು ಜನ ತಮ್ಮ ಜೀವನೋಪಾಯಕ್ಕಾಗಿ ವ್ಯವಸಾಯ ವನ್ನು ನೆಚ್ಚಿಕೊಂಡಿರುತ್ತಾರೆ. ಆ ವ್ಯವಸಾಯಕ್ಕೆ ಬೇಕಾದ ಮಳೆ ಚಂಚಲವಾದದ್ದು ; ಅತಿವೃಷ್ಟಿ, ಇಲ್ಲದಿದ್ದರೆ ಅನಾವೃಷ್ಟಿ, ಎರಡರಿಂದಲೂ ಬೆಳೆ ಹಾಳು. ಸಮಪ್ರಮಾಣದಲ್ಲಿ, ಸಕಾಲದಲ್ಲಿ ಮಳೆ ಯಾಗುವುದು ಮೂರು ವರ್ಷಕ್ಕೆ ಒಮ್ಮೆ ಅಥವಾ ನಾಲ್ಕು ವರ್ಷಕ್ಕೆ ಒಮ್ಮೆ. ಆದ್ದರಿಂದ ಹಳ್ಳಿ, ಯವರು ಮಳೆಯಿಂದ ಸುಖಪಡುವುದಕ್ಕಿಂತ ನರಳುವುದೇ ಹೆಚ್ಚು. ಹೀಗೆ ನರಳುವ ಜನರಲ್ಲಿ ತಮ್ಮ ಕಸಬಿನಲ್ಲಾಗಲಿ, ಜೀವನದಲ್ಲಾಗಲಿ ಉತ್ಸಾಹವಿರುವುದು ಹೇಗೆ ? ಈಚೀಚಿನವರೆಗೂ ಹಳ್ಳಿಗಳು ರಸ್ತೆಗಳಿಲ್ಲದೆ, ಯಾನ ವಾಹನ ಸೌಕರ್ಯವಿಲ್ಲದೆ ಅವುಗಳ ಸಂಸ್ಕೃತಿ ತುಂಬ ಹಿಂದೆ ಬಿದ್ದಿತ್ತು.

ಬಹು ಸಂಖ್ಯಾತರು ಸುಸಂಸ್ಕೃತರಾಗದೆ ನಿರುತ್ಸಾಹದ ಜೀವನವನ್ನು ಬೆಳಸಿದರೆ, ಅವರು ಹಿಂದುಳಿದಿದ್ದರೆ ಅವರಲ್ಲಿ ದೇಶಾಭಿಮಾನವಾಗಲೀ, ಸ್ವಾತಂತ್ರ್ಯಾಭಿಮಾನವಾಗಲೀ ಬೆಳೆಯುವು ದೆಂತು ; ಪ್ರಜಾಪ್ರಭುತ್ವದ ಕನಸು ನನಸಾಗುವುದೆಂತು ? ಆದ್ದರಿಂದ ಹಳ್ಳಿಯ ಜನಗಳ ಕುಂದು ಕೊರತೆಗಳನ್ನು ನಿವಾರಿಸುವುದು, ಈಗಿನ ಭಾರತೀಯ ಸರ್ಕಾರ ತನ್ನ ಆದ್ಯಕರ್ತವ್ಯವೆಂದು ತಿಳಿದು ಅದಕ್ಕಾಗಿ ಶ್ರಮಿಸಲು ಮೊದಲುಮಾಡಿದೆ. ಈ ಶ್ರಮದ ಫಲವನ್ನು ನಾವು ಕಾದು ನೋಡ ಬೇಕಾಗಿದೆ.

ಹಳ್ಳಿಗಳ ಜೀವನಕ್ಕೂ, ಪಟ್ಟಣದ ಜೀವನಕ್ಕೂ ಹಾನಿಕಾರಿಯಾಗಿ ಕೋಮುಗಳ ವೈಷಮ್ಯಗಳು ಬೆಳೆಯುತ್ತಿವೆ. ಈ ಕೋಮುಗಳ ವೈಷಮ್ಯ ಹಿಂದಿನ ಕಾಲದಲ್ಲಿರಲಿಲ್ಲ. ಈಗ ಆ ವೈಷಮ್ಯ

ಹಿಂದೆಂದೂ ಇಲ್ಲದಷ್ಟು ಹೆಚ್ಚಾಗಿದೆ. ಅದು ಸಾರ್ವಜನಿಕ ಜೀವನದಲ್ಲೂ, ವೈಯಕ್ತಿಕ ಜೀವ
ದಲ್ಲೂ ತುಂಬ ದುಷ್ಪರಿಣಾಮಕಾರಿಯಾಗಿದೆ. ಕೋಮುಗಳ ತಿಕ್ಕಾಟಗಳಿಗೆ ಇದು ಪ್ರಬಲವಾ
ಕಾರಣ. ಆ ತಿಕ್ಕಾಟಗಳ ಜೊತೆಗೆ ಹೊಸದಾಗಿ ವರ್ಗವೈಷಮ್ಯವೂ ಸೇರಿಕೊಂಡಿದೆ. ಸಮಾಜದ
ಸಮತೂಕವನ್ನು ಏರ್ಪಡಿಸಿ ಶಾಂತಿಯನ್ನು ಕುದುರಿಸುವುದು ಇಂದಿನ ದೊಡ್ಡ ಸಮಸ್ಯೆಗಳ
ಒಂದಾಗಿದೆ. ಅವಿಭಕ್ತಕುಟುಂಬವು ವ್ಯವಸಾಯವನ್ನು ನೆಚ್ಚಿಕೊಂಡಿರುವ ಸಮಾಜಕ್ಕೆ ತುಂ
ಅಗತ್ಯ. ಆದರೆ ಅದು ವ್ಯಕ್ತಿತ್ವದ ಬೆಳವಣಿಗೆಗೆ ಒಂದು ತಡೆ. ಹೊಸಭಾವನೆಗಳು ಹು
ಕುಟುಂಬಕ್ಕೆ ಸೇರಿದವರು ವ್ಯಕ್ತಿಸ್ವಾತಂತ್ರ್ಯವನ್ನು ಸಾಧಿಸಿಕೊಳ್ಳಲು ಪ್ರಯತ್ನಪಟ್ಟಾ
ವ್ಯವಸಾಯಕ್ಕೆ ಅಗತ್ಯವಾದ ಅವಿಭಕ್ತಕುಟುಂಬವು ಒಡೆದು, ಇತ್ತ ವ್ಯಕ್ತಿತ್ವವೂ ಬೆಳೆಯದೆ, ಅ
ಕುಟುಂಬ ಜೀವನದ ನೆಮ್ಮದಿಗೂ ಭಂಗ ಬಂದಿದೆ. ವ್ಯಕ್ತಿಸ್ವಾತಂತ್ರ್ಯಕ್ಕೆ ಸರ್ಕಾರವು ಕಾನೂ
ಮೂಲಕ ಬೇಕಾದಷ್ಟು ಅವಕಾಶ ಕೊಟ್ಟಿದೆ. ಆದರೆ ಸಹಕಾರ ವ್ಯವಸಾಯಕ್ಕಾಗಲೀ
ಸಾಮೂಹಿಕ ವ್ಯವಸಾಯಕ್ಕಾಗಲೀ ಸಾಕಾದಷ್ಟು ಅನುಕೂಲಗಳನ್ನು ಕಲ್ಪಿಸಿಕೊಟ್ಟಿಲ್ಲ ; ಹಾಗೆ ಕಲ್ಪಿ
ಕೊಟ್ಟಿರುವ ಅನುಕೂಲಗಳನ್ನು ಹಳ್ಳಿಯವರು ತಮ್ಮ ಮೌಢ್ಯದ ಸಲುವಾಗಿಯೋ, ಮತ್ಸರ
ಸಲುವಾಗಿಯೋ ಉಪಯೋಗಿಸಿಕೊಳ್ಳುವುದಕ್ಕೆ ಆಗಿಲ್ಲ. ಹಳ್ಳಿಯವರ ಇಂದಿನ ಆರ್ಥಿಕಸ್ಥಿ
ಹಿಂದಿನವರದಕ್ಕಿಂತಲೂ ಉತ್ತಮವಾಗಿದೆ ಎಂದು ಹೇಳಲಾಗುವುದಿಲ್ಲ. ಅಮೇರಿಕಾದ ಸಂಯು
ಸಂಸ್ಥಾನಗಳಲ್ಲಿ ಇರುವಂತೆ ನಮ್ಮಲ್ಲಿ ಆಧುನಿಕರೀತಿಯಲ್ಲಿ ನೂರಾರು ಎಕರೆಗಳನ್ನು ವ್ಯವಸಾ
ಮಾಡುವ ವ್ಯವಸಾಯಗಾರರಿಲ್ಲ ; ಸಾಮೂಹಿಕ ರಷ್ಯಾದಲ್ಲಿರುವಂತೆ ಸಾಮೂಹಿಕ ವ್ಯವಸಾ
ಕೇಂದ್ರಗಳೂ ನಮ್ಮಲ್ಲಿಲ್ಲ. ಉತ್ತು ಬೆಳೆಯಬಲ್ಲವನಿಗೆ ಸಾಕಾದಷ್ಟು ಜಮೀನೂ ಇಲ್ಲ, ಆರ್ಥಿ
ದಾರ್ಢ್ಯವೂ ಇಲ್ಲ. ದಿನೇ ದಿನೇ ಪ್ರಜಾಸಂಖ್ಯೆ ಬೆಳೆಯುತ್ತಿದೆ, ಬೆಳೆಯುವ ಆಹಾರ ಕಡ
ಯಾಗುತ್ತಿದೆ. ಜರ್ಪಾ, ರಷ್ಯಾ ಮತ್ತು ಅಮೇರಿಕಾಗಳಲ್ಲಿ ಎಕರೆಯೊಂದಕ್ಕೆ ಆ ದೇಶಗಳ ರೈತ
ತೆಗೆಯುವ ಬೆಳೆಯಲ್ಲಿ ನಮ್ಮವರು ಅರ್ಧದಷ್ಟು ಬೆಳೆದರೆ ನಮ್ಮದು ಆದರ್ಶವ್ಯವಸಾಯವೆಂ
ಹೇಳುವಂತಾಗಿದೆ. ಇನ್ನು ನಮ್ಮ ಸಾಮಾನ್ಯ ವ್ಯವಸಾಯ ಎಷ್ಟು ಕೀಳು ಎಂಬುದನ್ನು ನಾ
ಸುಲಭವಾಗಿ ಊಹಿಸಿಕೊಳ್ಳಬಹುದು. ಹೊಟ್ಟೆಗಿಲ್ಲದೆ ಒಪ್ಪತ್ತು ಊಟ ಮಾಡುವ ಜ
ಸಮಸ್ಯೆ ಮತ್ತೊಂದು ದಾರುಣವಾದ ಸಮಸ್ಯೆ. ಹೊಟ್ಟೆಗಿಲ್ಲದ ಕುಟುಂಬ, ವಿದ್ಯೆ ಇಲ್ಲ
ಕುಟುಂಬ, ವೈಷಮ್ಯಗಳಿಂದ ತುಂಬಿದ ಕುಟುಂಬ, ಬದಲಾಯಿಸುತ್ತಿರುವ ಪರಿಸ್ಥಿತಿಗಳಿಗೆ ಹೊಂ
ಕೊಳ್ಳಲಾರದ ಕುಟುಂಬ—ಇವು ಇಂದಿನ ಸಮಸ್ಯೆಗಳಿಗೆ ಮುಖ್ಯ ಕಾರಣವಾಗಿವೆ. ಸಮಸ್ಯೆಗ
ಬಲಿತಿವೆ, ಅವುಗಳೊಡನೆ ಹೆಣಗಾಡುವ ಸಾಮರ್ಥ್ಯ ಬಲಿತಿಲ್ಲ. ಇತರ ದೇಶಗಳ
ಶತಮಾನಗಳ ಕಾಲದಲ್ಲಿ ಆದಷ್ಟು ಬದಲಾವಣೆಗಳು ಭಾರತದಲ್ಲಿ ಅರ್ಧಶತಮಾನ ಕಾಲದ
ಆಗಿವೆ. ಬಹುಶಃ ಇನ್ನು ಮುಂದೆ ಈ ಬದಲಾವಣೆಗಳು ಮತ್ತಷ್ಟು ಹೆಚ್ಚು ವೇಗವಾಗಿ ನಡೆಯ
ಬಹುದು. ಭಾರತದ ಸರ್ಕಾರವು ಇಂದು ನಡೆಸುತ್ತಿರುವ ಪ್ರಯತ್ನಗಳನ್ನು ನೋಡಿದರೆ ಅದ
ಪ್ರಗತಿಯ ದಾರಿಯಲ್ಲಿ ಓಡಲಾಗದಷ್ಟು ವೇಗವಾಗಿ ಜನರನ್ನು ಓಡಿಸುತ್ತಿರುವಂತೆ ನಮ

ಭಾಸವಾಗುತ್ತದೆ. ಸಮಾಜವನ್ನು ಓಡಲಾಗದಷ್ಟು ಓಡಿಸಿದರೆ ಅದು ಕುಸಿದು ಬೀಳುವ ಸಂಭವವೂ ಉಂಟು. ಅದಕ್ಕೆ ಬೇಕಾದ ಆರ್ಥಿಕದಾರ್ಢ್ಯವೂ ಕಡಮೆಯಾಗಿದೆ. ಹಾಸಿಗೆ ಇದ್ದಷ್ಟು ಕಾಲು ಚಾಚಿಕೊಳ್ಳದಿದ್ದರೆ ಕಾಲಾಂತರದಲ್ಲಿ ಹಾಸಿಗೆಯಿಲ್ಲದೆಯೇ ಮಲಗಬೇಕಾದ ಪ್ರಮೇಯ ಒದಗಬಹುದು.

ಪಾಶ್ಚಾತ್ಯದೇಶಗಳಲ್ಲಿ ಹದಿನಾಲ್ಕನೆಯ ಶತಮಾನದ ಕಾಲದಲ್ಲಿದ್ದ ಸಮಾಜಕ್ಕೆ ಈಗ ಹತ್ತೊಂಬತ್ತನೆಯ, ಇಪ್ಪತ್ತನೆಯ ಶತಮಾನದ ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕ ಉಂಟಾಗಿ ನಮ್ಮ ಬೌದ್ಧಿಕಜೀವನ, ಭಾವಜೀವನ, ಸಾಮಾಜಿಕಜೀವನ, ಆರ್ಥಿಕಜೀವನ ಎಲ್ಲವೂ ಬದಲಾಯಿಸಿವೆ. ಇದರ ಪರಿಣಾಮವಾಗಿ ನಮ್ಮ ಕುಟುಂಬಜೀವನದಲ್ಲೂ ಬದಲಾವಣೆಗಳಾಗುತ್ತಿವೆ. ಹಿಂದೆಂದೂ ಇಲ್ಲದ ಭಾವಗಳು. ಭಾವನೆಗಳು, ನಡವಳಿಕೆಗಳು, ಗಂಡಸರಲ್ಲೂ, ಹೆಂಗಸರಲ್ಲೂ, ಮಕ್ಕಳಲ್ಲೂ ಮೂಡಿ ಕುಟುಂಬಜೀವನವು ತಳಮಳಗುಟ್ಟುತ್ತಿದೆ. ಕುಟುಂಬದ ಸಮಸ್ಯೆಗಳು ಹೆಚ್ಚಿವೆ. ಈ ಸಮಸ್ಯೆಗಳನ್ನೂ, ಅವುಗಳನ್ನು ಪರಿಹರಿಸುವ ಉಪಾಯಗಳನ್ನೂ ಸಂಗ್ರಹವಾಗಿ ವಿಮರ್ಶೆಮಾಡಲು ಮಾತ್ರ ಅವಕಾಶವಿದೆ.

ಹಿಂದಿನ ಕಾಲದಲ್ಲಿ ಮತ್ತು ಈಚಿನವರೆಗೂ ನಮ್ಮ ಸಮಾಜದಲ್ಲಿ ವ್ಯಕ್ತಿಗಿಂತಲೂ ಸಂಸ್ಥೆಯು ಪ್ರಧಾನವಾಗಿತ್ತು. ಹಿಂದೆ ವ್ಯಕ್ತಿಗಳಿಗೆ ಇದ್ದ ಸ್ವಾತಂತ್ರ್ಯವಾಗಲೀ, ಸ್ಥಾನಮಾನಗಳಾಗಲೀ ಇದ್ದದ್ದು ಅದರ ಮಹಿಮೆಯಿಂದ. ಆ ಸಂಸ್ಥೆಯಿಂದ ಬೇರೆಯಾದಾಗ ಅಥವಾ ಭ್ರಷ್ಟರಾದಾಗ ಅವರು ಏತಕ್ಕೂ ಬಾರದವರು.

ಪ್ರಜಾಪ್ರಭುತ್ವ ಪಡೆದಿರುವ ನಮ್ಮ ಸಮಾಜದಲ್ಲಿ ಹಾಗಲ್ಲ. ವ್ಯಕ್ತಿತ್ವಕ್ಕೆ ಮನ್ನಣೆಯಿದೆ. ಒಬ್ಬನು ಈಗ ಒಂದು ಸ್ಥಾನದಲ್ಲಿದ್ದು ಕೆಲಸಮಾಡಬಹುದು, ಅದನ್ನು ಬಿಟ್ಟು ಬೇರೆ ಸ್ಥಾನವನ್ನು ಹುಡುಕಿಕೊಂಡು ಹೋಗಬಹುದು. ಅವನಿಗೆ ಸ್ಥಾನದಿಂದ ಸ್ಥಾನಕ್ಕೆ ಬದಲಾಯಿಸುವ ಸ್ವಾತಂತ್ರ್ಯವಿದೆ. ಅವನು ಸಮಾಜಸಂಸ್ಥೆಗಳ ರೀತಿರಚನೆಗಳನ್ನು ವಿಮರ್ಶಿಸಿ ಅವುಗಳಲ್ಲಿ ಆಗಬೇಕಾದ ಬದಲಾವಣೆಗಳನ್ನು ತನ್ನಂತೆಯೇ ವಿಮರ್ಶೆಯ ಹಕ್ಕು ಪಡೆದಿರುವವರ ಒಪ್ಪಿಗೆಯಿಂದ ಮತ್ತು ಸಹಕಾರದಿಂದ ಕಾರ್ಯರೂಪಕ್ಕೆ ತರಬಹುದು. ವ್ಯಕ್ತಿಸ್ವಾತಂತ್ರ್ಯವಿರುವುದು ರಾಜಕೀಯದಲ್ಲೇ ಅಲ್ಲ, ಕೈಗಾರಿಕೆಯಲ್ಲೇ ಅಲ್ಲ, ಅದು ಕುಟುಂಬಜೀವನದಲ್ಲೂ ಇದೆ. ಕುಟುಂಬದ ಒಬ್ಬೊಬ್ಬನೂ ಒಬ್ಬ ವ್ಯಕ್ತಿ. ಆಯಾ ವ್ಯಕ್ತಿಯೂ ತನ್ನತನವನ್ನು ಬೆಳೆಯಿಸಿಕೊಳ್ಳುವ ಹಕ್ಕನ್ನು ಪಡೆದಿರುತ್ತಾನೆ ಅಥವಾ ಪಡೆದಿರುತ್ತಾಳೆ. ಆ ವ್ಯಕ್ತಿತ್ವವನ್ನು ಗೌರವಿಸಿ ಒಬ್ಬೊಬ್ಬನೂ ಅದನ್ನು ಬೆಳಸಿಕೊಳ್ಳಲು ಸಮಾಜ ಸಂಸ್ಥೆಗಳು ಸಹಾಯಮಾಡಬೇಕು. ಹಾಗೆ ಸಹಾಯಮಾಡುವ ಸಂಸ್ಥೆಗಳೇ ಪ್ರಜಾಪ್ರಭುತ್ವಕ್ಕೆ ಸಮ್ಮತವಾದ ಸಂಸ್ಥೆಗಳು.

ಹೀಗೆ ಹೇಳಿದಾಗ ಸಮಾಜವು ವ್ಯಕ್ತಿಯ ಬೆಳವಣಿಗೆಯನ್ನು ನಿರ್ಧರಿಸುವುದಿಲ್ಲವೆಂದು ನಾವು ತಿಳಿಯಕೂಡದು. ವ್ಯಕ್ತಿಯು ಸಮಾಜದಿಂದ ಎಷ್ಟೋ ಉಪಕಾರ ಪಡೆಯುತ್ತಾನೆ. ಬಹುಶಃ ಒಬ್ಬನ ವ್ಯಕ್ತಿತ್ವದಲ್ಲಿ ಹತ್ತರಲ್ಲಿ ಒಂಬತ್ತರಷ್ಟನ್ನು ಅವನ ತಂದೆತಾಯಿಯರು, ನೆರೆಹೊರೆಯವರು. ಪಾಠಶಾಲೆಗಳು, ಕ್ರೀಡಾಸಂಸ್ಥೆಗಳು ರೂಪುಗೊಳಿಸಬಹುದು. ಕುಟುಂಬವಾಗಲಿ. ನೆರೆಹೊರೆಯಾಗಲಿ, ಪಾಠಶಾಲೆಗಳಾಗಲಿ. ಕ್ರೀಡಾಸಂಸ್ಥೆಗಳಾಗಲಿ ಇವೆಲ್ಲವೂ ಏನೇ ಮಾಡಲೀ. ಅವು ಉಳಿದ ಹತ್ತನೆಯ ಒಂದು ಭಾಗದ ವ್ಯಕ್ತಿತ್ವವನ್ನು ನಿರ್ಧರಿಸುವುದಕ್ಕಾಗುವುದಿಲ್ಲ. ಒಬ್ಬ ಹುಡುಗನ ತಂದೆಯು ತನ್ನಂತೆ ತನ್ನ ಮಗನೂ ವೈದ್ಯವೃತ್ತಿಯನ್ನು ಅವಲಂಬಿಸಲೆಂದು ಅದಕ್ಕೆ ಅನುಕೂಲವಾದ ಎಲ್ಲ ಬಗೆಯ ವಾತಾವರಣವನ್ನೂ ಕಲ್ಪಿಸಿ ಕೊಡಬಹುದು. ಆದರೆ ಬೆಳೆದ ಮೇಲೆ ಆ ಹುಡುಗನು ವೈದ್ಯನಾಗಲು ಇಷ್ಟವಿಲ್ಲದೆ, ಭೂಗರ್ಭ ಸಂಶೋಧಕನಾಗಲು, ಸಸ್ಯವರ್ಗ ಸಂಶೋಧಕನಾಗಲು ಇಷ್ಟಪಡಬಹುದು. ವಿಧಿಯಿಲ್ಲ ಅವನ ತಂದೆ ಆದಕ್ಕೆ ಒಪ್ಪಲೇಬೇಕಾಗಬಹುದು. ಮಗುವಿನಲ್ಲಿರುವ ತನ್ನತನವು ವಿಕಾಸಗೊಳ್ಳುವುದಕ್ಕೆ ಅವಕಾಶಕೊಡದಿದ್ದರೆ ಅದು ಮಗುವಿಗೂ ಹಾನಿಕರ, ಸಮಾಜಕ್ಕೂ ಹಾನಿಕರ. ಹೆಣ್ಣುಮಕ್ಕಳು ತಾಯಿಯರಾಗಿ ಮನೆಯಲ್ಲೇ ಉಳಿಯಬೇಕೆಂದು ತಂದೆತಾಯಿಯರ ಇಚ್ಛೆ. ಇದಕ್ಕೆ ಅನುಸಾರವಾಗಿ ಬೆಳೆದ ಶೇಕಡ ೯೦ ಹೆಣ್ಣುಮಕ್ಕಳಿಗೆ ಅದೇ ಇಷ್ಟವಾಗುತ್ತದೆ. ಆದರೆ ನೂರಕ್ಕೆ ಹತ್ತುಜನ ತಾವು ಉಪಾಧ್ಯಾಯಿನಿಯರಾಗಿಯೋ, ಡಾಕ್ಟರಾಗಿಯೋ ಇರಬೇಕೆಂದು ಆಸೆಪಡುತ್ತಾರೆ. ಅವರ ಆಸೆಯನ್ನು ತಡೆಗಟ್ಟಿದರೆ ಅದರಿಂದ ಅವರಿಗೂ ಹಾನಿ, ಸಮಾಜಕ್ಕೂ ಹಾನಿ.

ಹೆಂಗಸರು ಗಂಡಸರಂತೆ ತಮಗೆ ಇಷ್ಟಬಂದ ವೃತ್ತಿಗಳನ್ನು ಅವಲಂಬಿಸಿ, ಕುಟುಂಬಿಗಳಾಗಿ ಇರಲು ಕೆಲವು ಅಡಚಣೆಗಳಿವೆ. ಅವರಿಗೆ ಸರಿಸಮನಾದ ಗಂಡನು ದೊರೆಯುವುದೂ ಕಷ್ಟ. ಹಾಗೆ ದೊರೆತರೂ ಅವರಿಬ್ಬರೂ ಒಂದೇ ಕಡೆ ಇರಲು ಸಾಧ್ಯವಾಗದಿರಬಹುದು. ಗಂಡನೊಂದು ಊರಿನಲ್ಲಿ, ಹೆಂಡತಿಯೊಂದು ಊರಿನಲ್ಲಿ ಇದ್ದರೆ ಅವರ ದಾಂಪತ್ಯಜೀವನ ಎಷ್ಟುಮಟ್ಟಿಗೆ ಸುಖವಾಗಿರಬಹುದೆಂಬುದನ್ನು ಸುಲಭವಾಗಿ ಚಿತ್ರಿಸಿಕೊಳ್ಳಬಹುದು. ಹೆಂಡತಿಯು ಗರ್ಭಿಣಿಯಾದರೆ ನಾಲ್ಕು ತಿಂಗಳ ಕಾಲವಾದರೂ ಕೆಲಸ ಬಿಟ್ಟಿರಬೇಕು. ಹೆರಿಗೆಯಾಗಿ ಬಾಣಂತಿತನ ಮುಗಿದ ಮೇಲೆ ಮಗುವನ್ನು ನೋಡಿಕೊಳ್ಳಲು, ಅದಕ್ಕೆ ಹಾಲು ಕೊಡುವ ದಾದಿಯನ್ನು ನೇಮಿಸಬೇಕು. ಇಷ್ಟಾದರೂ ಮಗುವಿಗೆ ತಾಯಿಯಿಂದ ದೊರೆಯಬೇಕಾದಷ್ಟು ಪೋಷಣೆ ದೊರೆಯುವುದಿಲ್ಲ. ತಾಯಿಗೂ ತಾಯಿತನದ ಸುಖವಿಲ್ಲ. ಬಹುಶಃ ತಾಯಿಗೆ ಮಗುವಿನಲ್ಲಿ ಬೆಳೆಯಬೇಕಾದಷ್ಟು ಪ್ರೀತಿಯೂ ಬೆಳೆಯುವುದಿಲ್ಲ. ಆ ಹೆಂಗಸು ಮದುವೆಯಾಗುವುದು ಯಾವ ಸುಖಕ್ಕಾಗಿ, ಯಾರ ಸುಖಕ್ಕಾಗಿ? ರಷ್ಯಾ ದೇಶದಲ್ಲಿ ಕೆಲಸಕ್ಕೆ ಸೇರಿಕೊಂಡ ಹೆಂಗಸರು ಗರ್ಭಿಣಿಯರಾದಾಗ ಸಂಬಳ ಸಹಿತ ೧೨೭ ದಿನಗಳ ರಜ ದೊರೆಯುತ್ತದೆ. ಹೆರಿಗೆ ಆಸ್ಪತ್ರೆಯಲ್ಲಿ ಉಚಿತವಾದ ಉಪಚಾರ ದೊರೆಯುತ್ತದೆ. ಮಕ್ಕಳನ್ನು ನೋಡಿಕೊಳ್ಳಲು

ಅನುಕೂಲವಾದ ಸಂಸ್ಥೆಗಳಿವೆ. ಇಂಥ ಅನುಕೂಲಗಳು ಅಮೇರಿಕಾದಲ್ಲೂ ಇರುವುದಿಲ್ಲ. ನಮ್ಮ ದೇಶದಲ್ಲಂತೂ ಇಲ್ಲವೇ ಇಲ್ಲ. ಸರ್ಕಾರವು ಎಷ್ಟೇ ಅನುಕೂಲಗಳನ್ನು ಮಾಡಿಕೊಡಲಿ. ಅಂಥವರ ಸಂಸಾರ ಊನವಾದ ಸಂಸಾರವಾಗುತ್ತದೆಯೇ ಹೊರತು ಆದರ್ಶ ಸಂಸಾರ ವಾಗಲಾರದು. ಹೆಂಡತಿ ಮತ್ತು ತಾಯಿಯಾಗಬಯಸುವವಳು ತನ್ನ ಜೀವನವನ್ನು ಕುಟುಂಬಕ್ಕಾಗಿಯೇ ಮೀಸಲಾಗಿಡಬೇಕು.

ಪ್ರಜಾಸತ್ತ್ವಸಮಾಜದ ಗುರಿ ಆರ್ಥಿಕಸಮಾನತೆ ಮತ್ತು ಸಾಮರ್ಥ್ಯಸಮಾನತೆ ಎಂಬ ತಪ್ಪು ಅಭಿಪ್ರಾಯವಿದೆ. ಈ ಸಮಾನತೆಗಳು ರಷ್ಯಾದಲ್ಲೂ ಇಲ್ಲ, ಎಲ್ಲಿಯೂ ಇಲ್ಲ. ಒಬ್ಬನು ಮತ್ತೊಬ್ಬನನ್ನು ಅಧೀನ ಮಾಡಿಕೊಳ್ಳುವಷ್ಟು ಆರ್ಥಿಕಸಮಾನತೆ ಇರಕೂಡದೇ ಹೊರತು. ಎಲ್ಲರಿಗೂ ಒಂದೇ ಆದಾಯವಿರಬೇಕೆಂಬ ತತ್ತ್ವವನ್ನು ಬಹುಶಃ ಬುದ್ಧಿಶಾಲಿಗಳಾದವರು ಯಾರೂ ಬೋಧಿಸಿಲ್ಲ; ಅದನ್ನು ನಡವಳಿಕೆಗೆ ತರುವುದಂತೂ ಅಸಾಧ್ಯ. ಸಾಮರ್ಥ್ಯದಲ್ಲಿ ಸಮಾನತೆ ಸ್ವಾಭಾವಿಕವಾಗಿ ಇರುವುದೂ ಇಲ್ಲ. ಅದನ್ನು ಯಾವ ವಿಧವಾದ ತರಪೇತಿನಿಂದಲೂ ಸಾಧಿಸಲಾಗುವುದಿಲ್ಲ. ವ್ಯಕ್ತಿತ್ವದ ವ್ಯತ್ಯಾಸಗಳು ಸಹಜವಾದುವೆಂದು ತಿಳಿದು ಹೊಟ್ಟೆಕಿಚ್ಚು ಪಡದೆ ಸಹನೆ. ಸೌಹಾರ್ದದಿಂದ ಬಾಳುವುದು ಪ್ರಜಾಸತ್ತ್ವ ಸಮಾಜಕ್ಕೆ ಅತ್ಯಗತ್ಯವಾದ ನೀತಿ, ಈ ನೀತಿಯನ್ನು ಬೋಧಿಸಲು ಮತ್ತು ಆಚರಿಸಲು ಕುಟುಂಬದಷ್ಟು ಅನುಕೂಲವಾದ ಸಂಸ್ಥೆ ಬೇರೊಂದಿಲ್ಲ. ಪ್ರಜಾಸತ್ತ್ವಸಂಪ್ರದಾಯವು ಸಮಾಜದಲ್ಲಿ ಬೇರೂರಬೇಕಾದರೆ, ಅದು ಸಮಾಜದಲ್ಲಿ ಸತ್ಪರಿಣಾಮಕಾರಿಯಾಗಬೇಕಾದರೆ ಕುಟುಂಬದಲ್ಲಿ ಆ ಸತ್ತ್ವವನ್ನು ಬೆಳಸಬೇಕು. ಕುಟುಂಬದಲ್ಲಿ ಸೇರಿದ ಪ್ರತಿಯೊಬ್ಬರೂ ಅದರ ಹಿತದ ವಿಚಾರವಾಗಿ ಆಲೋಚಿಸಿ, ಎಲ್ಲರ ಅಭಿಪ್ರಾಯಗಳನ್ನೂ ಸಮನ್ವಯಗೊಳಿಸಿ ಸಮನ್ವಯವಾದ ಅಭಿಪ್ರಾಯದಂತೆ ಸಂಸಾರವನ್ನು ನಡೆಸುವುದನ್ನು ಕಲಿಯಬೇಕು. ಹೀಗೆ ಕಲಿತವರು ಪೌರರಾಗಲು ಅರ್ಹರಾಗುತ್ತಾರೆ. ಸಾರ್ವಜನಿಕ ಆಡಳಿತದಲ್ಲಿ ಪ್ರಜಾಸತ್ತ್ವವು ವಿಕಾಸವಾಗುತ್ತದೆ. ಅಮೇರಿಕಾದ ಕೆಲವು ಕುಟುಂಬಗಳಲ್ಲೂ, ಕಮ್ಯೂನಿಸ್ಟ್ ರಷ್ಯಾದ ಕೆಲವು ಕುಟುಂಬಗಳಲ್ಲೂ ಈ ಸಂಪ್ರದಾಯ ಸ್ವಲ್ಪ ಮಟ್ಟಿಗಿದೆ. ಭಾರತದಲ್ಲೂ ಅಲ್ಲೊಂದು ಇಲ್ಲೊಂದು ಅಪರೂಪವಾದ ಕುಟುಂಬಗಳಲ್ಲಿ ಅದು ಇದೆಯಾದರೂ ಅದು ನಮ್ಮ ಕುಟುಂಬಗಳ ಸಂಪ್ರದಾಯವೆಂದು ಹೇಳುವಷ್ಟು ಮಟ್ಟಿಗಿಲ್ಲ. ಅದೂ ನಮ್ಮ ಸಂಪ್ರದಾಯವೆಂದು ಹೇಳುವಷ್ಟು ಮಟ್ಟಿಗೆ ಅದು ಬೆಳೆಯಬೇಕು. ಅಂಥ ಸಂಪ್ರದಾಯ ವಿರುವ ಕುಟುಂಬದಲ್ಲಿ ತೊಡಕಿನ ಪ್ರಶ್ನೆಗಳು ಹುಟ್ಟುವುದು ಕಡಿಮೆಯಾಗುತ್ತದೆ. ಹಾಗೆ ಹುಟ್ಟಿದರೂ ಅವುಗಳು ಹೆಚ್ಚು ಕ್ಲೇಶವಿಲ್ಲದೆ ಪರಿಹಾರವಾಗುತ್ತವೆ.

ಕುಟುಂಬಗಳಲ್ಲಿ ಈ ಸಂಪ್ರದಾಯವು ಕುದುರಲು ಕುಟುಂಬಕ್ಕೆ ಸೇರಿದವರೆಲ್ಲರೂ ಸರಿಯಾದ ವಿದ್ಯಾಭ್ಯಾಸವನ್ನು ಪಡೆದಿರಬೇಕು. ಮತ್ತು ಅದಕ್ಕೆ ತಕ್ಕ ಸಂಸ್ಕೃತಿ ಪಡೆದಿರಬೇಕು. ಕುಟುಂಬದವರು ತಮ್ಮ ಕಷ್ಟ ಸುಖಗಳನ್ನು, ತಮ್ಮ ತಪ್ಪು ನೆಪ್ಪುಗಳನ್ನು, ತಮ್ಮ ಸೋಲು ಗೆಲವು ಗಳನ್ನು ಇತರರೊಡನೆ ಮರೆಮಾಚದೆ ಹೇಳಿಕೊಳ್ಳುವಂತಾಗಬೇಕು. ಕೆಲವು ವೇಳೆ ನಮ್ಮ

ಜೀವನಕ್ರಮದಲ್ಲಿ ಬಹು ಬೇಗನೆ ಬದಲಾವಣೆಗಳಾಗುತ್ತವೆ. ಆದರೆ ನಮ್ಮ ಸಂಸ್ಕೃತಿ ಅದಕ್ಕೆ ಸಮನಾಗಿ ಬದಲಾಯಿಸದೆ ಹಿಂದೆ ಬೀಳುತ್ತದೆ. ಹೆಂಗಸರಿಗೆ ಕೆಲಸ ಮಾಡಿ ಸಂಪಾದಿಸಲು ಅವಕಾಶ ಜಾಗ್ರತೆಯಾಗಿ ದೊರೆಯುತ್ತದೆ. ಆದರೆ ಆ ಬದಲಾವಣೆಗೆ ತಕ್ಕಂತೆ ಕುಟುಂಬ ಜೀವನದಲ್ಲಿ ಮಾರ್ಪಾಟೂ, ಕೆಲಸಕ್ಕೆ ಸೇರಿಕೊಂಡ ಸ್ಥಳದಲ್ಲಿ ಸಂಸಾರಿಗಳಾದ ಹೆಂಗಸರಿಗೆ ಬೇಕಾದ ಅನುಕೂಲಗಳೂ ಅಷ್ಟೇ ಜಾಗ್ರತೆಯಾಗಿ ಏರ್ಪಡುವುದಿಲ್ಲ. ಆದ್ದರಿಂದ ಕೆಲಸಕ್ಕೆ ಸೇರಿದ ಮತ್ತು ವೃತ್ತಿಗಳನ್ನವಲಂಬಿಸಿದ ಹೆಂಗಸರು ಮದುವೆಯಾಗದೆ ಉಳಿಯಬೇಕಾಗುತ್ತದೆ ಅಥವಾ ತುಂಬ ಕಷ್ಟದಿಂದ ದಾಂಪತ್ಯ ಜೀವನವನ್ನು ಬೆಳಸಬೇಕಾಗುತ್ತದೆ.

ಕುಟುಂಬವು ನಮ್ಮ ಸಮಾಜದ ಪ್ರಥಮ ಸಂಸ್ಥೆ. ಒಂದು ಸಮಾಜದ ನೂರಕ್ಕೆ ನೂರು ಜನ ಆ ಸಂಸ್ಥೆಗೆ ಸೇರಿದವರು. ಅದಕ್ಕೆ ಸೇರಿದವರು ನೆಮ್ಮದಿಯಾಗಿದ್ದರೆ ಇಡೀ ಸಮಾಜ ನೆಮ್ಮದಿಯಾಗಿರುತ್ತದೆ. ಸಮತಾನೀತಿಯನ್ನೂ, ಸಮಾಜಸುರಕ್ಷತೆಯ ಧ್ಯೇಯವನ್ನು ಅವಲಂಬಿಸಿರುವ ನಮ್ಮ ಇಂದಿನ ಸರ್ಕಾರ ಕುಟುಂಬದ ಸುರಕ್ಷಣೆಗೆ ಅಗತ್ಯವಾದ ರಚನಾತ್ಮಕ ಕಾರ್ಯಗಳನ್ನು ಕೈಕೊಳ್ಳಬೇಕು. ಅದು ಬರಿಯ ಕಾನೂನುಗಳನ್ನು ಮಾಡುವ ಸಂಸ್ಥೆಯಾದರೆ ಅದು ತನ್ನ ಧ್ಯೇಯವನ್ನು ಸಾಧಿಸಿದಂತಾಗುವುದಿಲ್ಲ.

## ಟಿಪ್ಪಣಿ

### ಕವಿ ಮತ್ತು ಕೃತಿ

ಈ ಪಠ್ಯಭಾಗವನ್ನು ಶ್ರೀಮಾನ್ ಜಿ. ಹನುಮಂತರಾವ್ ಅವರ 'ಕುಟುಂಬಜೀವನ' ಎಂಬ ಗ್ರಂಥದಿಂದ ಎತ್ತಿಕೊಳ್ಳಲಾಗಿದೆ. ೨೪-೮-೧೮೯೮ ರಂದು ತುಮಕೂರಿನಲ್ಲಿ ಜನಿಸಿದ ಜಿ. ಹನುಮಂತರಾಯರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ತತ್ವಶಾಸ್ತ್ರದ ಅಧ್ಯಾಪಕರಾಗಿದ್ದು, ಉಪಪ್ರಾಧ್ಯಾಪಕರಾಗಿದ್ದು, ಪುಸ್ತಕಭಂಡಾರದ ಮುಖ್ಯಾಧಿಕಾರಿಗಳಾಗಿ ವಿಶ್ರಾಂತರಾದರು. ವಿಶ್ವವಿದ್ಯಾನಿಲಯದ ಅಧ್ಯಾಪಕಸಂಘದ ಕಾರ್ಯದರ್ಶಿಗಳಾಗಿ ಕನ್ನಡನಾಡಿನಲ್ಲೆಲ್ಲಾ ಪ್ರಚಾರೋಪನ್ಯಾಸಗಳನ್ನೇರ್ಪಡಿಸಿ, ವಿಶ್ವವಿದ್ಯೆ ಜನಸಾಮಾನ್ಯರಲ್ಲಿ ಪ್ರಸಾರವಾಗಲು ಶ್ರಮಿಸಿದವರು ಇವರು. ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಪುಸ್ತಕ ಮಾಲೆಯನ್ನು ಆರಂಭಿಸಿದ ಕೀರ್ತಿ ಇವರಿಗೆ ಸಲ್ಲಬೇಕು. ಇವರ ಪಾಂಡಿತ್ಯ ನಿಷ್ಕೃಷ್ಟವಾದುದು, ಇವರ ಬರವಣಿಗೆ ನಿರ್ದುಷ್ಟವಾದುದು, ಸ್ಪಷ್ಟವಾದುದು. ಕ್ಲಿಷ್ಟವಾದ ಶಾಸ್ತ್ರ ವಿಷಯಗಳನ್ನು ಸರಳವಾಗಿ, ನಿರರ್ಗಳವಾಗಿ ಬರೆಯುವುದರಲ್ಲಿ ಇವರದು ಎತ್ತಿದ ಕೈ. 'ಸಮಾಜದ ರೋಗರುಜಿನಗಳು' 'ಋಗ್ವೇದ ಸೂಕ್ತಿಗಳು' 'ತರ್ಕಶಾಸ್ತ್ರ' 'ವಿಜ್ಞಾನ' ಇತ್ಯಾದಿ ಗ್ರಂಥಗಳು ಇವರ ಕೃತಿಗಳಲ್ಲಿ ಕೆಲವು.

ಆಧುನಿಕ ಭಾರತದಲ್ಲಿ ತಲೆಯೆತ್ತಿ ನಿಂತಿರುವ ಕುಟುಂಬ ಜೀವನದ ಹಲವು ಸಮಸ್ಯೆಗಳನ್ನು ಇಲ್ಲಿ ಸಮರ್ಥವಾಗಿ ಸಮಾಲೋಚಿಸಲಾಗಿದೆ.

## ಕಠಿಣ ಪದಗಳ ಅರ್ಥ :

ಅವಿಭಕ್ತಕುಟುಂಬ—ಒಂದು ಮನೆತನಕ್ಕೆ ಸೇರಿದ ಜನ (ಮಕ್ಕಳು, ಮೊಮ್ಮಕ್ಕಳು. ಮರಿಮಕ್ಕಳು ಇತ್ಯಾದಿ) ಬೇರೆ ಬೇರೆ ಆಗದೆ ಒಂದು ಕುಟುಂಬದಂತೆ ವಾಸಿಸುವುದು. ಮುಕ್ಕಾಲುಪಾಲು—ನಾಲ್ಕನೆ ಮೂರುಭಾಗ ; (ಮೂರು + ಕಾಲು—ಮುಕ್ಕಾಲು + ಪಾಲು) ಜೀವನ + ಉಪಾಯ–ಜೀವನೋಪಾಯ (ಗು. ಸಂ.) ಅತಿವೃಷ್ಟಿ—ಹೆಚ್ಚು ಮಳೆ. ಅನಾವೃಷ್ಟಿ–ಮಳೆ ಬಾರದಿರುವುದು. ಯಾನ ವಾಹನ ಸೌಕರ್ಯ—ಇಲ್ಲಿ ಯಾನ ಎನ್ನುವುದು ಪ್ರಯಾಣ ಎನ್ನುವ ಅರ್ಥದಲ್ಲಿಯೂ, ವಾಹನ ಎನ್ನುವುದು ವಸ್ತುಗಳನ್ನು ಸಾಗಿಸುವುದು ಎನ್ನುವ ಅರ್ಥದಲ್ಲಿಯೂ ಬಳಕೆಯಾಗಿದೆ (ಬಸ್ಸು, ಲಾರಿ). ಆದ್ಯಕರ್ತವ್ಯ—ಮೊದಲ ಕೆಲಸ. ಶ್ರಮಿಸಲು—ದುಡಿಯಲು. ವೈಷಮ್ಯ—ದ್ವೇಷ. ಕೋಮು—ಜಾತಿ ; ಪಂಗಡ. ಆರ್ಥಿಕ ಸ್ಥಿತಿ—ಸಂಪತ್ತಿನ ಸ್ಥಿತಿ. ದಾರುಣ— ಕಠಿಣ. ಸೌಹಾರ್ದ—ಮಿತ್ರತ್ವ ; ಸ್ನೇಹ.

ಪಾಶ್ಚಾತ್ಯದೇಶ—ಪಶ್ಚಿಮದೇಶ. ವಿಮರ್ಶೆ—ಗುಣದೋಷಗಳನ್ನು ಗಮನಿಸುವುದು. ಭ್ರಷ್ಟ —ಸಮಾಜ ಬಾಹಿರ. ಸಂಶೋಧಕ—ಹೊಸ ಹೊಸ ವಿಷಯಗಳನ್ನು ಕಂಡುಹಿಡಿಯುವವನು. ವಿಕಾಸ—ಅರಳುವುದು. ಕ್ಲೇಶ—ತೊಂದರೆ.

## ಪ್ರಶ್ನೆಗಳು :

೧. ಹಳ್ಳಿಯವರು ಮಳೆಯಿಂದ ಸುಖಪಡುವುದಕ್ಕಿಂತ ನರಳುವುದೇ ಹೆಚ್ಚು. ಏಕೆ ?
೨. ಭಾರತ ಸರ್ಕಾರವು ಹಳ್ಳಿಯ ವಿಚಾರದಲ್ಲಿ ಯಾವ ಸಂಕಲ್ಪವನ್ನು ತಳೆದಿದೆ ?
೩. ನಮ್ಮ ವ್ಯವಸಾಯಕ್ರಮಕ್ಕೂ, ರಷ್ಯ ಮತ್ತು ಅಮೇರಿಕಗಳ ಕ್ರಮಕ್ಕೂ ಇರುವ ವ್ಯತ್ಯಾಸವೇನು ?
೪. ಪಾಶ್ಚಾತ್ಯರ ಸಂಸ್ಕೃತಿಯ ಸಂಪರ್ಕದಿಂದ ನಮ್ಮಲ್ಲಿ ಆಗಿರುವ ಮಾರ್ಪಾಡುಗಳೇನು ?
೫. ಪ್ರಜಾಪ್ರಭುತ್ವಕ್ಕೆ ಸಮ್ಮತವಾದ ಸಂಸ್ಥೆಗಳ ರೀತಿ ನೀತಿಗಳು ಹೇಗಿರಬೇಕು ?
೬. ವ್ಯಕ್ತಿತ್ವವು ರೂಪುಗೊಳ್ಳುವ ಸನ್ನಿವೇಶಗಳಾವುವು ?
೭. ಆದರ್ಶಸಂಸಾರಕ್ಕೆ ಅಗತ್ಯವಾದ ಸನ್ನಿವೇಶಗಳು ಭಾರತ ಮತ್ತು ರಷ್ಯಾ ದೇಶಗಳಲ್ಲಿ ಯಾವ ರೀತಿಯಲ್ಲಿವೆ ?
೮. ಪ್ರಜಾಸತ್ತಾತ್ಮಕಸಮಾಜವು ವಿಕಾಸಗೊಳ್ಳುವ ಬಗೆ ಹೇಗೆ ?
೯. ಇಂದಿನ ನಮ್ಮ ಕುಟುಂಬಜೀವನದ ಸಮಸ್ಯೆಗಳನ್ನು ಸಂಗ್ರಹವಾಗಿ ಹೇಳಿರಿ.

ಈ ವಾಕ್ಯಗಳ ಅಭಿಪ್ರಾಯವೇನು ?

೧. ಹಾಸಿಗೆ ಇದ್ದಷ್ಟು ಕಾಲುಚಾಚಿಕೊಳ್ಳದಿದ್ದರೆ ಕಾಲಾಂತರದಲ್ಲಿ ಹಾಸಿಗೆಯಿಲ್ಲದೆಯೇ ಮಲಗಬೇಕಾದ ಪ್ರಮೇಯ ಒದಗಬಹುದು.

೨. ಮಗುವಿನಲ್ಲಿರುವ ತನ್ನತನವು ವಿಕಾಸಗೊಳ್ಳುವುದಕ್ಕೆ ಅವಕಾಶ ಕೊಡದಿದ್ದರೆ ಅದು ಮಗುವಿಗೂ ಹಾನಿಕರ, ಸಮಾಜಕ್ಕೂ ಹಾನಿಕರ.

ವ್ಯಾಕರಣ :

ತದ್ಧಿತಾಂತಗಳು—ನಾಮಪ್ರಕೃತಿಗಳ ಮೇಲೆ ತದ್ಧಿತಪ್ರತ್ಯಯಗಳನ್ನು ಸೇರಿಸಿದರೆ ತದ್ಧಿತಾಂತಗಳಾಗುತ್ತವೆ. ಇವುಗಳಲ್ಲಿ ತದ್ಧಿತ ವಿಶೇಷಣಗಳು, ತದ್ಧಿತಾಂತ ಭಾವನಾಮಗಳು ಮತ್ತು ತದ್ಧಿತಾವ್ಯಯಗಳು ಎಂದು ಮೂರು ವಿಧ.

೧. ತದ್ಧಿತ ವಿಶೇಷಣಗಳು—'ತದ್ಧಿತ' ಎಂದರೆ ಅದರಲ್ಲಿ ತೊಡಗಿದವ ಅಥವಾ ಅದಕ್ಕೆ ಸಂಬಂಧಪಟ್ಟವ ಎಂದರ್ಥ. ನಾಮವಿಶೇಷಣಗಳು ನಾಮಪದಗಳೇ ಆಗಿರುವುದರಿಂದ ಇವನ್ನು ತದ್ಧಿತನಾಮಗಳೆಂದೂ, ತದ್ಧಿತ ವಿಶೇಷಣಗಳೆಂದೂ ಕರೆಯುವರು. **ಉದಾ.**—ಹೂವಾಡಿಗ, ಅಲರಿಚ, ಬಳೆಗಾರ ಇತ್ಯಾದಿ.

೨. ತದ್ಧಿತಾಂತ ಭಾವನಾಮಗಳು—ನಾಮಪ್ರಕೃತಿ ಮತ್ತು ವಿಶೇಷಣಗಳ ಮೇಲೆ ಭಾವವನ್ನು ತಿಳಿಸುವ ತನ, ಇಕೆ, ಪು, ಮೆ, ಉ ಮೊದಲಾದ ತದ್ಧಿತ ಪ್ರತ್ಯಯಗಳು ಸೇರಿ ತದ್ಧಿತಾಂತ ಭಾವನಾಮಗಳಾಗುವುವು. **ಉದಾ.**—ಬಡತನ, ಉನ್ನತಿಕೆ, ಬಿಳುಪು, ಹಿರಿಮೆ, ಕುರುಡು.

೩. ತದ್ಧಿತಾವ್ಯಯಗಳು—ಅಂತೆ, ಅಂತಿಕೆ, ವೋಲ್, ಅಂತೆವೋಲ್, ಕಿಂತ, ಗಿಂತ, ಹಾಗೆ, ತನಕ, ವರೆಗೆ, ಓಸುಗ, ಓಸ್ಕರ, ಸಲುವಾಗಿ ಮೊದಲಾದ ಲಿಂಗ, ವಚನ, ವಿಭಕ್ತಿಗಳನ್ನು ಹೊಂದದ ಪ್ರತ್ಯಯಗಳು ತದ್ಧಿತಾವ್ಯಯಗಳು. **ಉದಾ.**—ರಾಮನಿಗಿಂತ ಕುಶನು ಸಮರ್ಥ. ಸತ್ಯಕ್ಕೋಸ್ಕರ ಹೋರಾಡು.

****

# ಲೂಯಿ ಪ್ಯಾಶ್ಚರ್

---

—ಬಿ. ವಿ. ಸುಬ್ಬರಾಯಪ್ಪ

ಲೂಯಿ ಪ್ಯಾಶ್ಚರ್ ಫ್ರಾನ್ಸ್ ದೇಶದ ಡೂಲ್ ಎಂಬಲ್ಲಿ ಕ್ರಿ. ಶ. ೧೮೨೨ ನೇ ವರ್ಷದ ಡಿಸೆಂಬರ್ ತಿಂಗಳು ೨೭ನೇ ದಿನ ಹುಟ್ಟಿದನು. ಅವನ ತಂದೆಯ ಹೆಸರು ಜೋಸೆಫ್; ತಾಯಿ ಎತ್ತಿಯನೆತ್. ಚಮ್ಮಾರನಾದ ಜೋಸೆಫ್ ಚರ್ಮ ಹದಮಾಡುವುದರಲ್ಲಿ ನಿಪುಣನಾಗಿದ್ದನು. ಅಲ್ಲದೆ ಅವನು ಕಲೋಪಾಸಕನೂ ಹೌದು. ತಂದೆಯು ಪ್ರಕೃತಿಯ ಹಲವು ಸನ್ನಿವೇಶಗಳನ್ನು ಚಿತ್ರಿಸುತ್ತಿರುವಾಗ ಪ್ಯಾಶ್ಚರ್ ಅವುಗಳನ್ನು ಗಮನಿಸಿ ತಾನೂ ಚಿತ್ರಗಳನ್ನು ಬರೆಯಲು ಯತ್ನಿಸುವನು. ತಾಯಿಯ ಚಿತ್ರವನ್ನೂ, ತಂಗಿಯರ ರೂಪಾಕೃತಿಗಳನ್ನೂ ರೇಖಿಸಿ ತಂದೆಗೆ ತೋರಿಸಿ ಭೇಷ್ ಎನಿಸಿಕೊಂಡನು. ಆರ್ಬಾಯ್ ನಗರದ ಶಾಲೆಯೊಂದರಲ್ಲಿ ಪ್ಯಾಶ್ಚರ್‌ನಿಗೆ ಪ್ರಾಥಮಿಕ ವಿದ್ಯಾಭ್ಯಾಸವು ನಡೆಯಿತು. ತರಗತಿಯಲ್ಲಿ ಕುಳ್ಳಹುಡುಗನೆಂದರೆ ಪ್ಯಾಶ್ಚರ್. "ಇವನಷ್ಟು ನಿಷ್ಪ್ರಯೋಜಕನಾದ ಹುಡುಗನು ಶಾಲೆಯಲ್ಲೇ ಇಲ್ಲ" ಎಂಬುದು ಬಾಲ್ಯದಲ್ಲಿ ಉಪಾಧ್ಯಾಯನಿಂದ ಪ್ಯಾಶ್ಚರನಿಗೆ ಬಂದ ಪ್ರಶಸ್ತಿ. ಆದರೂ ಅವನು ತಣಿಯದ ಕುತೂಹಲದಿಂದ ಉಪಾಧ್ಯಾಯರನ್ನು ಒಂದಲ್ಲ ಒಂದು ಪ್ರಶ್ನೆ ಕೇಳುವನು. "ಪ್ರಶ್ನೆಗಳನ್ನು ಕೇಳುವುದಲ್ಲ. ಕೇಳಿದ ಪ್ರಶ್ನೆಗೆ ಉತ್ತರ ಹೇಳುವುದೇ ನಿನ್ನ ಕರ್ತವ್ಯ" ಎಂದು ಒಂದು ದಿನ ಅವನ ಉಪಾಧ್ಯಾಯನು ಗದರಿಸಿದನು. ಆ ಎಳೆ ವಯಸ್ಸಿನಲ್ಲಿಯೇ "ಮನಸ್ಸು ಮಾಡು, ಕರ್ತವ್ಯ ನಿಷ್ಠನಾಗು, ಕಾದು ನೋಡು—ಎಂಬ ಮೂರು ಮೂಲೆಗಲ್ಲುಗಳ ಮೇಲೆ ನನ್ನ ಕೀರ್ತಿ ಶಿಖರವನ್ನು ಕಟ್ಟುತ್ತೇನೆ" ಎಂದು ಅವನು ಬರೆದಿದ್ದನು.

ಪ್ಯಾರಿಸ್ ನಗರದ ಪ್ರಸಿದ್ಧ ವಿದ್ಯಾಸಂಸ್ಥೆಯಾದ ಇಕೋಲೆ ನಾರ್ಮಲ್ ಎಂಬಲ್ಲಿ ವ್ಯಾಸಂಗ ಮಾಡಬೇಕೆಂದು ಪ್ಯಾಶ್ಚರನಿಗೆ ಆಸೆ ಹುಟ್ಟಿತು. ಚಮ್ಮಾರನ ಮಗನು ಪ್ಯಾರಿಸ್ ನಗರದಲ್ಲಿ ವಾಸಿಸಲು ಸಾಧ್ಯವೇ? ಅಂತಹ ವಿದ್ಯಾಲಯದಲ್ಲಿ ಅಷ್ಟು ಬುದ್ಧಿಶಕ್ತಿ ಇಲ್ಲದ ಹುಡುಗನು ವಿದ್ಯಾಭ್ಯಾಸ ಮಾಡಲು ಆದೀತೆ? ಎಂದು ತಂದೆಯು ಶಂಕೆಪಟ್ಟನು. ಆದರೆ ಹಿತೈಷಿಗಳ ಬಲವಂತದಿಂದ ಮಗನನ್ನು ಪ್ಯಾರಿಸ್ ನಗರಕ್ಕೆ ಕಳುಹಿಸಿಕೊಡಲು ಒಪ್ಪಿದನು.

ಇಕೋಲೆ ನಾರ್ಮಲ್ ವಿದ್ಯಾಶಾಲೆಯನ್ನು ಸೇರಿದಾಗ ಪ್ಯಾಶ್ಚರನಿಗೆ ಹದಿನಾರು ವರ್ಷ. ಪ್ಯಾರಿಸ್ಸಿನ ವಾತಾವರಣವು ಅವನಿಗೆ ಸರಿಬೀಳಲಿಲ್ಲ. ಸ್ವಲ್ಪ ದಿನಗಳಲ್ಲಿಯೇ ಕಾಯಿಲೆ ಬಂದುದರಿಂದ ಅವನು ಮತ್ತೆ ಆರ್ಬಾಯ್ ನಗರವನ್ನು ಸೇರಬೇಕಾಯಿತು. ಅವನ ಮುಂದಿನ ವಿದ್ಯಾಭ್ಯಾಸವು ಬೆಜಾನ್ ಜೂನ್ ಕಾಲೇಜಿನಲ್ಲಿ ನಡೆಯಿತು. ಗಣಿತಶಾಸ್ತ್ರವೆಂದರೆ ಅವನಿಗೆ ತಲೆನೋವು. ಆದರೆ ರಸಾಯನಶಾಸ್ತ್ರವೆಂದರೆ ಆತನಿಗೆ ಪ್ರಾಣ. ಸಾರ್ಬಾನ್ ವಿಶ್ವವಿದ್ಯಾನಿಲಯದ ರಸಾಯನ ಶಾಸ್ತ್ರಜ್ಞನಾದ ಡೂಮಾಸನ ಉಪನ್ಯಾಸಗಳನ್ನು ಕೇಳಿ ಅವನಿಗೆ ರಸಾಯನಶಾಸ್ತ್ರದಲ್ಲಿ ಇನ್ನೂ ಆಸಕ್ತಿ ಹೆಚ್ಚಾಯಿತು. "ರಸಾಯನಶಾಸ್ತ್ರವು ಎಂತಹ ಸೋಜಿಗವನ್ನುಂಟುಮಾಡುವ ವಿಜ್ಞಾನವಿಭಾಗ! ಡೂಮಾಸನು ಕೇವಲ ವಿಜ್ಞಾನಿಯಲ್ಲ. ಅವನು ಕವಿಯೂ ಹೌದು. ಕುತೂಹಲವನ್ನು ಕೆರಳಿಸಿ ಕಲ್ಪನೆಯನ್ನು ಬೆಳಗಿಸುವ ಅವನ ಸಾಮರ್ಥ್ಯವೇನು ?" ಎಂದು ಅವನು ಆಶ್ಚರ್ಯಪಟ್ಟನು. ಮುಂದೆ ತಾನೂ ಒಬ್ಬ ರಸಾಯನಶಾಸ್ತ್ರಜ್ಞನಾಗಬೇಕೆಂಬ ಆಸೆ ಅವನಲ್ಲಿ ಚಿಗುರಿತು. ಅವನು ಪದವೀಧರನಾದಾಗ ರಸಾಯನಶಾಸ್ತ್ರದಲ್ಲಿ ಹೆಚ್ಚು ಅಂಕಗಳನ್ನು ಗಳಿಸಲಿಲ್ಲ. ಆದರೂ ರಾಸಾಯನಿಕ ಪ್ರಯೋಗಗಳನ್ನು ಕೈಗೊಳ್ಳಬೇಕೆಂದು ನಿರ್ಧರಿಸಿ ಅವನು ವಿಶ್ವವಿದ್ಯಾನಿಲಯದ ಪ್ರಯೋಗಮಂದಿರದಲ್ಲಿ ಕಾರ್ಯತತ್ಪರನಾದನು. ರಸಾಯನಶಾಸ್ತ್ರದಲ್ಲಿ ಡಾಕ್ಟರೇಟನ್ನು ಪಡೆಯಲು ಅಭ್ಯಾಸವನ್ನು ಮುಂದುವರಿಸಿದನು. ತನ್ನ ವೆಚ್ಚಕ್ಕೆ ಬೇಕಾದ ಹಣವನ್ನು ಗಳಿಸಲು ಅನೇಕ ವಿದ್ಯಾರ್ಥಿಗಳಿಗೆ ಬೆಳಗ್ಗೆ ಐದರಿಂದ ಏಳು ಗಂಟೆಯವರೆಗೆ ಪಾಠಗಳನ್ನು ಹೇಳಿಕೊಡುತ್ತಿದ್ದನು. ಮಿತವಾಗಿ ಖರ್ಚುಮಾಡಿಕೊಂಡು ಎಷ್ಟಿದ್ದರೆ ಅಷ್ಟರಲ್ಲಿ ತೃಪ್ತನಾಗುತ್ತಿದ್ದ. "ದೇವರ ದಯೆಯಿಂದ ನನಗೆ ಆಗಾಗ ತಲೆಯನೋವು ಬಂದು ಹಸಿವಿನ ಬೇಗೆಯನ್ನು ತಿಂದುಬಿಡುತ್ತಿತ್ತು" ಎಂದು ಅವನೇ ಹೇಳಿಕೊಂಡಿದ್ದಾನೆ. ಅಂತು ಅವನು ರಸಾಯನಶಾಸ್ತ್ರದಲ್ಲಿ ಡಾಕ್ಟರೇಟ್ ಪ್ರಶಸ್ತಿಯನ್ನು ಗಳಿಸಿದನು.

ಇಕೋಲೆ ನಾರ್ಮಲ್‌ನ ಪ್ರಾಧ್ಯಾಪಕ ಲಾರೆಂಟ್ ಎಂಬುವನ ಬಳಿ ಪ್ರಯೋಗಮಂದಿರದ ಸಹಾಯಕನಾಗಿ ಲೂಯಿ ಪ್ಯಾಶ್ಚರ್ ಕೆಲಸಕ್ಕೆ ಸೇರಿಕೊಂಡನು. ಅಲ್ಲಿ ಟಾರ್ಟಾರಿಕ್ ಆಮ್ಲದ ಹರಳುಗಳ ರೂಪದ ವಿಷಯವಾಗಿ ಪರಿಶೋಧನೆಗಳನ್ನು ನಡೆಸಲು ಆರಂಭಿಸಿದನು. ಈ ವೇಳೆಗೆ ಫ್ರಾನ್ಸ್‌ದೇಶದಲ್ಲಿ ರಾಜಕೀಯ ಕ್ರಾಂತಿಯುಂಟಾಯಿತು. ಪ್ಯಾರಿಸ್ ನಗರದ ಜನರು ದಂಗೆ ಎದ್ದು ರಾಜನನ್ನು ಓಡಿಸಿದರು. ಪ್ಯಾಶ್ಚರ್ ಪ್ರಜಾಸೇನೆಯಲ್ಲಿ ಯೋಧನಾಗಿ ಸೇರಿಕೊಂಡು ಸ್ವಾತಂತ್ರ್ಯಸಮರದಲ್ಲಿ ಭಾಗಿಯಾಗಿದ್ದನು. ಅದುವರೆಗೆ ತಾನು ಶೇಖರಿಸಿಟ್ಟಿದ್ದ ನೂರೈವತ್ತು ಫ್ರಾಂಕುಗಳನ್ನು "ಸ್ವದೇಶಕ್ಕಾಗಿ" ಎಂದು ನೇತುಹಾಕಿದ್ದ ಹುಂಡಿ ಪೆಟ್ಟಿಗೆಯೊಂದರೊಳಗೆ ಸಮರ್ಪಿಸಿದನು. ಕ್ರಾಂತಿಯು ಬೇಗ ಕೊನೆಗೊಂಡಿತು. ಕೂಡಲೇ ಪ್ಯಾಶ್ಚರ್ ತನ್ನ ಸಂಶೋಧನೆಗಳಲ್ಲಿ ನಿರತನಾದ. ಟಾರ್ಟಾರಿಕ್ ಆಮ್ಲದ ಹರಳುಗಳು ಎರಡು ಬಗೆಯಾಗಿವೆ. ಒಂದು ರೂಪದ ಹರಳಿನ ಮುಖಗಳು ಬಲಗಡೆ ಬಾಗಿರುವುವು ; ಇನ್ನೊಂದರದ್ದು ಎಡಗಡೆ ಬಾಗಿರುವುವು. ಇವೆರಡು ಹರಳುಗಳನ್ನು ಸೇರಿಸಿದರೆ ಆಗುವ ಮಿಶ್ರಣಕ್ಕೆ 'ರ್ಯಾಸೆಮಿಕ್ ಆಮ್ಲ'

ಎಂದು ಹೆಸರು. ಈ ಹರಳುಗಳ ಮೂಲಕ ಬೆಳಕಿನ ಕಿರಣಗಳನ್ನು ಹಾಯಿಸಿದರೆ ಕಿರಣಗಳ ಮಾರ್ಗವು ಹೇಗೆ ಬದಲಾಯಿಸುವುದೆಂದು ಪ್ಯಾಶ್ಚರ್ ತೋರಿಸಿದನು. ಈ ಫಲಿತಾಂಶಗಳನ್ನು ಅವನು ಹೊರಗೆಡವಿದಾಗ ಅವನಿಗೆ ಇಪ್ಪತ್ತಾರು ವರ್ಷ.

ಈ ಸಂಶೋಧನೆಗಳಿಂದ ಲೂಯಿ ಪ್ಯಾಶ್ಚರನಿಗೆ ಸ್ಟ್ರಾಸ್‌ಬರ್ಗ್ ವಿಶ್ವವಿದ್ಯಾನಿಲಯದಲ್ಲಿ ರಸಾಯನಶಾಸ್ತ್ರದ ಪ್ರಾಧ್ಯಾಪಕನಾಗಿ ಕೆಲಸ ದೊರಕಿತು. ಈ ತರುಣ ಪ್ರಾಧ್ಯಾಪಕನು ಕೈಗೊಂಡ ಮೊದಲನೆಯ ಪರಿಶೋಧನೆ ಎಂದರೆ ಯುವತಿಯೊಬ್ಬಳ ಮನಸ್ಸನ್ನು ತನ್ನ ಕಡೆಗೆ ಒಲಿಸಿಕೊಳ್ಳುವುದು. ಮೇರಿ ಎಂಬ ಸುಂದರಿಯಲ್ಲಿ ಅವನು ಪ್ರೇಮ ಬೆಳಸಿದನು. ಮೇರಿ ವಿಶ್ವವಿದ್ಯಾನಿಲಯದ ಮುಖ್ಯಾಧಿಕಾರಿಯ ಮಗಳು. ಪ್ಯಾಶ್ಚರ್ ತನ್ನಲ್ಲಿ ಅನುರಕ್ತನಾಗಿರುವನೆಂದು ಅವಳಿಗೆ ತಿಳಿದಿರಲಿಲ್ಲ. ಅವಳ ಅನುಮತಿಯನ್ನು ಪಡೆಯದೆ ಪ್ಯಾಶ್ಚರ್ ಅವಳ ತಂದೆಗೆ ಪತ್ರವೊಂದನ್ನು ಬರೆದನು. "ನನ್ನ ತಂದೆ ಚಮ್ಮಾರ. ನಾವು ಶ್ರೀಮಂತರಲ್ಲದಿದ್ದರೂ ಸುಖವಾಗಿ ಜೀವನ ನಡೆಸುತ್ತಿದ್ದೇವೆ. ತಂದೆಯ ಆಸ್ತಿಯೆಲ್ಲವನ್ನು ನನ್ನ ಮೂವರು ತಂಗಿಯರಿಗೆ ಕೊಡಲು ನಿಶ್ಚಯಿಸಿದ್ದೇನೆ. ಅಂದರೆ ನನಗಾಗಿ ಯಾವ ಸ್ವತ್ತೂ ಇಲ್ಲ. ನನಗಿರುವುದು ಉತ್ತಮ ದೇಹಸ್ಥಿತಿ. ಮನೋದಾರ್ಢ್ಯ ಮತ್ತು ನಿಮ್ಮ ವಿಶ್ವವಿದ್ಯಾನಿಲಯದಲ್ಲಿರುವ ಕೆಲಸ. ನನ್ನ ಇಡೀ ಜೀವನವನ್ನು ರಾಸಾಯನಿಕ ಸಂಶೋಧನೆಗಳನ್ನು ನಡೆಸಲು ಮೀಡುಪಾಗಿಡಬೇಕೆಂದು ನಿರ್ಧರಿಸಿದ್ದೇನೆ. ನಿಮ್ಮ ಮಗಳನ್ನು ಮದುವೆಯಾಗಲೂ ಇವೇ ನನ್ನ ಯೋಗ್ಯತೆಗಳು". ಈ ವಿಚಿತ್ರ ಪತ್ರವನ್ನು ಆ ಮುಖ್ಯಾಧಿಕಾರಿಯು ಮಗಳಿಗೆ ತೋರಿಸಿದನು. ಮಗಳು ಈ ಮದುವೆಗೆ ಇಷ್ಟಪಡಲಿಲ್ಲ. ಇದನ್ನರಿತ ಪ್ಯಾಶ್ಚರ್ ಮೇರಿಗೆ ಒಂದು ಕಾಗದವನ್ನು ಬರೆದು "ನನ್ನನ್ನು ಆತುರದಿಂದ ನಿರಾಕರಿಸಬೇಡ. ನಾವಿಬ್ಬರೂ ಕಲೆತ ಮೇಲೆ ಈ ನಿರಾಶಾಜನಕ ಬಾಹ್ಯದಲ್ಲಿ ಪೂರ್ಣ ಅನುರಾಗವು ಅಡಕವಾಗಿದೆ ಎಂದು ನಿನಗೆ ಗೊತ್ತಾಗುವುದು" ಎಂದು ತಿಳಿಸಿದನು. ಮೇರಿ ಪ್ಯಾಶ್ಚರನನ್ನು ಮದುವೆಯಾಗಲು ಮನಸ್ಸು ಮಾಡಿದಳು. ವಿವಾಹಕ್ಕೆಂದು ಚರ್ಚಿನಲ್ಲಿ ಎಲ್ಲವೂ ಸಿದ್ಧವಾಗಿವೆ. ವಧು, ವಧುವಿನ ತಂದೆ. ತಾಯಿ, ನೆಂಟರಿಷ್ಟರೆಲ್ಲರೂ ಸೇರಿದ್ದಾರೆ. ವರನ ಕಡೆಯವರೆಲ್ಲರೂ ನೆರೆದಿದ್ದಾರೆ. ಚರ್ಚಿನ ಪಾದ್ರಿಯೂ ವಧೂವರರನ್ನು ವಿಧ್ಯುಕ್ತವಾಗಿ ಹರಸಲು ಸಿದ್ಧನಾಗಿದ್ದಾನೆ. ಆದರೆ ವರನೇ ಎಲ್ಲೂ ಕಾಣಲಿಲ್ಲ. ಅವನ ಸ್ನೇಹಿತನೊಬ್ಬನಿಗೆ ಏನೋ ಹೊಳೆದಂತಾಗಿ ತಟ್ಟನೆ ಚರ್ಚಿನಿಂದ ಹೊರಟು ಪ್ರಯೋಗಮಂದಿರವನ್ನು ಹೊಕ್ಕನು. ಅಲ್ಲಿ ಲೂಯಿ ಪ್ಯಾಶ್ಚರ್ ತನ್ನ ಮದುವೆಯನ್ನೇ ಮರೆತು ಯಾವುದೋ ಪ್ರಯೋಗವನ್ನು ಮಾಡುತ್ತಾ ಆಲೋಚನಾಮಗ್ನನಾಗಿದ್ದಾನೆ! ಆ ಪ್ರಯೋಗವನ್ನು ಮುಗಿಸಿಯೇ ಅವನು ಚರ್ಚಿಗೆ ಬಂದದ್ದು. ಅಂತೂ ವಿವಾಹವಾಯಿತು. ಅವನನ್ನು ಮದುವೆಯಾದುದಕ್ಕೆ ಮೇರಿಗೆ ಎಂದೂ ಪಶ್ಚಾತ್ತಾಪ ಬರಲಿಲ್ಲ. ಅವಳದು ತ್ಯಾಗಮಯವಾದ ನಾರೀಜೀವನ. ಆಕೆ ಆದರ್ಶಪತ್ನಿಯಾಗಿ ಪ್ಯಾಶ್ಚರನ ವೈಜ್ಞಾನಿಕಸಂಶೋಧನೆಗಳಲ್ಲಿ ಸಹಾಯಕಳಾದಳು; ಅವನ ಟಿಪ್ಪಣಿಗಳನ್ನು ಬರೆಯುವುದರಲ್ಲಿಯೂ ನೆರವಾದಳು.

ಜರ್ಮನಿಯ ದೊರೆ ಮೊದಲನೆಯ ಕೈಸರ್ ಫ್ರಾನ್ಸನ್ನು ವಶಪಡಿಸಿಕೊಳ್ಳಬೇಕೆಂದು ಯುದ್ಧವನ್ನು ಆರಂಭಿಸಿದನು. ಪ್ಯಾಶ್ಚರನಿಗೆ ಪಾರ್ಶ್ವವಾಯುವಿನಿಂದ ಕೈ ಊನವಾಗಿದ್ದ ಕಾರಣ ಅವನು ಫ್ರಾನ್ಸಿನ ಸೈನ್ಯಕ್ಕೆ ಸಿಪಾಯಿಯಾಗಿ ಸೇರಿಕೊಳ್ಳಲಾಗಲಿಲ್ಲ. ಪ್ಯಾರಿಸ್ ನಗರವನ್ನು ತ್ಯಜಿಸಿ ಅವನು ಆರ್ಬಾಯ್ ನಗರಕ್ಕೆ ಬಂದನು. ಫ್ರೆಂಚ್ ಚಕ್ರವರ್ತಿಯು ಯುದ್ಧದಲ್ಲಿ ಸೋತು ಶರಣಾಗತನಾದನು. ಜರ್ಮನಿಯ ಬಾನ್ ವಿಶ್ವವಿದ್ಯಾನಿಲಯವು ಪ್ಯಾಶ್ಚರನಿಗೆ 'ಡಾಕ್ಟರ್ ಆಫ್ ಮೆಡಿಸನ್' ಎಂಬ ಪ್ರಶಸ್ತಿಯನ್ನಿತ್ತು ಗೌರವಿಸಿದ್ದಿತು. ಯುದ್ಧದಲ್ಲಿ ಜರ್ಮನ್ ಸೈನಿಕರ ಕ್ರೂರಕೃತ್ಯಗಳನ್ನು ಕಂಡು ಪ್ಯಾಶ್ಚರ್ ಆ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ಪತ್ರವನ್ನು ಬರೆದನು : "ನಿಮ್ಮ ದೊರೆಯ ಅಮಾನುಷ ಕ್ರೌರ್ಯದಿಂದ ನಮ್ಮೆರಡು ದೇಶಗಳಲ್ಲಿಯೂ ಏನೂ ತಿಳಿಯದ ಜನರ ಕಗ್ಗೊಲೆಯಾಗುತ್ತಿದೆ. ಇದರಿಂದ ನನ್ನ ಮನಸ್ಸು ಕುದಿಯುತ್ತಿದೆ. ನಿಮ್ಮ ವಿಶ್ವವಿದ್ಯಾನಿಲಯದ ಪ್ರಶಸ್ತಿಪತ್ರಾಗಾರದಿಂದ ನನ್ನ ಹೆಸರನ್ನು ಅಳಿಸಿಹಾಕಿ" ಎಂದು ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸಿದನು. ಪ್ಯಾಶ್ಚರನ ಮಗನು ಸೇನೆಯನ್ನು ಸೇರಿ ರಣಭೂಮಿಯಲ್ಲಿ ಹೋರಾಡುತ್ತಿದ್ದ. ಅವನಿದ್ದ ದಳಕ್ಕೆ ಸೋಲಾಯಿತೆಂದೂ, ಉಳಿದುಳಿದವರೆಲ್ಲರೂ ದಿಕ್ಕುದಿಕ್ಕಿಗೂ ಓಡುತ್ತಿರುವರೆಂದೂ ಪ್ಯಾಶ್ಚರನಿಗೆ ಸುದ್ದಿ ತಿಳಿಯಿತು. ಅವನು ತತ್ತರಿಸಿ ಹೋದನು. ತಾಯಿತಂದೆಗಳಿಬ್ಬರೂ ಮಗನನ್ನು ಹುಡುಕಿಕೊಂಡು ಒಂದು ಮುರುಕಲು ಗಾಡಿಯಲ್ಲಿ ಪ್ರಯಾಣ ಮಾಡಿದರು. ಮಂಜಿನಿಂದಾವೃತವಾಗಿದ್ದ ಬೆಟ್ಟಗುಡ್ಡ ಪ್ರದೇಶಗಳಲ್ಲೆಲ್ಲಾ ಅವರು ಸುತ್ತಾಡಿದರು. ಸೋತುಹೋದ ದಳದಲ್ಲಿದ್ದ ಸಾವಿರದ ಇನ್ನೂರು ಮಂದಿಯಲ್ಲಿ ಕೇವಲ ಮುನ್ನೂರು ಜನ ಮಾತ್ರ ಉಳಿದಿರುವರೆಂಬ ಸಮಾಚಾರವನ್ನು ದಾರಿಯಲ್ಲಿ ಕೇಳಿ ಅವರು ಹತಾಶರಾದರು. ಎಂಟು ಹತ್ತು ದಿನಗಳ ಪರದಾಟವಾದ ಮೇಲೆ ಗಾಯಗೊಂಡಿದ್ದ ಮಗನನ್ನು ಹುಡುಕಿದರು. ದುಃಖದಿಂದ ಬೆಂದು ಹೋಗಿದ್ದ ಜೀವಕ್ಕೆ ಒಂದು ಅಣುವಿನಷ್ಟು ತಂಪು ದೊರೆತಂತಾಯಿತು.

ಯುದ್ಧವು ಮುಗಿದ ನಂತರ, ಪ್ಯಾಶ್ಚರ್ ವೈಜ್ಞಾನಿಕ ಸಂಶೋಧನೆಗಳಲ್ಲಿ ನಿರತನಾದನು. ದನಗಳಿಗೆ ನೆರಡಿ ಎಂಬ ಅಂಟುಜಾಡ್ಯವು ಬರುತ್ತದೆ. ಆದರಿಂದ ನೂರಾರು ದನಗಳು ಸ್ವಲ್ಪ ಕಾಲದಲ್ಲಿಯೇ ಸಾಯುತ್ತವೆ. ಪ್ಯಾಶ್ಚರ್ ಈ ರೋಗದ ವಿಷಯವಾಗಿ ಸಂಶೋಧನೆಗಳನ್ನು ನಡೆಸಿದನು. ನೆರಡಿ ರೋಗದಿಂದ ಸತ್ತ ದನಗಳನ್ನು ಹೂಳಿದ್ದ ಗುಂಡಿಗಳನ್ನು ಅಗೆಯಿಸಿ ಅವುಗಳಲ್ಲಿರುವ ಮಣ್ಣುಹುಳುಗಳನ್ನು ಸೂಕ್ಷ್ಮದರ್ಶಕದಿಂದ ಪರೀಕ್ಷಿಸಿದನು. ಹುಳುಗಳ ದೇಹದಲ್ಲಿ ನೆರಡಿ ರೋಗದ ಜೀವಾಣುಗಳಿರುವುದನ್ನು ಗಮನಿಸಿದನು. ಅಂತಹ ಮಣ್ಣಿನ ಹುಳುಗಳು ವಿಸರ್ಜಿಸುವ ಮಲಮಿಶ್ರಿತವಾದ ಮಣ್ಣಿನಲ್ಲಿ ಬೆಳೆಯುವ ಮೇವನ್ನು ದನಗಳು ತಿಂದಾಗ ಈ ಉಪದ್ರವವು ಹರಡುತ್ತದೆ ಎಂದು ಪ್ಯಾಶ್ಚರ್ ತಿಳಿಯಪಡಿಸಿದನು. ಈ ರೋಗದ ವಿಷಜೀವಾಣುಗಳನ್ನು ಅವನು ಪ್ರತ್ಯೇಕಿಸಿದನು. ಒಮ್ಮೆ ನೆರಡಿ ರೋಗದಿಂದ ನರಳುತ್ತಿದ್ದ ಹಸುವೊಂದು ಹೇಗೋ ಬದುಕಿಕೊಂಡಿದ್ದಿತು. ಪ್ಯಾಶ್ಚರ್ ತಾನು ಪ್ರತ್ಯೇಕಿಸಿದ್ದ ಆ ರೋಗದ

ವಿಷಜೀವಾಣುಗಳ ದ್ರವವನ್ನು ಹಸುವಿನ ದೇಹಕ್ಕೆ ಚುಚ್ಚಿ ಸೇರಿಸಿದನು. ಎಷ್ಟು ದಿನವಾದರೂ ಹಸುವಿಗೆ ನೆರಡಿ ರೋಗವು ಮರುಕಳಿಸಲಿಲ್ಲ! ಪ್ಯಾಶ್ಚರನಿಗೆ ಅತ್ಯಾಶ್ಚರ್ಯವಾಯಿತು. ಹಸುವಿಗೆ ಒಂದು ಬಾರಿ ರೋಗ ಬಂದು ವಾಸಿಯಾದರೆ ಅದು ರೋಗರಕ್ಷಿತವಾಗಬಲ್ಲುದೇ? ಎಂದು ಊಹಿಸಿದನು. ತನ್ನ ಸ್ನೇಹಿತರಾದ ವಿೂವರು ವೈದ್ಯರೊಡನೆ ಈ ವಿಚಾರವಾಗಿ ಅನೇಕ ಪ್ರಯೋಗಗಳನ್ನು ಮಾಡಿದನು. ಪ್ರಾಣಿಗಳನ್ನು ವಿಷಜೀವಾಣುಗಳ ದುರಾಕ್ರಮಣದಿಂದ ರಕ್ಷಿಸಲೇಬೇಕು ಎಂದು ಅವನು ಸಂಕಲ್ಪ ಮಾಡಿದನು. ವಿಷಜೀವಾಣುಗಳ ಲಸಿಕೆಯನ್ನು ಬೇರ್ಪಡಿಸಿ ಅದರ ಪರಿಶೋಧನೆಯಲ್ಲಿ ನಿದ್ರಾಹಾರವಿಲ್ಲದೆಯೇ ನಿರತನಾದನು. ಕೊನೆಗೆ ಒಂದು ಪರಿಹಾರಮಾರ್ಗವು ಅವನಿಗೆ ಭಾಸವಾಯಿತು. ವಿಷಜೀವಾಣುಗಳ ಲಸಿಕೆಯನ್ನು ಪಳಗಿಸಿ ಅವು ಇನ್ನೇನು ಸಾಯುತ್ತಿರುವ ಸ್ಥಿತಿಯಲ್ಲಿರುವಂತೆ ಮಾಡಿದಾಗ ಬರುವ ಲಸಿಕೆಯನ್ನು ರಕ್ತಕ್ಕೆ ಚುಚ್ಚಿ ಸೇರಿಸಿದರೆ ಅಂಟುಜಾಡ್ಯವು ಇನ್ನು ಬಾಧಿಸಲಾರದೆಂದು ಅವನು ಪ್ರಯೋಗಗಳ ಮೂಲಕ ತೋರಿಸಿದನು. ಒಂದು ವಿಧವಾದ ವಿಷಾಣುಜೀವಿಗಳ ಕ್ರೌರ್ಯವನ್ನು ತಡೆಗಟ್ಟ ಬೇಕಾದರೆ ಅದೇ ಜಾತಿಯ ಪಳಗಿ ಮೆತುವಾಗಿರುವ ವಿಷಜೀವಾಣುಗಳನ್ನು ರಕ್ತದಲ್ಲಿ ಸೇರಿಸ ಬೇಕು ಎಂದು ಅವನು ನಿರ್ಧರಿಸಿದನು. ಇದೇ ಈಗಿನ ವ್ಯಾಕ್ಸಿನೇಷ ವಿಧಾನದ ಮೂಲ.

ಈ ವಿಧಾನವು ಫ್ರಾನ್ಸಿನ ವೈದ್ಯರನ್ನೆಲ್ಲಾ ಕೆರಳಿಸಿತು. ನಿರ್ಜೀವವಸ್ತುಗಳ ವಿಷಯವಾಗಿ ರಾಸಾಯನಿಕ ಪ್ರಯೋಗಗಳನ್ನು ಮಾಡುತ್ತಿದ್ದವನೊಬ್ಬನು ಈಗ ಜೀವಿಗಳ ಮೇಲೆ ನಂಜಿನ ಪ್ರಯೋಗಗಳನ್ನು ನಡೆಸಲು ಹವಣಿಸುತ್ತಿದ್ದಾನೆಂದು ಅವರು ಕೂಗಾಡಿದರು. ಒಬ್ಬ ವೈದ್ಯನು ಪ್ಯಾಶ್ಚರನನ್ನು ಕತ್ತಿಯ ಕಾಳಗಕ್ಕೂ ಕರೆದನು! ಇದರಿಂದ ಸೋತವನು ಸಾಯಬೇಕಾಗಿದ್ದಿತು. ಆದರೆ ತಾಳ್ಮೆಯಿಂದ ಪ್ಯಾಶ್ಚರ್ "ನನ್ನ ಈಗಿನ ಕರ್ತವ್ಯ ಮನುಷ್ಯನನ್ನು ಸಾಯಿಸುವುದಲ್ಲ: ಮನುಷ್ಯನಿಗೆ ಬರುವ ರೋಗವನ್ನು ನಿರ್ಮೂಲ ಮಾಡುವುದು" ಎಂದು ಪ್ರತ್ಯುತ್ತರ ಹೇಳಿದನು. ದ್ವಂದ್ವಯುದ್ಧಕ್ಕೆ ಹೆದರಿದ ಪ್ಯಾಶ್ಚರ್ ಜೀವಗಳ್ಳನೆಂದು ಇನ್ನೂ ಕೆಲವರು ದೂಷಿಸಿದರು. ಆದರೆ ಈ ದೂಷಣೆ ಅವನ ಮಾನವೀಯತೆಯನ್ನು ಮಸಕು ಮಾಡಲಿಲ್ಲ.

ಕ್ರಿ. ಶ. ೧೮೮೧ನೇ ವರ್ಷದ ಜೂನ್ ಎರಡನೆಯ ತಾರೀಖು ಪ್ಯಾಶ್ಚರನ ಜೀವನದಲ್ಲಿ ಚಿರಸ್ಮರಣೀಯವಾದುದು. ಆ ದಿನವೇ ಅವನ ಸಂಶೋಧನೆಗಳ ಸತ್ವಪರೀಕ್ಷೆ. ಆಗ ಫ್ರಾನ್ಸ್ ದೇಶದಲ್ಲಿ ನೆರಡಿರೋಗ ಹರಡಿದ್ದಿತು. ಅವನ ವಿರೋಧಿಗಳೆಲ್ಲರೂ ಒಂದಾಗಿ ಒಂದು ಪ್ರದರ್ಶನವನ್ನು ಏರ್ಪಡಿಸಿದ್ದರು. ಅನೇಕ ದೇಶಗಳಿಂದ ಶ್ರೀಮಂತರೂ, ರಾಜಮನೆತನದವರೂ, ಪ್ರಸಿದ್ಧ ವಿಜ್ಞಾನಿಗಳೂ, ವೈದ್ಯರೂ ಪ್ಯಾಶ್ಚರನ ಪ್ರಯೋಗಗಳನ್ನು ನೋಡಲು ನೆರೆದಿದ್ದರು. ಅವರೆದುರಿಗೆ ಪ್ಯಾಶ್ಚರನು ನೆರಡಿರೋಗದ ವಿಷಜೀವಾಣುಗಳ ಲಸಿಕೆಯನ್ನು ದನಗಳಿಗೂ, ಕುರಿ ಗಳಿಗೂ ಚುಚ್ಚಬೇಕಾಗಿದ್ದಿತು. ಮೂವತ್ತು ದನಗಳಿಗೆ ಅವನು ಲಸಿಕೆಯನ್ನು ಚುಚ್ಚಿದನು. ಇನ್ನು ಇಪ್ಪತ್ತನಾಲ್ಕು ಕುರಿಗಳಿಗೆ ಏನನ್ನೂ ಚುಚ್ಚಲಿಲ್ಲ. ಅವನ ವಿರೋಧಿಗಳೇ ಈ

ದನಗಳನ್ನೂ, ಕುರಿಗಳನ್ನೂ ನೋಡಿಕೊಳ್ಳುತ್ತಿದ್ದರು. ಸ್ವಲ್ಪ ದಿನಗಳಲ್ಲಿಯೇ ಇಪ್ಪತ್ತುಮೂರು ಕುರಿಗಳು ಸತ್ತುಹೋದುವು. ಇನ್ನೊಂದು ಕುರಿಯೂ ಸಾಯುವ ಸ್ಥಿತಿಯಲ್ಲಿದ್ದಿತು. ಆದರೆ ಮೂವತ್ತು ದನಗಳೂ ಸುಖವಾಗಿ ಮೆಲಕುಹಾಕುತ್ತಿದ್ದುವು. ಎಲ್ಲರೂ ಪ್ಯಾಶ್ಚರನನ್ನು ಹೊಗಳಿದರು. ಅಪಹಾಸ್ಯ ಮಾಡುತ್ತಿದ್ದವರೆಲ್ಲರೂ ಪಶ್ಚಾತ್ತಾಪಪಟ್ಟು ಅವನ ಕ್ಷಮೆ ಬೇಡಿದರು. "ಪಶ್ಚಾತ್ತಾಪ ಪಡುವ ಪಾಪಿಷ್ಠನಿಗೆ ಸ್ವರ್ಗವು ದೊರೆಯುವುದೆಂದು ಬೈಬಲ್ಲಿನಲ್ಲಿ ಹೇಳಿಲ್ಲವೆ ?" ಎಂದು ಅವನು ಅವರನ್ನು ಸಮಾಧಾನ ಮಾಡಿ ತನ್ನ ವಿಶಾಲ ಮನೋಭಾವವನ್ನು ವ್ಯಕ್ತಪಡಿಸಿದನು.

ಈ ಸತ್ವಪರೀಕ್ಷೆಯ ಪ್ರಯೋಗದಿಂದ ಪ್ಯಾಶ್ಚರನ ಕೀರ್ತಿಯು ಎಲ್ಲೆಲ್ಲೂ ಹರಡಿತು. ಅನೇಕ ಬಿರುದುಗಳೂ, ಪ್ರಶಸ್ತಿಗಳೂ ಅವನೆಡೆಗೆ ಬರತೊಡಗಿದುವು. ಯೂರೋಪ್ ದೇಶಗಳ ಹಲವಾರು ವೈಜ್ಞಾನಿಕ ಸಂಸ್ಥೆಗಳ ಸದಸ್ಯನಾಗಿ ಚುನಾಯಿತನಾದನು. ಎಡಿನ್‌ಬರೋ ವಿಶ್ವವಿದ್ಯಾ ನಿಲಯದ ಮೂರನೆಯ ಶತಮಾನೋತ್ಸವ ಸಂದರ್ಭದಲ್ಲಿ ಪ್ಯಾಶ್ಚರನಿಗೆ ಗೌರವಪ್ರಶಸ್ತಿ ಯನ್ನು ಕೊಡುವಾಗ ಅಲ್ಲಿ ನೆರೆದಿದ್ದ ಐದು ಸಾವಿರ ವಿದ್ವನ್ಮಣಿಗಳೂ ಒಟ್ಟಿಗೆ ಎದ್ದುನಿಂತು ಜಯಘೋಷಮಾಡಿ ತಮ್ಮ ಗೌರವವನ್ನು ಸಲ್ಲಿಸಿದರು. ಫ್ರಾನ್ಸಿನ ಪ್ರತಿನಿಧಿಯಾಗಿ ಲಂಡನ್ನಿನಲ್ಲಿ ಅಂತರರಾಷ್ಟ್ರೀಯ ವಿಜ್ಞಾನ ಸಮ್ಮೇಳನದಲ್ಲಿ ಪ್ಯಾಶ್ಚರ್ ಮಾತನಾಡಲು ಎದ್ದಾಗ ಇನ್ನಾರಿಗೂ ಸಲ್ಲದಷ್ಟು ಹರ್ಷೋದ್ಗಾರಗಳ ಸುರಿಮಳೆಯಾಯಿತು. ತನಗೆ ದೊರೆತ ಗೌರವಗಳೆಲ್ಲವನ್ನೂ ಲೋಕವು ವಿಜ್ಞಾನಕ್ಕೆ ಅರ್ಪಿಸಿರುವ ಗೌರವಗಳೆಂದು ಅವನು ನಮ್ರತೆಯಿಂದ ಸ್ವೀಕರಿಸಿದನು. "ಮನುಷ್ಯನ ಜೀವಮಾನವು ಅತ್ಯಲ್ಪ. ಸಾಯುವವರೆಗೂ ನಾವು ಜನಸೇವೆಯಲ್ಲಿ ನಿರತ ರಾಗೋಣ. ನನ್ನ ಕರ್ತವ್ಯ, ನನ್ನ ಸಂಸಾರ, ನನ್ನ ದೇಶ ..ಇವೇ ನನ್ನ ಆರಾಧಕ ವಸ್ತುಗಳು" ಎಂದು ಅವನು ಭಾವಿಸಿದ್ದನು. "ನನ್ನ ಜೀವನದಲ್ಲಿ ಒಂದು ಆಸೆ ಮತ್ತು ಪ್ರೇಮವಿರಲು ಎರಡು ಕಾರಣ. ಒಂದು ವಿಜ್ಞಾನದಲ್ಲಿ ಪ್ರೀತಿ ; ಇನ್ನೊಂದು ನನ್ನ ಮನೆಯ ಮೇಲಿನ ಪ್ರೇಮ. ನನ್ನ ಹೃದಯದಲ್ಲಡಗಿರುವ ಭಾವನೆಗಳಿಗೆಲ್ಲ ನನ್ನ ತಾಯಿಯ ತ್ಯಾಗಮಯಜೀವನವೇ ಬುನಾದಿ " ಎಂದು ಸ್ಮರಿಸಿಕೊಳ್ಳುವನು.

ಅವನಿಗೆ ಸನ್ಮಾನಗಳ ಸುರಿಮಳೆಯಾಗುತ್ತಿದ್ದರೂ ಪ್ರಾಣಿಗಳಿಗೆ ಬರುವ ಉಪದ್ರವಗಳ ಚಿಂತನೆಯು ಅವನನ್ನು ಕಾಡುತ್ತಿದ್ದಿತು. ನೆರಡಿರೋಗ, ರೇಷ್ಮೆಹುಳುಗಳ ಮೊಟ್ಟೆಗಳಿಗೆ ಬರುವ ಅಂಟುಜಾಡ್ಯ, ಬಾಣಂತಿಜ್ವರ ಇವುಗಳೊಡನೆ ಹೋರಾಡಿ ಅವನು ಜಯಶೀಲ ನಾಗಿದ್ದನು. ಈಗ ಹೊಸ ರೋಗವೊಂದರ ನಿವಾರಣೆಗಾಗಿ ಅವನು ನೂತನ ಪರಿಶೋಧನೆಗಳನ್ನು ಕೈಗೊಂಡನು. ಹುಚ್ಚುನಾಯಿ ಕಡಿತದಿಂದ ಪ್ರಾಣಿಗಳಲ್ಲಿ ಬರುವ ಜಲರೋಗಕ್ಕೆ ತಕ್ಕ ಔಷಧವನ್ನು ಕಂಡುಹಿಡಿಯಬೇಕೆಂಬುದೇ ಅವನ ಗುರಿ. ಹುಚ್ಚುನಾಯಿಯ ಬಾಯಿಯ ನೊರೆ ಯಲ್ಲಿರುವ ಜಲರೋಗದ ಜೀವಾಣುದ್ರವವನ್ನು ಅವನು ಮೊಲಗಳ ದೇಹಕ್ಕೆ ಚುಚ್ಚಿ ಅದರ ಪರಿಣಾಮವನ್ನು ಗಮನಿಸುತ್ತಿದ್ದನು. ಒಂದೊಂದು ವೇಳೆ ಈ ದ್ರವವನ್ನು ತೆಗೆಯಲು

ನಾಯಿಯ ಬಾಯಿಯೊಳಗೆ ಗಾಜಿನ ಕೊಳವೆಯನ್ನು ಇಟ್ಟು, ಅವನೇ ತನ್ನ ಬಾಯಿಂದ ಅದನ್ನು ಸೆಳೆದುಕೊಳ್ಳುತ್ತಿದ್ದನು. ನಾಯಿ ಕಚ್ಚಿದರೋ, ಇಲ್ಲವೇ ಆ ನೊರೆ ದೇಹದೊಳಗೆ ಹೊಕ್ಕರೋ ಅವನಿಗೆ ಮನೋವಿಕಾರವುಂಟಾಗುವುದು. ಅದೆಂತಹ ಅಪಾಯಕರ ಪರಿಶೋಧನೆ! ಹಿಂದೆ ಹುಚ್ಚುನಾಯಿ ಕಡಿದ ಮನುಷ್ಯನಿಗೆ ಕಬ್ಬಿಣದ ಬರೆ ಹಾಕುತ್ತಿದ್ದರು: ಕಡಿದ ಭಾಗವನ್ನೇ ಕತ್ತರಿಸುತ್ತಿದ್ದರು: ಇಲ್ಲವೇ ಆ ಭಾಗದಿಂದ ಅವನು ಸಾಯುವವರೆಗೂ ರಕ್ತಸ್ರಾವವಾಗುವಂತೆ ಮಾಡುವರು. ಹುಚ್ಚು ನಾಯಿಯಿಂದ ಕಡಿಸಿಕೊಂಡವನು ಕೆಲವು ಕಾಲವಾದ ಮೇಲೆ ಹುಚ್ಚು ಹುಚ್ಚಾಗಿ ಕೂಗುತ್ತಾ ಕುಣಿಯುತ್ತಾ ಚೀರಾಡುವನು. ಅದೊಂದು ಘೋರದೃಶ್ಯ. ಅಂತಹ ಅರಿಚಾಟದ ದೃಶ್ಯವನ್ನು ಪ್ಯಾಶ್ಚರ್ ತನ್ನ ಚಿಕ್ಕವಯಸ್ಸಿನಲ್ಲಿಯೇ ಕಂಡಿದ್ದನು. ಎಳೆಯ ಮನಸ್ಸಿನ ಮೇಲೆ ಆ ಭಯಂಕರ ದೃಶ್ಯವು ಮಹತ್ಪರಿಣಾಮವನ್ನುಂಟುಮಾಡಿದ್ದಿತು. ಹುಚ್ಚುನಾಯಿಯ ಕಡಿತಕ್ಕೆ ತಕ್ಕ ಮದ್ದನ್ನು ಕಂಡುಹಿಡಿಯಲೇಬೇಕೆಂದು ಅವನು ಮನಸ್ಸು ಮಾಡಿದನು.

ಹುಚ್ಚುನಾಯಿ ಕಡಿದಮೇಲೆ ಜಲರೋಗದ ಜೀವಾಣುಗಳು ಮೆದುಳಿನಲ್ಲೋ ಅಥವಾ ಬೆನ್ನಿನ ಹುರಿಯಲ್ಲೋ ಸೇರುವವರೆಗೆ ಯಾವ ಪರಿಣಾಮವೂ ಕಾಣಬರುವುದಿಲ್ಲ. ಹೀಗಾಗಿ ಪ್ಯಾಶ್ಚರ್ ಹುಚ್ಚುನಾಯಿಯ ಬಾಯಿಯ ಜೊಲ್ಲಿನಲ್ಲಿರುವ ಜಲರೋಗದ ವಿಷಾಣು ಜೀವಿಗಳನ್ನು ಮೊಲಗಳ ಮೆದುಳಿನಲ್ಲಿ ಅಥವಾ ಬೆನ್ನಿನ ನರದಲ್ಲಿ ಚುಚ್ಚಿ ಸೇರಿಸಬೇಕು ಎಂದು ನಿರ್ಧರಿಸಿದನು. ಈ ಕಾರ್ಯದಲ್ಲಿ ಅವನ ಸ್ನೇಹಿತರಾದ ಮೂವರು ವೈದ್ಯರು ನೆರವಾದರು. ಅನೇಕ ಪ್ರಯೋಗಗಳ ಪರಿಣಾಮವಾಗಿ ಅವನು ಮೊಲಗಳ ಮೆದುಳಿನಲ್ಲಿ ಈ ವಿಷಾಣುಜೀವಿಗಳನ್ನು ಬೆಳಸಿ, ಪಳಗಿಸಿ ಕೊನೆಗೆ ಅವು ಮೆತುವಾದ ಮೇಲೆ ಆ ಮೆದುಳಿನಿಂದ ಲಸಿಕೆಯನ್ನು ತಯಾರಿಸುವ ಕ್ರಮವನ್ನು ಕಂಡುಹಿಡಿದನು. ಇಂತಹ ಲಸಿಕೆಯನ್ನು ಹೇರಳವಾಗಿ ತಯಾರಿಸಲು ಮತ್ತು ಮೊಲಗಳನ್ನು ಜಾಗರೂಕತೆಯಿಂದ ಸಾಕಲು ಅವನಿಗೆ ಸರಿಯಾದ ಸ್ಥಳವೂ ಬೇಕಾಗಿದ್ದಿತು. ಮೂರನೆಯ ನೆಪೋಲಿಯನ್ ಚಕ್ರವರ್ತಿಯ ಹಳೆಯ ಅರಮನೆಯನ್ನು ಫ್ರೆಂಚ್ ಸರ್ಕಾರವು ಪ್ಯಾಶ್ಚರನಿಗೆ ಬಿಟ್ಟುಕೊಟ್ಟಿತು. ಈಗ ಇದು ಭಾರಿ ಸಂಶೋಧನಾಕೇಂದ್ರವಾಗಿದೆ.

ಒಂದು ದಿನ ಜೋಸೆಫ್ ಎಂಬ ಬಾಲಕನನ್ನು ಹುಚ್ಚುನಾಯಿಯೊಂದು ಕಡಿಯಿತು. ಅವನ ತಾಯಿಯು ತನ್ನ ಮುದ್ದು ಮಗನನ್ನು ಬದುಕಿಸಲು ಪ್ಯಾಶ್ಚರನ ಬಳಿಗೆ ಕರೆದುಕೊಂಡು ಹೋದಳು. ಅದುವರೆಗೂ ಜಲರೋಗದ ಜೀವಾಣುದ್ರವ ಲಸಿಕೆಯನ್ನು ಪ್ಯಾಶ್ಚರ್ ಮನುಷ್ಯನ ಮೇಲೆ ಪ್ರಯೋಗಿಸಿರಲಿಲ್ಲ. ಅದೊಂದು ಸಂದಿಗ್ಧಪರಿಸ್ಥಿತಿ. ಈ ಮುದ್ದು ಮಗುವಿನ ಮೇಲೆ ಹೇಗೆ ವಿಷಾಣುಜೀವಿಯ ಲಸಿಕೆಯನ್ನು ಪ್ರಯೋಗ ಮಾಡುವುದು ಎಂದು ಅವನು ಆಧೈರ್ಯ ಪಟ್ಟನು. ಹುಡುಗನಿಗೆ ಗುಣವಾಗುವುದಕ್ಕೆ ಪ್ರತಿಯಾಗಿ ಹುಚ್ಚು ಹಿಡಿದು ಅವನು ಕಿರಿಚಿ, ಚೀರಿ ಸತ್ತರೆ ಏನು ಗತಿ ? ಆದರೆ ಹುಡುಗನನ್ನು ಉಳಿಸಲು ಬೇರೆ ಯಾವ ದಾರಿಯೂ ಇರಲಿಲ್ಲ. ಇನಾಕ್ಯುಲೇಷನ್ ಮಾಡಬೇಕಾದ್ದು ಧರ್ಮ ಎಂದು ಅವನ ಸ್ನೇಹಿತರು ಒತ್ತಾಯ ಮಾಡಿದರು.

ಕೊನೆಗೆ ಪ್ಯಾಶ್ಚರ್ ಹುಡುಗನ ತಾಯಿಯ ಅನುಮತಿಯನ್ನು ಪಡೆದು ಹದಿನಾಲ್ಕು ದಿನಗಳ ಪ್ರತಿನಿತ್ಯವೂ ಜಲರೋಗದ ಪಳಗಿದ ಜೀವಾಣುದ್ರವವನ್ನು ಬಾಲಕನಿಗೆ ಚುಚ್ಚಿ ಹದಿನಾಲ್ಕನೆಯ ದಿನದ ರಾತ್ರಿ ಪ್ಯಾಶ್ಚರನಿಗೆ ನಿದ್ರೆಯೇ ಬಾರದು. ಏನೂ ತಿಳಿಯದ ಬಾ ನೊಬ್ಬನನ್ನು ಮರಣಕ್ಕೆ ಗುರಿಮಾಡಿದ್ದೇನೆಯೋ ಎಂಬ ಶಂಕೆ. ಮರುದಿನ ಅವನು ಈ ಸ್ಥಳ ಬಿಟ್ಟು ಆರ್ಬಾಯಿಗೆ ಹೋದನು. ಒಂದು ತಿಂಗಳಾದ ಮೇಲೆ ಜೋಸೆಫ್‌ಗೆ ಜಲರೋ ಚಿನ್ಹೆಗಳು ಇಲ್ಲವೆಂದೂ, ಅವನು ಸುಖವಾಗಿರುವನೆಂದೂ ಸುದ್ದಿ ತಿಳಿಯಿತು. ತನ್ನ ಶ್ರ ಸಫಲವಾದುದಕ್ಕೆ ಲೂಯಿ ಪ್ಯಾಶ್ಚರ್ ದೇವರನ್ನು ಮನಸ್ಸಿನಲ್ಲಿಯೇ ವಂದಿಸಿದನು.

ಇಷ್ಟರಲ್ಲಿಯೇ ಜೂಪಿಲ್ ಎಂಬ ಹುಡುಗನನ್ನು ಹುಚ್ಚುನಾಯಿಯೊಂದು ಕಡಿದಿದ್ದಿ ಜೂಪಿಲ್ ಇತರ ಹುಡುಗರೊಡನೆ ದನಗಳನ್ನು ಕಾಯುತ್ತಿರುವಾಗ ಹುಚ್ಚುನಾಯಿ ಅಟ್ಟಿಸಿಕೊಂಡು ಬಂದಿತು. ಇತರ ಹುಡುಗರೆಲ್ಲರೂ ಭಯದಿಂದ ಓಡಿಹೋದರು. ಆ ಧೈರ್ಯಶಾಲಿಯಾದ ಜೂಪಿಲ್ ಆ ನಾಯಿಯನ್ನು ಕೋಲಿನಿಂದ ತಡೆಯಲು ಹೋದ ಅದು ಅವನ ಮೇಲೆ ಬಿದ್ದು ಎಡಗೈಯನ್ನು ಕಚ್ಚಿತು. ಆದರೂ ಆ ನಾಯಿಯನ್ನು ಅವ ಬಲವಾಗಿ ಹೊಡೆದು ಸಾಯಿಸಿದನು. ಅವನ ಅದ್ಭುತ ಸಾಹಸ ಮತ್ತು ಮನೋಧೈರ್ಯ ಕೇಳಿ ಎಲ್ಲರೂ ಅವನನ್ನು ಕೊಂಡಾಡಿದರು. ಇನ್ನು ಅವನನ್ನು ಉಳಿಸುವ ಬಗೆ ಹೇಗೆ? ಅವ ಪ್ಯಾಶ್ಚರನ ಬಳಿಗೆ ಹೋಗಲೇಬೇಕಾಯಿತು. ಪ್ಯಾಶ್ಚರ್ ಈ ಹುಡುಗನಿಗೂ ಹದಿನಾ ಇಂಜಕ್ಷನ್‌ಗಳನ್ನು ಕೊಟ್ಟು ರೋಗವನ್ನು ನಿರ್ಮೂಲಮಾಡಿದನು. ಸ್ವಲ್ಪ ದಿನಗಳಲ್ಲಿಯ ಪ್ಯಾಶ್ಚರನ ಪ್ರಯೋಗಶಾಲೆಯು ಒಂದು ದೊಡ್ಡ ಆಸ್ಪತ್ರೆಯಾಯಿತು. ಯೂರೋಪು ದೇಶ ಮೂಲೆಮೂಲೆಗಳಿಂದಲೂ ರೋಗಿಗಳು ಬರಲಾರಂಭಿಸಿದರು. ಅವರನ್ನು ಸಂತೈಸಿ ಜಲರೋ ವನ್ನು ವಾಸಿಮಾಡುತ್ತಿದ್ದನು.

ರಷ್ಯಾದೇಶದ ಜಾರ್ಜ್ ಚಕ್ರವರ್ತಿಯು ಪ್ಯಾಶ್ಚರನಿಗೆ ಒಂದು ವಜ್ರಪದಕವನ್ನಿತ್ತ ಗೌರವಿಸಿದನು. ಅಲ್ಲದೆ ಪ್ಯಾಶ್ಚರನ ಹೆಸರಿನಲ್ಲಿ ಒಂದು ಸಂಶೋಧನಾಲಯವನ್ನು ಕಟ್ಟಲು ಒಂ ಲಕ್ಷ ಫ್ರಾಂಕುಗಳಷ್ಟು ಧನವನ್ನು ದಾನಮಾಡಿದನು. ಮಾನವಕುಲದ ಉದ್ಧಾರಕನಾ ಪ್ಯಾಶ್ಚರನಿಗೆ ಅನೇಕ ದೇಶಗಳಿಂದ ದ್ರವ್ಯವು ಉದಾರವಾಗಿ ಬರಲಾರಂಭಿಸಿತು. 'ಪ್ಯಾಶ್ಚ ಇನ್‌ಸ್ಟಿಟ್ಯೂಟ್' ಎಂಬ ಪರಿಶೋಧನ ಮಂದಿರವನ್ನು ನಿರ್ಮಿಸಿ ಜೀವಾಣುಗಳ ವಿಚಾರವಾ ಸಂಶೋಧನೆಗಳನ್ನು ಮುಂದುವರಿಸಲು ತಕ್ಕ ಸಲಕರಣೆಗಳಿಂದ ಸಜ್ಜುಗೊಳಿಸಿದರ ಸಾಯುವವರೆಗೂ ಅವನು ಈ ಮಂದಿರದಲ್ಲಿ ಸಂಶೋಧನೆ ನಡೆಸಿದನು.

ನಲವತ್ತು ವರ್ಷಗಳ ನಿರಂತರ ಸಂಶೋಧನೆಯ ಕೆಲಸದಿಂದ ಪ್ಯಾಶ್ಚರನ ಮಾನಸಿಕ ಶಕ್ತಿಯ ದೇಹದಾರ್ಢ್ಯವೂ ಕ್ಷೀಣಿಸಲಾರಂಭಿಸಿದವು. ಅವನ ಎಪ್ಪತ್ತನೆಯ ಜನ್ಮದಿನೋತ್ಸವವ ಫ್ರಾನ್ಸ್ ದೇಶದಾದ್ಯಂತ ಉತ್ಸಾಹದಿಂದ ಜನರು ಆಚರಿಸಿದರು. ಅವನಿಗೆ ಒಂದು ಚಿನ್ನ

ಪದಕವನ್ನು ಅರ್ಪಿಸಿ ಗೌರವಿಸುವ ಸಮಾರಂಭವು ಸಾರ್‌ಬಾನಿನಲ್ಲಿ ಏರ್ಪಟ್ಟಿದ್ದಿತು. ಪ್ರಪಂಚದ ಅನೇಕ ರಾಷ್ಟ್ರಗಳ ಪ್ರತಿನಿಧಿಗಳು ಈ ಸಮಾರಂಭಕ್ಕೆ ಬಂದಿದ್ದರು. ಅವರೆಲ್ಲರೂ ಒಕ್ಕೊರಲಿನಿಂದ ಜಯಘೋಷಮಾಡಿ ಮಾನವಕುಲದ ಕೃತಜ್ಞತೆಯನ್ನು ಸಮರ್ಪಿಸಿದರು. ಅಂದು ಭಾಷಣಮಾಡಲಾರದೆ ಮಗನ ಕೈಲಿ ಭಾಷಣವನ್ನು ಪ್ಯಾಶ್ಚರ್ ಓದಿಸಿದನು. "ವಿಜ್ಞಾನವೂ, ಶಾಂತಿಯೂ" ಅಜ್ಞಾನವನ್ನೂ, ಯುದ್ಧವನ್ನೂ ನಿರ್ಮೂಲ ಮಾಡುತ್ತವೆ ಎಂದು ನನ್ನ ಅಪಾರ ನಂಬಿಕೆ. ದೇಶಗಳು ಪರಸ್ಪರ ನಾಶಕ್ಕಾಗಿ ಕಾದಾಡದೆ ಸಹಕಾರಕ್ಕಾಗಿ ಮಿಳಿತವಾಗಬೇಕು. ದಿಗ್ವಿಜಯ ಗಳಿಸಿದವರಿಗಿಂತಲೂ ಹೆಚ್ಚಾಗಿ ಮಾನವಕುಲರಕ್ಷಕರಿಗೆ ಮುಂದಿನ ಜನಾಂಗವು ಗೌರವವನ್ನು ತೋರಿಸುತ್ತದೆ" ಎಂದು ಅವನು ತಿಳಿಸಿದನು.

ಪ್ಯಾಶ್ಚರನ ಜೀವನದ ಕೊನೆಯ ದಿನಗಳಲ್ಲಿ ಅವನ ಹೆಂಡತಿಯು ಪಕ್ಕದಲ್ಲಿ ಕುಳಿತು ಪ್ರಪಂಚದ ಮಹಾಪುರುಷರ ಜೀವನಚರಿತ್ರೆಗಳನ್ನು ಓದುತ್ತಿದ್ದಳು. ಮಾನವಕುಲದ ಸುಖ ಮತ್ತು ಪ್ರಗತಿಗಾಗಿ ತಾನು ದುಡಿಯಲು ಶಕ್ತನಾದೆನೆಂದು ಅವನಿಗೆ ಆತ್ಮತೃಪ್ತಿಯಾಯಿತು. ಎಪ್ಪತ್ತು ಮೂರನೆಯ ವಯಸ್ಸಿನಲ್ಲಿ ಅವನು ನಿಧನನಾದನು. ಪ್ಯಾಶ್ಚರ್ ಇನ್‌ಸ್ಟಿಟ್ಯೂಟಿನಲ್ಲಿ ಆತನ ಸಮಾಧಿ ಇದೆ. ಅದರ ಗೋಡೆಯ ಮೇಲೆ ಒಂದು ಉದ್ಯಾನವನವನ್ನು ಬರೆದು ಅದರ ಮಧ್ಯೆ ಕುರಿಮರಿಗಳು, ನಾಯಿಗಳು ಮತ್ತು ಮಕ್ಕಳ ಚಿತ್ರ ಬರೆದಿದ್ದಾರೆ. ಪ್ಯಾಶ್ಚರ್‌ಗೆ ಮಕ್ಕಳನ್ನು ಕಂಡರೆ ಬಹಳ ಪ್ರೀತಿ. ನಮ್ಮ ಮಕ್ಕಳು ಎಂದೂ ಪ್ಯಾಶ್ಚರನನ್ನು ಮರೆಯಲಾರರು.

## ಟಿಪ್ಪಣಿ

**ಕವಿ ಮತ್ತು ಕೃತಿ :**

ಮೈಸೂರು ವಿಶ್ವವಿದ್ಯಾನಿಲಯದ ಎಂ.ಎಸ್.ಸಿ. ಮತ್ತು ಡಾಕ್ಟರೇಟ್ ಪದವೀಧರರಾಗಿರುವ ಪ್ರೊಫೆಸರ್ ಜಿ.ವಿ. ಸುಬ್ಬರಾಯಪ್ಪನವರು ಕೇಂದ್ರ ಆಹಾರ ಸಂಶೋಧನಾಲಯದಲ್ಲಿ ಜೂನಿಯರ್ ಸೈಂಟಿಫಿಕ್ ಆಫೀಸರ್ ಆವರಾಗಿ ಸೇರಿ ಈಗ ದೆಹಲಿಯಲ್ಲಿ ಉನ್ನತ ಉದ್ಯೋಗದಲ್ಲಿದ್ದಾರೆ. ಅವರು 'ವಿಖ್ಯಾತ ವಿಜ್ಞಾನಿಗಳು', 'ನೀರು', 'ಬಂಗಾರದ ಕಥೆ', 'ಭಾರತೀಯ ವಿಜ್ಞಾನಿಗಳು' ಇತ್ಯಾದಿ ಹಲವು ಗ್ರಂಥಗಳನ್ನು ಬರೆದಿದ್ದಾರೆ. ವಿಜ್ಞಾನವಿಷಯಗಳನ್ನು ಕನ್ನಡದಲ್ಲಿ ಸರಳವಾಗಿ, ಸರಾಗವಾಗಿ ಬರೆಯುವ ಕಲೆ ಇವರಿಗೆ ಸಿದ್ಧಿಸಿದೆ. ಇಲ್ಲಿನ ಪಠ್ಯ ಭಾಗವನ್ನು ಅವರ 'ವಿಖ್ಯಾತ ವಿಜ್ಞಾನಿಗಳು' ಎಂಬ ಗ್ರಂಥದಲ್ಲಿ ಬರುವ 'ಲೂಯಿ ಪ್ಯಾಶ್ಚರ್' ಎಂಬ ಪ್ರಬಂಧದಿಂದ ಆಯ್ದುಕೊಳ್ಳಲಾಗಿದೆ. ಲೂಯಿ ಪ್ಯಾಶ್ಚರನು ಲೋಕಕಲ್ಯಾಣಕ್ಕಾಗಿ—ದನಗಳ ನೆರಡಿ ರೋಗ ಮತ್ತು ಹುಚ್ಚುನಾಯಿಗಳ ಕಡಿತಕ್ಕೆ ಔಷಧವನ್ನು ಕಂಡುಹಿಡಿಯುವುದಕ್ಕಾಗಿ—ಹೇಗೆ ಶ್ರಮಿಸಿದನೆಂಬುದು ಇಲ್ಲಿ ವ್ಯಕ್ತವಾಗಿದೆ.

## ಕಠಿಣ ಪದಗಳ ಅರ್ಥ :

ಚಮ್ಮಾರ—ಚರ್ಮದ ಕೆಲಸ ಮಾಡುವವನು : ಪಾದರಕ್ಷೆಗಳನ್ನು ತಯಾರಿಸುವವನು. ಕಲೋಪಾಸಕ - ಕಲಾ+ಉಪಾಸಕ (ಗು. ಸಂ.)—ಕಲೆಯನ್ನು ಅಭ್ಯಾಸಮಾಡುವವನು. ರೇಖಿಸು—ಚಿತ್ರಿಸು. ತಣಿ—ತೃಪ್ತಿಪಡು. ಶಂಕೆ—ಸಂಶಯ. ಹಿತೈಷಿ—ಹಿತವನ್ನು ಬಯಸುವವನು. ಡೂಮಾಸ—ಒಬ್ಬ ವಿಜ್ಞಾನಿ ; ಇವನು ಪ್ರಯೋಗ ನಡೆಸಿ, ನೀರು ಆಮ್ಲಜನಕ, ಜಲಜನಕಗಳ ಸಂಯೋಜನೆಯಿಂದಾಗಿದೆಯೆಂದೂ ಮತ್ತು ಈ ಮೂಲವಸ್ತುಗಳು ೮ : ೧ ತೂಕದ ಪ್ರಮಾಣದಲ್ಲಿವೆ ಎಂದೂ ತಿಳಿಸಿದನು.

ಸೋಜಿಗ—ಆಶ್ಚರ್ಯ. ಡಾಕ್ಟರೇಟ್—ಜ್ಞಾನದ ಯಾವುದಾದರೂ ಒಂದು ವಿಭಾಗದಲ್ಲಿ ಆಳವಾಗಿ ಅಭ್ಯಾಸಮಾಡಿದ ವಿದ್ಯಾವಂತನಿಗೆ ನೀಡುವ ಪ್ರಶಸ್ತಿ. ಮಿತ—ಹಿಡಿತ ; ಎಷ್ಟು ಬೇಕೋ ಅಷ್ಟು. ಟಾರ್ಟರಿಕ್ ಆಮ್ಲ—ಇದು ಒಂದು ಸಾವಯವ ಸಂಯುಕ್ತ ವಸ್ತು (ಆಮ್ಲ) ಬಣ್ಣದ ಕೈಗಾರಿಕೆಯಲ್ಲಿ ಇದನ್ನು ಉಪಯೋಗಿಸುತ್ತಾರೆ.

ಸಮರ—ಯುದ್ಧ. ಫ್ರಾಂಕು—ಫ್ರಾನ್ಸು ದೇಶದ ನಾಣ್ಯ. ಹುಂಡಿಪೆಟ್ಟಿಗೆ—ಕಾಣಿಕೆಯನ್ನು ಹಾಕುವ ಪೆಟ್ಟಿಗೆ. ಅನುರಕ್ತ—ಪ್ರೀತಿಯುಳ್ಳವನು : ಆಸಕ್ತಿಯುಳ್ಳವನು. ಬಾಹ್ಯ—ಹೊರಗಿನ ಪಾದ್ರಿ—ಕ್ರೈಸ್ತಗುರು. ವಿಧ್ಯುಕ್ತ—ಶಾಸ್ತ್ರೋಕ್ತ. ವೈಜ್ಞಾನಿಕ—ವಿಜ್ಞಾನಕ್ಕೆ ಸಂಬಂಧಿಸಿದ ಊನ—ಅಂಗಹೀನ. ಕೃತ್ಯ—ಕೆಲಸ. ಪತ್ರಾಗಾರ—ದಾಖಲೆಯ ಪುಸ್ತಕ ; ರಿಜಿಸ್ಟರು. ದಳ—ಸೈನ್ಯ. ಆವೃತ್ತ— ಸುತ್ತುವರಿಯಲ್ಪಟ್ಟ. ಹತಾಶ—ಆಸೆಯನ್ನು ಕಳೆದುಕೊಂಡ : ನಿರಾಸೆಯಿಂದ ಕೂಡಿದ. ಅಣು—ಅತಿಸೂಕ್ಷ್ಮವಾದ ವಸ್ತು. ಜಾಡ್ಯ—ರೋಗ. ಉಪದ್ರವ—ಖಾಯಿಲೆ ರೋಗ. ಮರುಕಳಿಸು—ಪುನಃ ಕಾಣಿಸಿಕೊಳ್ಳು ; ಮತ್ತೆ ಉಂಟಾಗು. ಅತ್ಯಾಶ್ಚರ್ಯ—ಅತಿ+ ಆಶ್ಚರ್ಯ (ಯ. ಸಂ.). ದುರಾಕ್ರಮಣ—ಅನ್ಯಾಯವಾಗಿ ದಾಳಿಮಾಡುವುದು. ಲಸಿಕೆ—ಗಾಯದ ರಸ. ಭಾಸವಾಗು—ಹೊಳೆ ; ಗೊತ್ತಾಗು. ನಂಜು—ವಿಷ. ಹವಣಿಸು—ಸಮಯವನ್ನು ಕಾಯಿ ; ಸಿದ್ಧಮಾಡಿಕೊ. ಮುಸುಕುಮಾಡು—ಅಂಧಕಾರವನ್ನುಂಟುಮಾಡು : ಅಜ್ಞಾನವನ್ನುಂಟುಮಾಡು. ಚಿರಸ್ಮರಣೀಯ—ಯಾವಾಗಲೂ ನೆನೆದುಕೊಳ್ಳುವಂತಹ. ಸತ್ವಪರೀಕ್ಷೆ—ಶಕ್ತಿ ಅಥವಾ ಯೋಗ್ಯತೆಯ ಪರೀಕ್ಷೆ. ವಿದ್ವನ್ಮಣಿ—ಪಂಡಿತರತ್ನ ; ಜ್ಞಾನಿ. ಆರಾಧಕ—ಪೂಜಿಸುವವನು. ಬೈಬಲ್—ಕ್ರೈಸ್ತಧರ್ಮಕ್ಕೆ ಮೂಲಪುರುಷನಾದ ಕ್ರಿಸ್ತನು ಉಪದೇಶಿಸಿದ ಧರ್ಮವನ್ನು ಒಂದೆಡೆ ಸೇರಿಸಿದ್ದಾರೆ ; ಹಾಗೆ ಸೇರಿಸಿದ ಗ್ರಂಥವನ್ನು 'ಬೈಬಲ್' ಎಂದು ಕರೆಯುತ್ತಾರೆ. ಇದು ಕ್ರೈಸ್ತ ಧರ್ಮದ ಆಧಾರ ಗ್ರಂಥ.

ಹರ್ಷೋದ್ಗಾರ—ಹರ್ಷ+ಉದ್ಗಾರ (ಗು. ಸಂ.) ಸಂತೋಷದ ಧ್ವನಿ. ಅತ್ಯಲ್ಪ—ಅತಿ+ಅಲ್ಪ (ಯ.ಸಂ.). ನಿರತನಾಗು—ಸದಾ ತತ್ಪರನಾಗು. ಬುನಾದಿ—ಮೂಲ. ಸನ್ಮಾನ—ಪುರಸ್ಕಾರ ಮನ್ನಣೆ. ಪರಿಶೋಧನೆ—ಹೊಸಹೊಸದನ್ನು ಕಂಡುಹಿಡಿಯುವುದು. ಸಂದಿಗ್ಧ—ಇಕ್ಕಟ್ಟು ಇಂಜಕ್ಷನ್—ಚುಚ್ಚುಮದ್ದು ; ಔಷಧವನ್ನು ಸೂಜಿಯ ಮೂಲಕ ರಕ್ತಕ್ಕೆ ಸೇರಿಸುವುದು

ಸಂತೈಸು—ಸಮಾಧಾನಪಡಿಸು. ಸಜ್ಜುಗೊಳಿಸು—ಸಿದ್ಧಪಡಿಸು. ಒಕ್ಕೊರಲು—ಒಂದೇ ಕಂಠದಿಂದ ಕೂಗುವುದು.

ಪ್ರಶ್ನೆಗಳು :

೧. ಲೂಯಿ ಪ್ಯಾಶ್ಚರನ ಬಾಲ್ಯವನ್ನು ವಿವರಿಸಿ.
೨. ಲೂಯಿ ಪ್ಯಾಶ್ಚರನ ಮೂರು ಸೂತ್ರಗಳಾವುವು ?
೩. ಪ್ಯಾಶ್ಚರನು ಮೇರಿಯ ತಂದೆಗೆ ಬರೆದ ಪತ್ರದ ಸಾರಾಂಶವೇನು ?
೪. ಪ್ಯಾಶ್ಚರನು ಬಾನ್ ವಿಶ್ವವಿದ್ಯಾನಿಲಯದ ಅಧಿಕಾರಿಗೆ ಏನೆಂದು ಕಾಗದ ಬರೆದನು ? ಹಾಗೆ ಬರೆಯಲು ಕಾರಣವೇನು ?
೫. ಪ್ಯಾಶ್ಚರನು ನೆರಡಿರೋಗಕ್ಕೆ ಹೇಗೆ ಔಷಧವನ್ನು ಕಂಡುಹಿಡಿದನು ?
೬. ಪ್ಯಾಶ್ಚರನ ಜೀವನದಲ್ಲಿ ಚಿರಸ್ಮರಣೀಯ ದಿನವಾವುದು ? ಏಕೆ ?
೭. ಪ್ಯಾಶ್ಚರನಿಗಿಂತ ಮುಂಚೆ ಹುಚ್ಚುನಾಯಿ ಕಡಿದವರಿಗೆ ಮಾಡುತ್ತಿದ್ದ ಚಿಕಿತ್ಸೆ ಏನು ? ಹುಚ್ಚುನಾಯಿ ಕಡಿತದಿಂದ ಬರುವ ರೋಗದ ಸ್ವರೂಪವೇನು ?
೮. ಹುಚ್ಚುನಾಯಿಯ ಕಡಿತಕ್ಕೆ ಔಷಧವಾಗಿ ತಯಾರಿಸಿದ ಲಸಿಕೆಯನ್ನು ಪ್ಯಾಶ್ಚರ್ ಮೊಟ್ಟ ಮೊದಲು ಯಾರಮೇಲೆ ಪ್ರಯೋಗಿಸಿದನು ? ಅದರ ಪರಿಣಾಮವೇನು ?
೯. ಪ್ಯಾಶ್ಚರನು ತನ್ನ ಕೊನೆಯ ದಿನಗಳನ್ನು ಹೇಗೆ ಕಳೆದನು ?

ಇವುಗಳನ್ನು ಸಂದರ್ಭದೊಡನೆ ಸ್ಪಷ್ಟೀಕರಿಸಿ :

೧. 'ಪ್ರಶ್ನೆಗಳನ್ನು ಕೇಳುವುದಲ್ಲ. ಕೇಳಿದ ಪ್ರಶ್ನೆಗೆ ಉತ್ತರ ಹೇಳುವುದೇ ನಿನ್ನ ಕರ್ತವ್ಯ'.
೨. 'ಆಗಾಗ ತಲೆಯ ನೋವು ಬಂದು ಹಸಿವಿನ ಬೇಗೆಯನ್ನು ತಿಂದುಬಿಡುತ್ತಿತ್ತು'.
೩. 'ಈ ನಿರಾಶಾಜನಕ ಬಾಹ್ಯದಲ್ಲಿ ಪೂರ್ಣ ಅನುರಾಗವು ಅಡಕವಾಗಿದೆ'.
೪. 'ನನ್ನ ಕರ್ತವ್ಯ, ನನ್ನ ಸಂಸಾರ, ನನ್ನ ದೇಶ ಇವೇ ನನ್ನ ಆರಾಧಕವಸ್ತುಗಳು'.
೫. 'ಪಶ್ಚಾತ್ತಾಪಪಡುವ ಪಾಪಿಷ್ಠನಿಗೆ ಸ್ವರ್ಗವು ದೊರೆಯುವುದು'.
೬. 'ನನ್ನ ಹೃದಯದಲ್ಲಡಗಿರುವ ಭಾವನೆಗಳಿಗೆಲ್ಲ ನನ್ನ ತಾಯಿಯ ತ್ಯಾಗಮಯ ಜೀವನವೇ ಬುನಾದಿ'.
೭. 'ವಿಜ್ಞಾನವೂ, ಶಾಂತಿಯೂ ಅಜ್ಞಾನವನ್ನೂ. ಯುದ್ಧವನ್ನೂ ನಿರ್ಮೂಲ ಮಾಡುತ್ತವೆ'.

ಇವುಗಳನ್ನು ಬಿಡಿಸಿ ಸಂಧಿಯ ಹೆಸರನ್ನು ತಿಳಿಸಿ :

ರೂಪಾಕೃತಿ. ಕಲೋಪಾಸಕ, ವಿದ್ಯಾಭ್ಯಾಸ. ಮೂಲೆಗಲ್ಲು. ವಿದ್ಯಾಲಯ. ಮುಖ್ಯಾಧಿಕಾರಿ. ಸತ್ರಾಗಾರ, ವಿದ್ವನ್ಮಣಿ, ಹರ್ಷೋದ್ಗಾರ.

ಇವುಗಳನ್ನು ಸ್ವಂತ ವಾಕ್ಯಗಳಲ್ಲಿ ಪ್ರಯೋಗಿಸಿ :

ಪ್ರತಿಭಟಿಸು, ತತ್ತರಿಸಿಹೋಗು. ಮುಡುಪಾಗಿಡು. ಮರುಕಳಿಸು, ತಡೆಗಟ್ಟು.

***

# ನೆಗಡಿ

---

ತೀ.ನಂ.ಶ್ರೀ

"ಒಂದು. ಎರಡು. ಮೂರು. ನಾಲ್ಕು. ಐದು...... ಇಲ್ಲ. ಇನ್ನೂ ಮುಗಿದಿಲ್ಲ! ಆ ಏಳು. ಎಂಟು. ಒಂಬತ್ತು——ಅಬ್ಬಬ್ಬಾ! ಹತ್ತು. ಇನ್ನೂ ಒಂದು! ಈಗ ಶಾಂತವಾಯಿತು

ಇದೇನು ಎಣಿಕೆ? ಮನೆಯಲ್ಲಿರುವ ಹುಡುಗರು, ಹಿರಿಯರು ಎಲ್ಲರಿಗೂ ಈ ಬೆರಗು ಹೊರಗಿನಿಂದ ಯಾರಾದರೂ ಸಂಸ್ಥಾನಾಧಿಪತಿಗಳು ಆಗಮಿಸಿದಾಗ ಆಗುವ ಗುಂಡುಗಳ ಹೀಗೆ ಲೆಕ್ಕ ಹಾಕುತ್ತಿದ್ದಾರೆಯೆ?

ಅಲ್ಲ. ಅಲ್ಲ! ನನಗೆ ನೆಗಡಿ ಹಿಡಿದಾಗ ಭಾಂಕರಿಸುವ ಸೀನುಗಳ ಲೆಕ್ಕ ಇದು! ಹೊ ಪ್ರಭುಗಳ ಆಗಮನ ನಿರ್ಗಮನ ಕಾಲಗಳಲ್ಲಿ ಮಾತ್ರ ಗುಂಡಿನ ಮರ್ಯಾದೆ ನಡೆಯು ಸಂಪ್ರದಾಯ. ಆದರೆ ಈ ನನ್ನ ಪಟ್ಟದ ದೊರೆಗೆ ಅಷ್ಟರಲ್ಲೇ ತೃಪ್ತಿಯಿಲ್ಲ. ಇಷ್ಟೇ ಗುಂಡುಗಳ ಕ್ಲುಪ್ತವೂ ಇಲ್ಲ. ಸ್ವೇಚ್ಛೆಯಾಗಿ. ಸ್ವತಂತ್ರವಾಗಿ ಎಣಿಕೆಯನ್ನು ಅಣಕಿಸಿ ಸೀನುಗಳು ಹೊರಟು ಮನೆತುಂಬ ಪ್ರತಿಧ್ವನಿಸುತ್ತವೆ: ನಾಭಿಯಿಂದ ನೆತ್ತಿಯವರೆಗೆ ಅಂಗಾಂಗಗಳನ್ನು ಅಲ್ಲಾಡಿಸುತ್ತ ಡೈನಮೈಟುಗಳು ಸಾಲಾಗಿ ಸಿಡಿದಾಗ ಬಂಡೆಗಳು ಬಿರಿದು ಮಣ್ಣೆಲ್ಲ ಎರಚಾಡಿ ಉತ್ಕಂಪಿಸ ಭೂಭಾಗದಂತೆ ನಾನಿದ್ದರೆ, ನಮ್ಮ ಮನೆಮಂದಿಯೆಲ್ಲರೂ ಸೀನಿನ ತುಂತುರುಗಳು ಎಟುಕದ ದೂರದಲ್ಲಿ ನಿಂತು ಸ್ವಲ್ಪವೂ ಅಂಜಿಕೆಯಿಲ್ಲದೆ ಉತ್ಸಾಹದಿಂದ ಸೀನುಗಳನ್ನು ಎಣಿಸಲು ತೊಡ ತ್ತಾರೆ. ಈ ಸಲ ಇಷ್ಟೇ ಬರುತ್ತವೆ ಎಂದು—ನನಗೆ ತಿಳಿಯದಂತೆ—ಒಬ್ಬರೊಬ್ಬರೊಡನೆ ಪಂತಗಳನ್ನೂ ಕೂಡ ಕಟ್ಟುತ್ತಾರೋ ಏನೊ! ನನಗೆ ಮೈ ಕೈ ನೋವೆಂದರೆ ಆತಂಕಪಡುವ ಹಿಡಿದಾಕೆ ಕೂಡ ಈ ಪ್ರಸಂಗದಲ್ಲಿ ಮಿಕ್ಕವರ ಜೊತೆಗೇ ಸೇರಿಬಿಡುತ್ತಾಳೆ. ರೇಗಿ ಪ್ರಯೋಜನ ಗಂಟಲು ಚೆನ್ನಾಗಿ ಕಟ್ಟಿಕೊಂಡಿರುವುದರಿಂದ ಗಟ್ಟಿಯಾಗಿ ಆರ್ಭಟಿಸಲು ಕೂಡ ಆಗುವು ಹೋಯಿತು—ಈ ನೆಗಡಿ ಸೀನುಗಳಿಂದ ಗರ್ವ ಹೋಯಿತು, ಗೌರವ ಹೋಯಿತು!

ಇದೊಂದು ದೊಡ್ಡ ಕೊರಗು ನನಗೆ. ನೆಗಡಿ ಎಂಥ ಪ್ರಬಲವಾದ ವ್ಯಾಧಿ! ಇದು
ಡಿದರೆ ಸಾಕು : ಮೂಗು ಆನೆಯ ಸೊಂಡಿಲಿನಷ್ಟು ಭಾರವಾಗುತ್ತದೆ. ಕಣ್ಣು ಉರಿಗೆಂಡ
ಾಗುತ್ತದೆ. ಅಂಗುಳು ಹುರಿಹೆಂಚಾಗಿ, ಗಂಟಲು ಶ್ಲೇಷ್ಮದ. ಕೆಸರಿನಲ್ಲಿ ಅಡಗಿಹೋಗುತ್ತದೆ.
ದೆಯಂತೂ ಉಕ್ಕಿನ ಯಂತ್ರದಲ್ಲಿ ಅದುಮಿದಂತಾಗುತ್ತದೆ. ನೆತ್ತಿ ಕತ್ತಿನ ಮೇಲೆ
ತಿರುವಂತೆಯೇ ತೋರುವುದಿಲ್ಲ. ದೇಹದ ಊರ್ಧ್ವಭಾಗದಲ್ಲೆಲ್ಲಾ ಈ ರೋಗದ
ಸಂಖ್ಯಾತ ಕ್ರಿಮಿಸೇನೆ ಬೀಡುಬಿಟ್ಟಿರುತ್ತದೆ. ಹೀಗಿದ್ದರೂ ನೆಗಡಿ ಬಂದವನ ವಿಷಯದಲ್ಲಿ
ಾರಿಗಾದರೂ ಸಹಾನುಭೂತಿಯುಂಟೆ ? ಒಬ್ಬನಿಗೆ ಸ್ವಲ್ಪ ಜ್ವರ ಬಂದರೆ ಸಾಕು. ಬೆಚ್ಚಗೆ
ಸಿಗೆ ಹಾಸಿ, ಹೊದಿಸಿ. ಬಾಯಿಗೆ ಸವಿಯಾಗುವಂತೆ ಹಾಲುಗಂಜಿಗಳನ್ನು ಹವಣಿಸಿ.
ಷಧಿಗಾಗಿ ಮನೆಯವರೆಲ್ಲ ಪರದಾಡುವವರೇ. ಸಾಧಾರಣವಾಗಿ ಮನೆಯ ಹತ್ತಿರ
ಳಿಯದ ಮಿತ್ರರೆಲ್ಲ ಹುಡುಕಿಕೊಂಡು ಬಂದು ಹತ್ತಿರ ಕುಳಿತು ಆ ಮಾತು
ಮಾತು ಆಡಿ ಬೇಸರ ಕಳೆಯುವವರೇ. ಆದರೆ ಜ್ವರಕ್ಕಿಂತ ಹತ್ತುಪಾಲು ಬಿರುಸಾಗಿ
ಡಿ ದೇಹವನ್ನು ಕಿತ್ತು ತಿನ್ನುತ್ತಿದ್ದರೂ ನಿಮ್ಮ ವಿಷಯದಲ್ಲಿ ಯಾರಿಗೂ ಲಕ್ಷ್ಯವಿಲ್ಲ.
ಒಂದು ಕಡ್ಡಿ ಸೌದೆಯೂ ಇಲ್ಲ. ಅಂದರೆ. ಡಿಪೋಕ್ಕೆ ಹೋಗಿ ವಿಚಾರಿಸಿಕೊಂಡು
ಬಾರದೆ?" ಎಂದು ನಿಮ್ಮ ಅರ್ಧಾಂಗಿಯೇ ಆಜ್ಞಾಪಿಸುತ್ತಾಳೆ. "ಮೊದಲೇ ನೆಗಡಿ.
ಭಾರ : ಮೇಲೆ ಸೋನೆ ಬೇರೆ ಬೀಳುತ್ತಿದೆಯಲ್ಲ !" ಎಂದು ನೀವು ಒಂದೆರಡುಸಲ ಕೆಮ್ಮಿ.
ರದ ದನಿಯಿಂದ ಹೇಳಿದರೆ. "ಅಯ್ಯೋ. ನಿಮ್ಮ ನೆಗಡಿ ತಪ್ಪಿದ ದಿನ ಯಾವುದು? ತಲೆಯ
ೀಲೆ ಒಂದು ಟವಲು ಹಾಕಿಕೊಂಡು ಹೋಗಿ ಬನ್ನಿ : ಬೇಕಾದರೆ ಶಾಲನ್ನೇ ಹೊದ್ದುಕೊಳ್ಳಿ,
ಮೇಲೆ ಕಷಾಯ ಕಾಸಿಕೊಡುತ್ತೇನೆ : ಎಲ್ಲಾ ಸರಿಹೋಗುತ್ತದೆ" ಎಂದು ತಾತ್ಸಾರವಾಗಿ
ನ್ನುತ್ತಾಳೆ. ಅಲ್ಲಿಗೆ ನಿಲ್ಲಿಸದೆ. "ಇಷ್ಟಕ್ಕೂ ನಿಮ್ಮದೇ ಅಪಥ್ಯ. ತಿಳಿದೂ ತಿಳಿದೂ ಕ್ಷೌರ
ಡಿಕೊಂಡು ನೆತ್ತಿಗೆ ಸ್ನಾನಮಾಡಿದಿರಿ. ಒಂದು ದಿನ ಮುಖ ಕೆತ್ತಿಕೊಳ್ಳದಿದ್ದರೆ ಏನು
ಡುಹೋಗುತ್ತಿತ್ತು ? ಮಜ್ಜಿಗೆ ಹಾಕಿಕೊಳ್ಳಬೇಡಿ ಅಂತ ನಿನ್ನೆಯ ರಾತ್ರಿ ನಾನು ಎಷ್ಟು
ಲಿಕೊಂಡರೂ ಕೇಳಿದಿರಾ ? ಎಳೆಯ ಮಕ್ಕಳ ಹಾಗೆ ಹಠ ಮಾಡಿದಿರಿ. ಈಗ ಅನುಭವಿಸಿ"
ನು ಹಂಗಿಸಿ ಅಟ್ಟಿಬಿಡುತ್ತಾಳೆ. ಆಕೆಗೆ ಯಾವಾಗಲೂ ನಿಮ್ಮ ಮಜ್ಜಿಗೆಯ ಮೇಲೆಯೇ
. ಅನ್ನಕ್ಕೆ ಹಾಲು ಕಲಸಿಕೊಂಡರೆ ಒಂದು ತುತ್ತೂ ನಿಮ್ಮ ಗಂಟಲಲ್ಲಿ ಇಳಿಯುವುದಿಲ್ಲ.
ು ಆಕೆ ಬಲ್ಲಳು. ಆದಕ್ಕೇ ನೆಗಡಿಯ ಸುಳಿವನ್ನು ಕಂಡ ಕೂಡಲೇ ಎಲ್ಲಕ್ಕೂ ಮುಂದಾಗಿ
ಜ್ಜಿಗೆಯನ್ನು ತಪ್ಪಿಸಿಬಿಡುತ್ತಾಳೆ. ಹಾಲನ್ನವನ್ನು ಔಷಧಿಯಂತೆ ಊಡಿಸುತ್ತಾಳೆ. 'ಇಷ್ಟೇ
ಉರಿಬೇಸಿಗೆಯಲ್ಲಿ ಕೂಡ, ಒಂದು ಲೋಟ ನೀರುಮಜ್ಜಿಗೆಯನ್ನೋ. ನಿಂಬೇ
ಸ ಪಾನಕವನ್ನೋ ಮಾಡಿಕೊಡೆಂದು ನೀವು ಕೇಳಿದರೆ. "ಸಾಕು ಸುಮ್ಮನಿರಿ. ಹಾಗೆಲ್ಲ
ಪಡಬಾರದು. ನೆಗಡಿ ಬಂದುಬಿಟ್ಟೀತು." ಎಂದು ನಸುನಗುತ್ತಾ ನಿಷೇಧಿಸಿ
ತ್ತಾಳೆ.

ಮನೆಯ ಸೌಖ್ಯ ಹೀಗಾಯಿತು. ಹೊರಗಡೆಯೋ? ನೀವು ಎದುರಿಗೆ ಬ... ಆಪ್ತಮಿತ್ರರೂ ಕೂಡ ಹಾವನ್ನು ಕಂಡಂತೆ ಹಿಮ್ಮೆಟ್ಟುತ್ತಾರೆ. ವಿಧಿಯಿಲ್ಲದೆ ಮಾತಾಡ... ಬೇಕಾದಾಗ ಚರಂಡಿಯ ದುರ್ವಾಸನೆಗೆ ಅಸಹ್ಯಪಟ್ಟವರಂತೆ ಮುಖಕ್ಕೆ ಬಟ್ಟೆ ... ಕೊಂಡೇ ನಿಲ್ಲುತ್ತಾರೆ. ಕೆಲವು ಮಂದಿ ಸಲಿಗೆಯ ಸ್ನೇಹಿತರಂತೂ. "ಅಯ್ಯಾ ಮಹಾ... ಈ ನೆಗಡಿ ಕಟ್ಟಿಕೊಂಡು ಯಾವ ದಿಗ್ವಿಜಯಕ್ಕೆ ಹೊರಟೆ? ಹಾಯಾಗಿ ಮನೆಯಲ್ಲಿ ... ಮುಚ್ಚಿಕೊಂಡು ಇರಬಾರದಾಗಿತ್ತೆ? ನಿನ್ನ ಶೀತಶೀಕರಗಳನ್ನು ನಮ್ಮ ಮೇಲೆ ... ಬೇಡಪ್ಪಾ!" ಎಂದು ಸ್ಪಷ್ಟವಾಗಿಯೇ ಆಡಿ ದೂರ ನೂಕುತ್ತಾರೆ. ಅವರ ... ಬಹಿಷ್ಕಾರಕ್ಕೆ ಬೆದರಿ ನಿತ್ಯಕರ್ಮವನ್ನು ಬಿಡಲಾದೀತೆ? ಮೂಗು ಕಟ್ಟಿಕೊಂಡಾಗ... ರಜಕ್ಕೆ ಬರೆದು ಹಾಕಿ ಮನೆಯಲ್ಲಿ ಕುಳಿತುಬಿಟ್ಟರೆ. ಸಂಬಳಕ್ಕೆ ಸೊನ್ನೆ ಬಿದ್ದೀತು. ... ಮೇಲೆ ನೆಗಡಿ ನನ್ನೊಬ್ಬನ ಹಕ್ಕಿನ ಆಸ್ತಿಯೇನೂ ಅಲ್ಲವಲ್ಲ. ಇವರ ಮುಖವನ್ನು ... ಮೂಸಿನೋಡಲೇ ಕೂಡದೋ? ಅಂಥ ಸ್ವಾಮ್ಯಭಾವ ನನಗೇನೂ ಇಲ್ಲ. ನನ್ನ ಸಹ... ದಿಂದ ಇವರಿಗೂ ಅದರ ನಿಕಟ ಪರಿಚಯ ಒದಗಲಿ: ಆಗ ಮಿತ್ರರಾಗುತ್ತಾ... "ಸಮಾನಶೀಲವ್ಯಸನೇಷು ಸಖ್ಯಂ" ಎಂಬ ಉಕ್ತಿ ಸಾರ್ಥಕವಾಗುವುದು ಇನ್ನು ಹೆ... ಕೈಯಲ್ಲಿ ಕರವಸ್ತ್ರವನ್ನು ಹಿಡಿದು ಮೂಗನ್ನು ಹಿಂಡುತ್ತಾ. ಕಣ್ಣೀರನ್ನು ಸುರಿಸುತ್ತಾ ... ವೀಕ್ಷಣವನ್ನು ಒಬ್ಬರ ಕಡೆಗೊಬ್ಬರು ಬೀರಿದಾಗಲೆಲ್ಲ ಸಹಾನುಭೂತಿ ದಾಂಗುಡಿ... ಮೈತ್ರಿಯ ಬಂಧನ ಬಿಗಿಯಾಗುವುದು.

ನೆಗಡಿಗೆ ಇಂಥ ಕಾಲ. ಇಷ್ಟು ಸಲ ಎಂಬ ಕಟ್ಟುಪಾಡು ಯಾವುದೂ ಇದ್ದಂತೆ ... ಅನುಭವಕ್ಕೆ ಬಂದಿಲ್ಲ. ಚಳಿಗಾಲದಲ್ಲಿ. ಅದರಲ್ಲೂ ತುಂತುರು ಹನಿ ಬೀಳುವಾಗ. ... ಉರುಬು ಹೆಚ್ಚು ಎಂದು ಹೇಳುವವರುಂಟು. ನವೆಂಬರ್ ತಿಂಗಳ ಮೊದಲನೆಯ ವಾ... ನೆಗಡಿ ಭೇಟಿ ಕೊಡದಿದ್ದರೆ ಋತುಧರ್ಮವೇ ಬದಲಾಯಿತಂತೆ ಆತಂಕಪಡುವವರೂ ಉ... ಆದರೆ ನನ್ನ ನೆಗಡಿ ಹೀಗೆ ತನ್ನ ಸವಾರಿಗೆ ಪರಿಮಿತಿಗಳನ್ನು ಕಲ್ಪಿಸಿಕೊಂಡಿಲ್ಲ. ದ... ಕಾರಣವೇ ಒಮ್ಮೊಮ್ಮೆ ನನ್ನ ಪ್ರಶಂಸೆಯನ್ನು ಕೂಡ ಗಳಿಸಿದೆ. ನನ್ನ ಗುರುತಿನ ದೊ... ಮನುಷ್ಯರೊಬ್ಬರು "ನನಗೆ ಮೂರು ತಿಂಗಳಿಗೊಂದು ಸಲ ತಪ್ಪದೆ ನೆಗಡಿ ಹಿಡಿಯುತ್ತ... ಎಂದು ಹೇಳಿ. ತಿಂಗಳಿಗೊಂದು ಸಲ ತಪ್ಪದೆ ಒಂದು ಸಾವಿರ ರೂಪಾಯಿ ಸಂಬಳ ತೆಗೆ... ವವರ ಹಾಗೆ. ಹೆಮ್ಮೆ ಕೊಚ್ಚಿಕೊಂಡರು. ಆದರೆ ಅವರನ್ನು ಕುರಿತು ಕನಿಕರವೂ. ... ನಿಯಮಬದ್ಧವಾದ ನೆಗಡಿಯ ವಿಷಯದಲ್ಲಿ ತಿರಸ್ಕಾರವೂ ನನಗೆ ಹುಟ್ಟಿತು. ನನ್ನ ನೆಗ... ಪೂರ್ಣ ಸ್ವಾತಂತ್ರ್ಯವನ್ನು ನೆನೆದು ಅದರಲ್ಲಿ ಅಭಿಮಾನ ಉಕ್ಕಿತು. ಅದು ಹೀಗೆಲ್ಲ ಅ... ಕಟ್ಟುಬೀಳುವುದಿಲ್ಲ. ಮನಸ್ಸು ಬಂದರೆ ಮರಮರಳಿ ಬರುತ್ತದೆ. ಅನೇಕ ಕಾಲ ತಂಗು... ಇಲ್ಲವಾದರೆ ಎಷ್ಟೋ ದಿನ ನಾನು ಕಾದು ನಿರೀಕ್ಷಿಸುತ್ತಿದ್ದರೂ ಇತ್ತ ಕಡೆ ಸುಳಿಯುತ್ತ... ಇಲ್ಲ. ಉದಾಹರಣೆಗೆ ಈ ಸಲದ ನವೆಂಬರಿನಲ್ಲಿ ನನ್ನ ಸುತ್ತಮುತ್ತ ಎಲ್ಲರೂ ಸೀ...

ಬೊಬ್ಬೆಯನ್ನೇ ಎಬ್ಬಿಸಿದ್ದರೂ ನಾನು ಮಾತ್ರ ಶೀತನಿರೋಧಕ ಮುಖವಾಡವನ್ನು ಧರಿಸಿದವನಂತೆ ಪ್ರಶಾಂತನಾಗಿದ್ದೆ ; ನಿರಾಳವಾಗಿ ಓಡಾಡಿದೆ. ಡಿಸೆಂಬರ್ ತಿಂಗಳು ಪ್ರವೇಶಿಸಿದ ಮೇಲೆ. ಈ ಒಗ್ಗಿದ ಅತಿಥೇಯನನ್ನು ಇನ್ನು ಕಾಯಿಸಬಾರದೆಂದು ನನ್ನ ನೆಗಡಿ ದೊಡ್ಡ ಮನಸ್ಸು ಮಾಡಿ. ಈಗ ಭೇಟಿ ಕೊಟ್ಟಿದೆ. ಆದರೆ ಮಿತಪರಿವಾರದೊಡನೆ ಬಂದಿದೆ; ನನ್ನಿಂದ ಹೆಚ್ಚು ಸೇವೆಯನ್ನು ಅಪೇಕ್ಷಿಸಿಲ್ಲ. ಈ ಹರಟೆಯನ್ನು ಬರೆಯುವುದಕ್ಕೆ ಕೂಡ ಅವಕಾಶ ಕೊಟ್ಟಿದೆ. (ಇದು ತನ್ನ ಪ್ರತಾಪದ ವರ್ಣನೆಯಾದ ಕಾರಣ ಹೀಗೆ ಸುಮ್ಮನಿದೆ ಯೆಂದು ಭಾವಿಸಿ ಅದರ ಔದಾರ್ಯಕ್ಕೆ ಕಳಂಕವನ್ನು ನಾನು ಆರೋಪಿಸಲೊಲ್ಲೆ.) ಮತ್ತೊಮ್ಮೆ ಸಲ. ಬಿರುಬೇಸಗೆಯಲ್ಲೇ ಸಹವಾಸ ಕಾತರತೆಯಿಂದ ನನ್ನ ಬಳಿಗೆ ಹಲವು ಬಾರಿ ಬಂದಿದೆ. ಬೆಳಿಗೆ ನಾನು ಕಣ್ಣು ಬಿಡದಷ್ಟು. ಮಟ್ಟಿಗೆ ಕೂಡ ಮುಖಕ್ಕೆ ಮುತ್ತಿಗೆ ಹಾಕಿದೆ.

ಹೀಗೆ ನನ್ನ ನೆಗಡಿ ಸರ್ವತಂತ್ರ ಸ್ವತಂತ್ರವಾದರೂ ಅದಕ್ಕೆ ಸಮಯಜ್ಞಾನವಿಲ್ಲವೆಂದೂ ನಾನು ಹೇಳಲಾರೆ. ಏಕೆಂದರೆ. ನಾನು ಎಲ್ಲಾದರೂ ಭಾಷಣ ಮಾಡುವಂತೆ ಏರ್ಪಾಡಾದರೆ, ಆಹ್ವಾನ ಪತ್ರಿಕೆಯನ್ನು ನೋಡಿಕೊಂಡು ಬಂದಂತೆ ಒಪ್ಪತ್ತು ಮುಂಚೆಯೇ ಬರುತ್ತದೆ. ತಂದೆ ಎಲ್ಲಿಗಾದರೂ ಹೊರಟಾಗ ಮಗು ಜಂಡಿಹಿಡಿದು ಹೆಗಲೇರುವಂತೆ. ಇದೂ ನನ್ನ ಮೂಗನ್ನು ಸೇರಿ ನನ್ನ ಜೊತೆಗೆ ಹೊರಡುತ್ತದೆ. ಒಂದು ಸಲವಂತೂ ಇದರ ಜಾಗರೂಕತೆ ನನ್ನನ್ನು ದಿಗ್ಭ್ರಮೆಗೊಳಿಸಿತು. ಒಬ್ಬನ ಜೀವಮಾನದಲ್ಲಿ ಒಂದೆರಡು ಬಾರಿ ಮಾತ್ರ ಒದಗಬಹುದಾದ ವಿಶೇಷ ಸಂದರ್ಭ ಅದು. ವ್ಯವಸ್ಥಾಪಕರು ಯಾವ ಕಾರಣದಿಂದಲೋ ನನ್ನಲ್ಲಿ ಅಕ್ಕರೆ ತೋರಿಸಿ. ಭಾಷಣ ಮಾಡಬೇಕೆಂದು ಕೋರಿದ್ದರು. ನಾನೂ ಔತ್ಸುಕ್ಯದಿಂದಲೇ ಒಪ್ಪಿಕೊಂಡಿದ್ದೆ. ಆ ಮಹಾಸಮಾರಂಭದಲ್ಲಿ ನನ್ನ ಅಲ್ಪವಾದ ವಾಗ್ವಿಭವವನ್ನು ಕೈಯಲ್ಲಾದಷ್ಟು. ಆಕರ್ಷಕವಾಗಿ ಪ್ರದರ್ಶಿಸಬೇಕೆಂದು ಸಂಕಲ್ಪಿಸಿದ್ದೆ. ಆದರೆ ಮುಹೂರ್ತಕ್ಕೆ ಸರಿಯಾಗಿ ಒಂದು ದಿನ ಮುಂಚೆ ನೆಗಡಿ ನನ್ನ ಮೂಗನ್ನು ಕಟ್ಟಿತು. ಗಂಟಲನ್ನು. ಕಟ್ಟಿತು. ಭಾಷಣದ ದಿನ ಬೆಳಗ್ಗೆ ಧ್ವನಿ ಕೂತುಹೋಗಿತ್ತು. ಎನ್ನುವುದಕ್ಕಿಂತ ಹೂತುಹೋಗಿತ್ತು ಎಂದರೆ ಸತ್ಯಕ್ಕೆ ಹತ್ತಿರವಾಗಬಹುದು ! ಕಲ್ಲುಬಸವನ ಬಾಯಧಾರೆಯಂತೆ ಮೂಗಿನಿಂದ ನೀರು ಸತತವಾಗಿ ಒಸರುತ್ತಿದೆ. ನನ್ನ ಕರವಸ್ತ್ರಗಳ ಸರಬರಾಯಿ ಮುಗಿಯಿತೇ ಹೊರತು ಅದರ ಹೊನಲು ತಗ್ಗಲಿಲ್ಲ. ಏನು ಮಾಡುವುದು ? ನೆಗಡಿಗೆ ರಾಮಬಾಣ ಯಾವುದೂ ಇಲ್ಲವೆಂದು ನಾನು ಚೆನ್ನಾಗಿ ಬಲ್ಲೆ. ಯಾವ ತಾರಕನನ್ನೂ ಶರಣು ಕಾಣದೆ. ತನ್ನ ಕರ್ಮವನ್ನು ತಾನು ಅನುಭವಿಸಿಯೇ ಸವೆಯಿಸಬೇಕಾದಂತೆ. ಕನಿಷ್ಠಪಕ್ಷ ಮೂರು ದಿನವಾದರೂ ಅದರ ಕಿರುಬೇಗೆಯಲ್ಲಿ ಪರಿತಪಿಸಲೇಬೇಕೆಂದೂ ನಾನೂ ಬಲ್ಲೆ. ಆದರೂ ಆಪತ್ಕಾಲದಲ್ಲಿ ಕಂಡಕಂಡ ಗುಳಿಗೆಗಲ್ಲ ಕೈಮುಗಿಯುವಂತೆ. ನಾನು ಕೇಳಿಕೇಳಿದ ಚಿಕಿತ್ಸೆಗಳನ್ನೆಲ್ಲಾ ನಡೆಸಿದೆ. ನೆಗಡಿ ಅಜೀರ್ಣದಿಂದ ಪ್ರಬಲಿಸುತ್ತದೆ; ಇದಕ್ಕೆ ಉಪವಾಸ ಒಳ್ಳೆಯದು ಎಂದು ಯಾರೋ ಹೇಳಿದರು. ಪ್ರಾಚೀನ ಕಾಲದಲ್ಲಿ ಸಮರದ ಹಿಂದಿನ ರಾತ್ರಿ ಯುದ್ಧವೀರರು ದರ್ಭಶಯ್ಯೆಯಲ್ಲಿ ನಿರಾಹಾರವ್ರತ

ಹಿಡಿದು ಮಲಗುತ್ತಿದ್ದಂತೆ ನಾನು ಬರಿಯ ಹೊಟ್ಟೆಯಲ್ಲಿ ಹೊರಳಾಡಿದೆ.
ಯಾವ ಗುಣವೂ ಕಾಣಲಿಲ್ಲ. ಒಣ ಅವಲಕ್ಕಿಯನ್ನು ತಿಂದರೆ ನೆಗಡಿಯನ್ನು ಹೀ
ಎಂದು ಮಾರನೆಯ ಬೆಳಿಗ್ಗೆ ಬೇರೊಬ್ಬರು ಸಲಹೆ ಕೊಟ್ಟರು. ಹಾಗೇ ಆಗಲೆಂದು
ಕಳೆದಿರುಳಿನ ಉಪವಾಸದ ಪ್ರೇರಣೆಯೂ ಕೊಂಚ ಸೇರಿ ಒಂದು ಹಿಡಿ ಅವಲಕ್ಕಿಯನ್ನ
ದುರ್ಭಿಕ್ಷ ಕಾಲದಲ್ಲೂ ಹೇಗೋ ಸಂಗ್ರಹಿಸಿ, ಪರಿಕರವೇನೂ ಇಲ್ಲದೆಯೇ ಅಗಿದು ನ
ಅತ್ತ ವೈದ್ಯರ ಬಳಿ ಹೋಗಿ, ಬಾಯನ್ನು ಬಳ್ಳದಗಲಕ್ಕೆ ತೆರೆದು ನುಂಗಲಾರದ, ಉಗುಳ
ದ್ರಾವಕವನ್ನು ಗಂಟಲೊಳಕ್ಕೆ ಲೇಪನ ಮಾಡಿಸಿಕೊಂಡೆ. ಬೂದಿ ಬಣ್ಣದ ಕಪಿ ಒಗಚಿನ
ನೀರನ್ನು ತೀರ್ಥದಂತೆ ಪ್ರಾಶನಮಾಡಿದೆ. ಮನೆಗೆ ಬಂದು ನಿಗಿನಿಗಿ ಉರಿಯುವ
ಮುಂದೆ ಕುಳಿತು. ಕಂಠನಾದ ಪದವಾಗಲೆಂದು ಮನಸ್ಸಿನಲ್ಲೇ ಹರಸಿಕೊಂಡು, ಮು
ತಮಟೆಯಂತೆ ಕೆಂಪಗೆ ಕಾಯಿಸಿದೆ. ಮತ್ತೆ ಅದೇ ಕೆಂಡಕ್ಕೆ ಅರಿಸಿನದ ಪುಡಿಯನ್ನು ಉದು
ರಾಗಿಯ ಹಿಟ್ಟನ್ನೂ ಬೆರಸಬೇಕಾಗಿತ್ತು. ಆದರೆ ಚಿನ್ನ ಕೊಟ್ಟರೂ ಅದು ಸಿಕ್ಕುವಂತಿರಲಿಲ್ಲ
ತಲೆಗೆ ಕಂಬಳಿ ಕವಿಚಿಕೊಂಡು, ಮೇಲಕ್ಕೆ ಅಡರುವ ಧೂಮಸ್ತೋಮವನ್ನು ಮೂಗು ಬಾ
ಪುಷ್ಕರ ಹಿಡಿಯುವ ತನಕ ಹೀರಿಹೀರಿ, ಕ್ರಿಮಿಗಳ ಉಚ್ಚಾಟನೆಯಾಗಲೆಂದು ಮಂತ್ರ ಜ
ಕಡೆಗೆ ಒಬ್ಬ ಹಿತಶತ್ರುವಿನ ಬೋಧನೆಗೆ ಕಿವಿಗೊಟ್ಟು ಒಂದೆರಡು ಚಿಟಿಕೆ ನಶ್ಯವನ್ನೂ ಏ
[illegible] ಪಾಲು ಹೆಚ್ಚಾಗಿ ಸೀನು ಬಂದಿತು ; ಮೂಗು ಇನ್ನಷ್ಟು ಪೊಲಸಾ

ಇಷ್ಟೆಲ್ಲ ಸಾಧನೆ ಮಾಡಿದರೂ ಫಲ ಮಾತ್ರ ಗೋಚರವಾಗಲಿಲ್ಲ. ಆದರೂ
ಎದೆಗುಂದದೆ, ಆ ದಿನ ಸಂಜೆ ಅಂಗಿಗಳ ಮೇಲೆ ಅಂಗಿಗಳನ್ನು ತೊಟ್ಟು, ಕೊರಳಿಗೆ ಉ
ಪಟ್ಟೆಯನ್ನು ಅಳವಡಿಸಿ, ನೆತ್ತಿಯ ಮೇಲೆ ಪೇಟವನ್ನು ಒತ್ತಿ ಧರಿಸಿ, ಗಂಟಲ ಗುಳಿಗ
ಚಪ್ಪರಿಸುತ್ತಾ ವೇದಿಕೆಯನ್ನೇರಿ ಮಹಾಸಭೆಯನ್ನು ಎದುರಿಸಿ ನಿಂತೆ. ಮುಂದುಗ
ಧ್ವನಿವರ್ಧಕ ಮಿನುಗುತ್ತಾ ಭರವಸೆ ಕೊಡುತ್ತಿತ್ತು. ಬಾಯಿ ತೆರೆದೆ. ನಾಲಗೆಯೂ
ಆದರೆ ಧ್ವನಿ ಹೊರಡಲೇ ಇಲ್ಲ. ಚಲಚ್ಚಿತ್ರ ಮಂದಿರದಲ್ಲಿ ಒಮ್ಮೊಮ್ಮೆ ಧ್ವನಿಭಾಗ ಒಂ
ಕ್ಷಣ ಕಡಿದು ಹೋಗಿ ಪಾತ್ರಗಳ ಮೂಗುಸನ್ನೆ ಮಾತ್ರ ಕಾಣಿಸಿದಾಗಿನ ಅನುಭವ
ಶ್ರೋತೃಗಳಿಗೆ ಲಭಿಸಿರಬೇಕು. ಯಂತ್ರವೇ ಕೆಲಸಮಾಡುತ್ತಿಲ್ಲವೇನೋ ಎಂದು ವ್ಯವಸ್ಥಾ
ಬೆದರಿ ಧಾವಿಸಿ ಬಂದರು. ಅಷ್ಟು ಹೊತ್ತಿಗೆ, ನನ್ನ ಧ್ವನಿ ನಗಡಿಯ ಹಿಡಿತದಿಂದ
ಬಿಡಿಸಿಕೊಂಡು, ಗುರುತೇ ತಿಳಿಯದಷ್ಟು ಒಡವಾಗಿ, ಜಡವಾಗಿ ಗುಹೆಯೊಳಗಿನ ನರಳಿ
ಹೊರಕ್ಕೆ ಬಂದಿತು. ಅದನ್ನು ಕೇಳಿ ನನಗೆ ಜುಗುಪ್ಸೆಯಾಯಿತು. ಆಲೋಚಿಸಿದ್ದ ಉ
ಭಾವಗಳೆಲ್ಲ ಎಲ್ಲಿಗೋ ಪಲಾಯನ ಮಾಡಿದ್ದವು. ಜಲಪಾತದಂತೆ ಧುಮುಕಬೇಕ
ನನ್ನ ವಾಗ್ವಾಹಿನಿ ಬೇಸಗೆ ದಿನದ ನಲ್ಲಿಯ ನೀರಿನಂತೆ ತೊಟ ತೊಟ ಎಂದು ಕ್ಷೀ
ಜಿನುಗುತ್ತಿತ್ತು. ಹಾಗೂ ಹೀಗೂ ಮೂರು ನಾಲ್ಕು ನಿಮಿಷ ಮೊಂಡತನದಿಂದ ಮಾತ
ಕಡೆಗೆ ಸೋಲನ್ನೊಪ್ಪಿ ಮುಕ್ತಾಯಕ್ಕೆ ಸಂದುಬಿಟ್ಟೆ. ಅಲ್ಲಿಂದೀಚೆಗೆ ಬುದ್ಧಿ ಕಲಿ

ಭಾಷಣ ಮಾಡಲು ಯಾರಾದರೂ ಕರೆದಾಗ, "ನನ್ನ ನೆಗಡಿ ಒಪ್ಪಿಗೆ ಕೊಟ್ಟರೆ .." ಎಂದು ಒಂದು ನಿಬಂಧನೆಯನ್ನು ಸೇರಿಸಲು ಮರೆಯುವುದಿಲ್ಲ.

ಈ ಅಶರಣತೆಗೆ ಪರಿಹಾರವೇ ಇಲ್ಲವೆ ? ವೈದ್ಯವಿದ್ಯೆ ಇಷ್ಟು ಮುಂದುವರಿದಿರುವಾಗ, ನೆನ್ನೆ ಮೊನ್ನೆಯ ತನಕ ಹೆಸರೇ ಕೇಳದಿದ್ದ ಅಪೂರ್ವ ರೋಗಗಳಿಗೆಲ್ಲ ಚಿಕಿತ್ಸಾಕ್ರಮಗಳು ಏರ್ಪಟ್ಟಿರುವಾಗ. ಜೀವಿಗಳ ಜನ್ಮಶತ್ರುವಾದ ಈ ನೆಗಡಿಗೇಕೆ ಇನ್ನೂ ಮದ್ದು ಸಿದ್ಧವಾಗಿಲ್ಲ ? ಎಲ್ಲಕ್ಕೂ ಸೂಜಿಮದ್ದು ಚುಚ್ಚುವಂತೆ ಇದಕ್ಕೂ ಚುಚ್ಚಿ ಚರ್ಮದ ರಂಧ್ರಗಳನ್ನು ಹೆಚ್ಚಿಸುವ ವಿಧಾನವೂ ಅಲ್ಲಲ್ಲಿ ಬಳಕೆಗೆ ಬಂದಿದೆ. ಆದರೇನು ? "ನೆಗಡಿಗೆ ಚಿಕಿತ್ಸೆ ಮಾಡಿದರೆ ಒಂದು ವಾರದಲ್ಲಿ ಗುಣವಾಗುತ್ತದೆ. ಹಾಗೆಯೇ ಬಿಟ್ಟರೆ ಏಳು ದಿನ ಬೇಕಾಗುತ್ತದೆ" ಎನ್ನುವುದೇ ಇನ್ನೂ ಕೊನೆ ಮಾತಾಗಿ ಉಳಿದಿದೆ. ನೆಗಡಿ ಬಾರದಂತೆ ತಡೆಗಟ್ಟುವ ಮುಂಜಾಗರೂಕತೆಯ ಕ್ರಮವಂತೂ ಕನಸಿನ ಗಂಟೇ ಸರಿ. ಕೈಲಾಸಶಿಖರದಲ್ಲೇನೋ ಪರಶಿವನು ಗಂಗಾಧರನೂ, ಚಂದ್ರಶೇಖರನೂ ಆಗಿದ್ದರೂ, ಫಾಲನೇತ್ರದ ಅಗ್ಗಿಷ್ಟಿಕೆಯನ್ನು ಸತತವೂ ಉರಿಸುತ್ತಾ ಶೀತ ಬಾಧೆಯನ್ನು ದೂರವಿರಿಸಬಹುದು. ಭೂತಲದ ನಮಗಾದರೆ ಯಾವ ಪರಿಹಾರವೂ ಇನ್ನೂ ಗೋಚರವಾಗಿಲ್ಲ. ಮಾನವನ ದೇಹರಚನೆಯಲ್ಲೇ ಈ ವ್ಯಾಧಿಗೆ ಭದ್ರವಾದ ನೆಲಗಟ್ಟು ದೊರೆತಿದೆ. ಗಾದೆಯ ಮಾತು ದಿಟ : "ಮೂಗಿರುವತನಕ ನೆಗಡಿ ತಪ್ಪುವ ಹಾಗಿಲ್ಲ".

## ಟಿಪ್ಪಣಿ

### ಕವಿ ಮತ್ತು ಕೃತಿ :

ಈ ಪ್ರಬಂಧವನ್ನು ದಿ|| ಶ್ರೀ ತೀ. ನಂ. ಶ್ರೀಕಂಠಯ್ಯನವರ 'ನಂಟರು' ಎಂಬ ಸಂಕಲನದಿಂದ ತೆಗೆದುಕೊಳ್ಳಲಾಗಿದೆ.

'ತೀನಂಶ್ರೀ' ಎಂಬ ಸಂಕ್ಷಿಪ್ತನಾಮದಿಂದ ಸುಪರಿಚಿತರಾಗಿರುವ ಶ್ರೀ ತೀ. ನಂ. ಶ್ರೀಕಂಠಯ್ಯನವರು ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯ ತಾಲ್ಲೋಕಿನ ತೀರ್ಥಪುರದವರು. ಇವರು ೧೯೦೬ರಲ್ಲಿ ಜನಿಸಿದರು. ೧೯೬೬ರಲ್ಲಿ ನಿಧನರಾದರು. ತೀನಂಶ್ರೀ ಅವರು ಮೊದಲು ಕೆಲವುಕಾಲ ಅಮಲ್ದಾರ ಹುದ್ದೆಯಲ್ಲಿದ್ದು, ನಂತರ ಅದನ್ನು ಬಿಟ್ಟು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾದರು. ಆಮೇಲೆ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿದ್ದರು. ಈ ಮಧ್ಯೆ ಅವರು ಕರ್ನಾಟಕ ವಿಶ್ವವಿದ್ಯಾನಿಲಯ ಸ್ಥಾಪನೆಯಾದಾಗ ಅಲ್ಲಿನ ಕನ್ನಡ ಶಾಖೆಯ ಪ್ರಥಮ ಪ್ರಾಧ್ಯಾಪಕರಾಗಿ ಕೆಲಸ ಮಾಡಿ ಬಂದರು. ಭಾಷಾಶಾಸ್ತ್ರದಲ್ಲಿ ಹೆಚ್ಚಿನ ಶಿಕ್ಷಣಕ್ಕಾಗಿ ರಾಕ್‌ಫೆಲರ್ ವೇತನದ ಆಶ್ರಯದಲ್ಲಿ ಅಮೆರಿಕೆಗೂ ಹೋಗಿ ಬಂದರು.

ತೀನಂಶ್ರೀ ಅವರಿಗೆ ಕಾವ್ಯಮೀಮಾಂಸೆ ಮತ್ತು ಭಾಷಾಶಾಸ್ತ್ರಗಳು ಮೆಚ್ಚಿನ ವಿಷಯಗಳು. ಜೊತೆಗೆ ಅವರು ಕವಿಗಳೂ ಆಗಿದ್ದರು. ಕವಿತೆ, ಪ್ರಬಂಧ, ಕಾವ್ಯಮೀಮಾಂಸೆ, ವಿಮರ್ಶೆ,

ಭಾಷಾವಿಜ್ಞಾನ, ವ್ಯಾಕರಣ, ಗ್ರಂಥಸಂಪಾದನೆ—ಇವು ಅವರ ಕಾರ್ಯಕ್ಷೇತ್ರಗಳಾಗಿದ್ದ ಒಲುಮೆ, ಕಾವ್ಯಸಮೀಕ್ಷೆ, ಸಮಾಲೋಕನ, ಭಾರತೀಯ ಕಾವ್ಯಮೀಮಾಂಸೆ, ಕನ್ನಡ ಮಧ್ಯ ವ್ಯಾಕರಣ, ನಂಟರು, ರಾಕ್ಷಸನ ಮುದ್ರಿಕೆ, ಪಂಪ, ಗದಾಯುದ್ಧ ಸಂಗ್ರಹ, ನಂಬಿಯಣ್ಣ ರಗಳೆ, ಹೆಣ್ಣುಮಕ್ಕಳ ಪದಗಳು ಇವು ಅವರ ಗ್ರಂಥಗಳು. ಅವರ ನಿಧನದ ನಂತ 'ಬಿಡಿಮುತ್ತು' ಮತ್ತು 'ಕಾವ್ಯಾನುಭವ' ಎಂಬ ಕೃತಿಗಳೆರಡು ಪ್ರಕಟವಾಗಿವೆ.

ಪ್ರಕೃತ ಪ್ರಬಂಧದಲ್ಲಿ ಲೇಖಕರು ನೆಗಡಿಯಿಂದಾದ ಅನುಭವವನ್ನು ವಿವರಿಸಿದ್ದಾರೆ. ನೆಗ ಯಾರಿಗೂ ತಪ್ಪಿದ್ದಲ್ಲ. ಎಲ್ಲರ ಅನುಭವವೇ ಇಲ್ಲಿನ ವಸ್ತುವಾಗಿದೆ. ನೆಗಡಿಗೂ, ನಮ್ಗ ಅಂಟಿದ ನಂಟು. ಆಗಾಗ್ಗೆ ಭೇಟಿ ಕೊಟ್ಟು ಹೋಗುವ ಗೆಳೆತನ ಅದರದು. ನೆಗ ಬಂದಿತೆಂದರೆ ನಾವು ಒಂದು ರೀತಿಯ ಕಸಿಕರದ ವಸ್ತುವಾಗುತ್ತೇವೆ. ನಮಗೆ ಬೇಕಾದವ ನಮ್ಮ ಬಗ್ಗೆ ಔದಾಸೀನ್ಯ ತಾಳುತ್ತಾರೆ; ಅಸಹ್ಯವಾಗಿ ನೋಡುತ್ತಾರೆ. ಆದ್ದರಿಂದ ನಾಲ್ಕ ಜನರ ನಡುವೆ ನಿಂತುಕೊಳ್ಳುವುದೂ ಇದರಿಂದ ಸಾಧ್ಯವಿಲ್ಲ. ನೆಗಡಿ ಅಂತಹ ದೊಡ್ಡ ಕಾಯಿಲೆಯೇನೂ ಅಲ್ಲ. ನಿಜ. ಆದರೆ ಅದು ಕೊಡುವಷ್ಟು ತೊಂದರೆಯನ್ನು ಬೇರೆಯದು ಕೊಡುವುದಿಲ್ಲವೆಂದೇ ಹೇಳಬೇಕು. ಔಷಧಿಯಿಂದಂತೂ ಇದು ಜಗ್ಗುವುದಿಲ್ಲ. ಇದು ಬಂದ ಕಾರುಬಾರು ನಡೆಸಿ ತಾನಾಗಿಯೇ ಹೋಗಬೇಕು. ಇಂಥ ಪ್ರತಿಯೊಂದು ಅನುಭವವ ಪ್ರತಿಯೊಬ್ಬರಿಗೂ ಆಗಿರುತ್ತದೆ. ಅದನ್ನು ಪ್ರಬಂಧಕಾರರು ತಮ್ಮದೇ ಆದ ಹಾಸ್ಯಭರಿ ಶೈಲಿಯಿಂದ ಗಂಭೀರವಾಗಿ ವರ್ಣಿಸಿದ್ದಾರೆ.

ಕಠಿಣ ಪದಗಳ ಅರ್ಥ :

ಛಾಂಕರಿಸುವ—ಆರ್ಭಟಿಸುವ. ಕ್ಲುಪ್ತ—ಗೊತ್ತಾದ. ನಾಭಿ—ಹೊಕ್ಕುಳು. ಉತ್ಕಂಪಿಸುವ—ನಡುಗುವ. ಅಂಜಿಕೆ—ಭಯ. ವ್ಯಾಧಿ—ರೋಗ. ಪಂತ—ಸ್ಪರ್ಧೆ. ಶ್ಲೇಷ್ಮ—ಕಫ. ಊರ್ಧ್ವ—ಮೇಲಿನ. ಹವಣಿಸು—ಸಿದ್ಧಪಡಿಸು. ಗಗ್ಗರ—ಗೊಗ್ಗರ ಧ್ವನಿ. ಒಡಕು ಧ್ವನಿ. ಅಪಥ್ಯ—ಹಿತವಲ್ಲದ. ಊಡಿಸು—ಉಣ್ಣಿಸು. ಶೀತಶೀಕರ—ತಣ್ಣನೆಯ ತುಂತುರು. ದಾಂಗುಡಿ—(ದಾರದಂತಿರುವ ಎಳೆಯ ಚಿಗುರು) ಮುಂದಕ್ಕೆ ಹಬ್ಬುವುದು. ಉರುಬು—ರಭಸ. ನಿರೋಧಕ—ತಡೆಯುವಂಥದು. ವಾಗ್ವಿಭವ—ಮಾತಿನ ವೈಭವ. ಹೊನಲು—ಪ್ರವಾಹ. ತಾರಕ—ಒಬ್ಬ ರಾಕ್ಷಸ (ಇವನು ದೇವತೆಗಳನ್ನು ಗೆದ್ದು ಅಜೇಯನಾಗಿದ್ದನು. ಇವನ ಸಂಹಾರ ಷಣ್ಮುಖನಿಂದಲೇ ಆಗಬೇಕಾಗಿತ್ತು. ತಪಸ್ಸಿನಲ್ಲಿದ್ದ ಈಶ್ವರನು ಪಾರ್ವತಿಯ ಭಕ್ತಿಗೆ ಮೆಚ್ಚಿ, ಪ್ರತ್ಯಕ್ಷನಾಗಿ ಆಕೆಯನ್ನು ಸ್ವೀಕರಿಸಿದ ಮೇಲೆ ಷಣ್ಮುಖನು ಜನಿಸಿ ಏಳನೆಯ ದಿನ ತಾರಕನನ್ನು ಸಂಹರಿಸಿದನು). ಶಯ್ಯೆ—ಹಾಸಿಗೆ. ನಿರಾಹಾರವ್ರತ—ಆಹಾರವನ್ನು ತೆಗೆದುಕೊಳ್ಳದೆ ಮಾಡುವ ವ್ರತ. ದುರ್ಭಿಕ್ಷೆ—ಕ್ಷಾಮ. ಲೇಪನ—ಬಳಿದುಕೊಳ್ಳುವುದು ಪ್ರಾಶನ—ಕುಡಿಯುವುದು. ಕವುಚು—ಮುಚ್ಚು. ಹೊದಿಸು. ಅಡರು—ಏರು

ಸ್ತೋಮ—ಸಮೂಹ. ಶ್ರೋತೃ—ಕೇಳುವವ. ಪಲಾಯನ—ಓಡಿಹೋಗುವಿಕೆ. ವಾಗ್ವಾಹಿನಿ—ಮಾತಿನ ಪ್ರವಾಹ. ನಿಬಂಧನೆ—ನಿಯಮ.

ಇವುಗಳ ಸ್ವಾರಸ್ಯವನ್ನು ವಿವರಿಸಿ :

೧. 'ನಾಭಿಯಿಂದ ನೆತ್ತಿಯವರೆಗೆ ಅಂಗಾಂಗಗಳನ್ನು ಅಲ್ಲಾಡಿಸುತ್ತದೆ.'
೨. 'ಮೂಗಿರುವ ತನಕ ನೆಗಡಿ ತಪ್ಪುವ ಹಾಗಿಲ್ಲ'.

ಪ್ರಶ್ನೆಗಳು :

೧ ನೆಗಡಿಯ ಬಗ್ಗೆ ಪ್ರಬಂಧಕಾರರ ಅನುಭವವೇನು ?
೨. ನೆಗಡಿಯಿಂದಾಗುವ ತೊಂದರೆಗಳೇನು ?
೩. ನೆಗಡಿ ಪ್ರಬಂಧದಲ್ಲಿ ಹಾಸ್ಯ ಹೇಗೆ ವ್ಯಕ್ತವಾಗಿದೆ ?
೪. ನೀವು ಯಾವಾಗಲಾದರೂ ನೆಗಡಿಯಿಂದ ನರಳಿದ್ದೀರಾ ? ಹಾಗಿದ್ದರೆ ನಿಮ್ಮ ಅನುಭವವೇನು ?

* * * *

# ಮಾಸ್ಕೋ ನಗರದ ಮ್ಯೂಸಿಯಂ

೨೬—೩—೬೭ —ಹೆಚ್. ವಿ. ಶ್ರೀರಂಗರಾ

ಈ ದಿನ ಭಾನುವಾರ. ಮಾಸ್ಕೋನಗರದ ಮುಖ್ಯ ಮೂರು ಮ್ಯೂಸಿಯಂಗ
ನೋಡಿದೆವು. ಮೊದಲನೆಯದು ಟಾಲ್‌ಸ್ಟಾಯ್ ಮ್ಯೂಸಿಯಂ. ಟಾಲ್‌ಸ್ಟಾಯ್ ನ
ಅತಿ ಸಮೀಪದ ರಷ್ಯನ್ ಸಾಹಿತಿ. ಆದರೆ ಹಿಂದೆ ಬರೆದಿರುವಂತೆ ಅವನೊಬ್ಬ ಉ
ಸಾಹಿತಿ ಮಾತ್ರ ; ಅವನು ಉತ್ತಮೋತ್ತಮರಲ್ಲಿ ಒಬ್ಬನಲ್ಲ. ಪೂಜನೀಯ ವ್ಯಕ್ತಿಯ
ಹೇಳುವಂತೆಯೂ ಇಲ್ಲ. ಪುಷ್ಕಿನ್ ಮತ್ತು ಗಾರ್ಕಿಗಳಿಗಿರುವ ಮಾನ್ಯತೆ ಅವ
ಆದುದರಿಂದಲೋ ಏನೋ ಆತನಿಗೆ ಹೇಳಿಕೊಳ್ಳುವಂತಹ ಯಾವ ಸ್ಮಾರಕವೂ ಇಲ್ಲ. ಅ
ವಾಸಿಸುತ್ತಿದ್ದ ಸಣ್ಣ ಓಣಿಗೆ ಅವನ ಹೆಸರನ್ನು ಕೊಟ್ಟಿದ್ದಾರೆ. ಅವನು ವಾಸಿಸುತ್ತಿದ್ದ 
ಈಗ ಅವನ ಮ್ಯೂಸಿಯಂ ಆಗಿದೆ. ನಾನು ನನ್ನ ಮಿತ್ರರು ಅಲ್ಲಿಗೆ ಹೋಗಬೇಕೆಂದು ಎ
ಮೂರುಬಾರಿ ಹೇಳಿದ ಮೇಲೆ ನಮ್ಮ ಕಾತರವನ್ನು ನೋಡಿ ರಷ್ಯನ್ ಮಿತ್ರರೊಬ್ಬರು 
ಕರೆದುಕೊಂಡು ಹೋದರು. ನನಗಂತೂ ಆ ಮನೆಯನ್ನು ನೋಡಿ ಪವಿತ್ರ ಸ್ಥಳವೊ
ನೆನಪು ಬಂತು. ಎಲ್ಲಾ ಅಭಿಮಾನವನ್ನು ಬಿಟ್ಟ ಒಬ್ಬ ಮಹಾಸಾಹಿತಿ ಹೇಗೆ ಜೀವಿಸಿದ. 
ಅಭಿರುಚಿಗಳೇನು. ಜನಪ್ರಿಯವಾದ ವಸ್ತುಗಳೇನು. ಅವನು ಯಾವುದನ್ನು ನೋಡಿ ಆನಂದ
ಇವೆಲ್ಲದರ ಒಂದು ಇಣುಕುನೋಟ ನೋಡಿದೆ. ಆತ ಒಂದು ಹೆಸರಾಂತ ಮನೆತನಕ್ಕೆ 
ಅತಿ ಶ್ರೀಮಂತ. ಆದರೂ ಈಗಿನ ನಮ್ಮ ಸಾಧಾರಣ ಮಧ್ಯಮವರ್ಗದವರು ಜೀವಿಸು
ಜೀವಿಸಿದ್ದ. ಶ್ರೀಮಂತಿಕೆ ಇಲ್ಲವೇ ಇಲ್ಲವೆಂದು ಹೇಳಲಾರೆ. ಆದರೆ, ಅಂತಸ್ತಿಗೆ ಮ
ವರಮಾನಕ್ಕೆ ತಕ್ಕಂತೆ ಇರಬಹುದಾದ ವೈಭವ ಆ ಮನೆಯಲ್ಲಿರಲಿಲ್ಲ. ಎಲ್ಲದರಲ್ಲೂ ಸ
ಅವನು ಉಪಯೋಗಿಸಿದ ಲೇಖನಸಾಮಗ್ರಿಗಳು, ಮರದ ಸಾಮಾನುಗಳು, ಹ
ಬಟ್ಟೆ. ಚಿತ್ರಗಳು—ಎಲ್ಲವನ್ನೂ ರಷ್ಯನ್ ಸರ್ಕಾರ ಹಾಗೆಯೇ ಜೋಪಾನವಾಗಿ

ಟಾಲ್‌ಸ್ಟಾಯ್‌ಯ ವಿಚಾರದಲ್ಲಿ ಅವರ ಅಭಿಪ್ರಾಯವೇನೇ ಇರಲಿ, ಅವನ ವ್ಯಕ್ತಿತ್ವಕ್ಕೆ, ಸಾಹಿತ್ಯಕ್ಕೆ ಅಗೌರವವನ್ನು ಉಂಟುಮಾಡಿಲ್ಲ. ಬದಲಾಗಿ ಗೌರವವನ್ನೇ ತೋರಿಸುತ್ತಿದ್ದಾರೆ. ಈ ದೃಷ್ಟಿಯಿಂದ ಅವರು ಅಭಿನಂದನೀಯರು.

ಟಾಲ್‌ಸ್ಟಾಯ್ ಸರ್ವಸಮಾನತೆಯಲ್ಲಿ ನಂಬುಗೆ ಇಟ್ಟಿದ್ದವನು. ಅವನ ಆಳುಕಾಳು, ಅವನ ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದ ಗೌರ್ನೆಸ್. ಎಲ್ಲರೂ ಅದೇ ಸಂಸಾರದೊಂದಿಗೆ ವಾಸಿಸುತ್ತಿದ್ದರು. ಅವರ ಸಾಮಗ್ರಿಗಳನ್ನು ನೋಡಿದರೆ ಅವರಿಗೂ, ನಮಗೂ ಏನೂ ಭೇದವಿರಲಿಲ್ಲ ಎಂದು ಕಾಣುತ್ತದೆ. ತಾನು ನಂಬಿದಂತೆ ನಡೆದವನು ಆ ಮಹನೀಯನು.

ಮನೆಗೆ ಸೇರಿದಂತೆ ವಿಶಾಲವಾದ ತೋಟವಿದೆ. ಎಷ್ಟೋ ವಸಂತ. ಗ್ರೀಷ್ಮ ಮತ್ತು ಹೇಮಂತಗಳನ್ನು ಈ ತೋಟವನ್ನು ನೋಡಿಯೇ ಕಳೆದಿರಬೇಕು. ನಿಸರ್ಗವು ಅಲ್ಲಿ ಧರಿಸಿದ ವೇಷಗಳನ್ನು ಕಂಡು ಎಷ್ಟು ಸ್ಫೂರ್ತಿಗೊಂಡು ಆನಂದಪಟ್ಟನೋ ! ಅವನ ಕಾದಂಬರಿಗಳಲ್ಲಿ ಬರುವ ವರ್ಣನೆಗಳಿಗೆ ಇದೇ ಸ್ಫೂರ್ತಿಯಾಗಿದ್ದಿರಬಹುದು.

ಅವನ ಜೀವನದಲ್ಲಿ ಸಾಕಷ್ಟು ನೋವಿದ್ದಿತು. ತನ್ನ ಒಬ್ಬನೇ (?) ಮಗನನ್ನು ಅವನು ಏಳನೇ ವಯಸ್ಸಿನಲ್ಲಿದ್ದಾಗ ಕಳೆದುಕೊಂಡ. ಆ ಮಗು ಆಡುತ್ತಿದ್ದ ಆಟಿಕೆಗಳು, ಬರೆಯುತ್ತಿದ್ದ ಲೇಖಣಿ, ಉಪಯೋಗಿಸುತ್ತಿದ್ದ ಪುಸ್ತಕಗಳು, ಹಾಕುತ್ತಿದ್ದ ಬಟ್ಟೆಗಳು ಎಲ್ಲವನ್ನೂ ಒಂದು ಕೊಠಡಿಯಲ್ಲಿ ಇಟ್ಟಿದ್ದಾರೆ. ಅವನ್ನು ನೋಡಿನೋಡಿ ಎಷ್ಟುಬಾರಿ ಆ ಮೃದುಹೃದಯ ಕಣ್ಣೀರು ಸುರಿಸಿತೋ ! ನಮಗೆ ದುಃಖವಾಗುತ್ತದೆ, ಅದನ್ನು ನೋಡುವಾಗ.

ಇಬ್ಬರು ಹೆಣ್ಣುಮಕ್ಕಳು ವಾಸಿಸುತ್ತಿದ್ದ ಎರಡು ಕೊಠಡಿಗಳೂ ಮ್ಯೂಸಿಯಂನಲ್ಲಿವೆ. ಅವರಲ್ಲಿ ಒಬ್ಬಳು ತಂದೆಗೆ ಕಾರ್ಯದರ್ಶಿಯಾಗಿದ್ದು, ಆತನಂತೆ ಶಾಕಾಹಾರಿಯಾಗಿದ್ದಳಂತೆ. ಅವಳನ್ನು ಕಂಡರೆ ತಂದೆಗೆ ಅತಿ ಪ್ರೇಮವಂತೆ. ಉಳಿದ ಮಕ್ಕಳ ವಿಷಯ (ಟಾಲ್‌ಸ್ಟಾಯ್‌ಗೆ ಹತ್ತುಜನ ಮಕ್ಕಳಂತೆ) ಏನೇನೂ ತಿಳಿಯದು.

ಟಾಲ್‌ಸ್ಟಾಯ್ ವಿಷಯವನ್ನು ವಿವರಿಸುವಾಗ ಆತನಲ್ಲಿಗೆ ಗಾರ್ಕಿ ಬರುತ್ತಿದ್ದುದು : ಪೊಲೀಸರು ಆತನ (ಗಾರ್ಕಿಯ) ಮೇಲೆ ಕಣ್ಣಿಟ್ಟಿದ್ದು; ಅಂದಿನ ಕಲೆಗಾರರು, ಸಂಗೀತಗಾರರು ಮತ್ತು ಸಾಹಿತಿಗಳಿಗೆ ಟಾಲ್‌ಸ್ಟಾಯ್‌ಯ ಮನೆ ಕೇಂದ್ರವಾಗಿದ್ದುದು ಮುಂತಾದುವುಗಳನ್ನು ಹೇಳುತ್ತಾರೆ, ಗೈಡುಗಳು. ಟಾಲ್‌ಸ್ಟಾಯ್‌ಯ ವ್ಯಕ್ತಿತ್ವ ಹಾಗೂ ಕೃತಿಗಳಿಗಿಂತ ಈ ಸಂಪರ್ಕಕ್ಕೆ ಹೆಚ್ಚಿನ ಮಹತ್ವ ಕೊಟ್ಟಂತಿದೆ, ಈ ಗೈಡುಗಳ ವಿವರಣೆ.

ಮ್ಯೂಸಿಯಂನಿಂದ ಹಿಂದಿರುಗಿದ ಮೇಲೆ ನಮ್ಮ ನಮ್ಮಲ್ಲಿ ಚರ್ಚೆ ನಡೆಯಿತು. ಹರುಕು ಮುರುಕಾಗಿ ಇಂಗ್ಲಿಷ್ ಮಾತಾಡಬಲ್ಲ ರಷ್ಯನ್ ಆಗಂತುಕರೊಬ್ಬರು ನಮ್ಮಲ್ಲಿ ಸೇರಿಕೊಂಡರು. ಅವರಿಗೆ ಇಂಗ್ಲಿಷ್ ಮಾತಾಡಲು ತುಸು ಕಷ್ಟವಾಗುತ್ತಿತ್ತಾದರೂ ಮಾತನಾಡಿದ್ದನ್ನು

# ಮಾಸ್ಕೋ ನಗರದ ಮ್ಯೂಸಿಯಂ

೨೬–೩–೬೭ —ಹೆಚ್. ವಿ. ಶ್ರೀರಂಗರಾಜ

ಈ ದಿನ ಭಾನುವಾರ. ಮಾಸ್ಕೋನಗರದ ಮುಖ್ಯ ಮೂರು ಮ್ಯೂಸಿಯಂಗಳ ನೋಡಿದೆವು. ಮೊದಲನೆಯದು ಟಾಲ್‌ಸ್ಟಾಯ್ ಮ್ಯೂಸಿಯಂ. ಟಾಲ್‌ಸ್ಟಾಯ್ ನ ಅತಿ ಸಮೀಪದ ರಷ್ಯನ್ ಸಾಹಿತಿ. ಆದರೆ ಹಿಂದೆ ಬರೆದಿರುವಂತೆ ಅವನೊಬ್ಬ ಉತ್ತ ಸಾಹಿತಿ ಮಾತ್ರ ; ಅವನು ಉತ್ತಮೋತ್ತಮರಲ್ಲಿ ಒಬ್ಬನಲ್ಲ. ಪೂಜನೀಯ ವ್ಯಕ್ತಿಯ ಹೇಳುವಂತೆಯೂ ಇಲ್ಲ. ಪುಷ್ಕಿನ್ ಮತ್ತು ಗಾರ್ಕಿಗಳಿಗಿರುವ ಮಾನ್ಯತೆ ಅವನಿ ಆದುದರಿಂದಲೋ ಏನೋ ಆತನಿಗೆ ಹೇಳಿಕೊಳ್ಳುವಂತಹ ಯಾವ ಸ್ಮಾರಕವೂ ಇಲ್ಲ. ಅ ವಾಸಿಸುತ್ತಿದ್ದ ಸಣ್ಣ ಓಣಿಗೆ ಅವನ ಹೆಸರನ್ನು ಕೊಟ್ಟಿದ್ದಾರೆ. ಅವನು ವಾಸಿಸುತ್ತಿದ್ದ ಈಗ ಅವನ ಮ್ಯೂಸಿಯಂ ಆಗಿದೆ. ನಾನು ನನ್ನ ಮಿತ್ರರು ಅಲ್ಲಿಗೆ ಹೋಗಬೇಕೆಂದು ಎ ಮೂರುಬಾರಿ ಹೇಳಿದ ಮೇಲೆ ನಮ್ಮ ಕಾತರವನ್ನು ನೋಡಿ ರಷ್ಯನ್ ಮಿತ್ರರೊಬ್ಬರು ಕರೆದುಕೊಂಡು ಹೋದರು. ನನಗಂತೂ ಆ ಮನೆಯನ್ನು ನೋಡಿ ಪವಿತ್ರ ಸ್ಥಳವೊ ನೆನಪು ಬಂತು. ಎಲ್ಲಾ ಅಭಿಮಾನವನ್ನು ಬಿಟ್ಟ ಒಬ್ಬ ಮಹಾಸಾಹಿತಿ ಹೇಗೆ ಜೀವಿಸಿದ. ಅಭಿರುಚಿಗಳೇನು. ಜನಪ್ರಿಯವಾದ ವಸ್ತುಗಳೇನು. ಅವನು ಯಾವುದನ್ನು ನೋಡಿ ಆನಂದ ಇವೆಲ್ಲದರ ಒಂದು ಇಣುಕುನೋಟ ನೋಡಿದೆ. ಆತ ಒಂದು ಹೆಸರಾಂತ ಮನೆತನಕ್ಕೆ ಅತಿ ಶ್ರೀಮಂತ. ಆದರೂ ಈಗಿನ ನಮ್ಮ ಸಾಧಾರಣ ಮಧ್ಯಮವರ್ಗದವರು ಜೀವಿಸು ಜೀವಿಸಿದ್ದ. ಶ್ರೀಮಂತಿಕೆ ಇಲ್ಲವೇ ಇಲ್ಲವೆಂದು ಹೇಳಲಾರೆ. ಆದರೆ, ಅಂತಸ್ತಿಗೆ ಮ ವರಮಾನಕ್ಕೆ ತಕ್ಕಂತೆ ಇರಬಹುದಾದ ವೈಭವ ಆ ಮನೆಯಲ್ಲಿರಲಿಲ್ಲ. ಎಲ್ಲದರಲ್ಲೂ ಸರ ಅವನು ಉಪಯೋಗಿಸಿದ ಲೇಖನಸಾಮಗ್ರಿಗಳು, ಮರದ ಸಾಮಾನುಗಳು, ಹಾ ಬಟ್ಟೆ, ಚಿತ್ರಗಳು—ಎಲ್ಲವನ್ನೂ ರಷ್ಯನ್ ಸರ್ಕಾರ ಹಾಗೆಯೇ ಜೋಪಾನವಾಗಿ

ಟಾಲ್‌ಸ್ಟಾಯ್‌ಯ ವಿಚಾರದಲ್ಲಿ ಅವರ ಅಭಿಪ್ರಾಯವೇನೇ ಇರಲಿ, ಅವನ ವ್ಯಕ್ತಿತ್ವಕ್ಕೆ, ಸಾಹಿತ್ಯಕ್ಕೆ ಅಗೌರವವನ್ನು ಉಂಟುಮಾಡಿಲ್ಲ. ಬದಲಾಗಿ ಗೌರವವನ್ನೇ ತೋರಿಸುತ್ತಿದ್ದಾರೆ. ಈ ದೃಷ್ಟಿಯಿಂದ ಅವರು ಅಭಿನಂದನೀಯರು.

ಟಾಲ್‌ಸ್ಟಾಯ್ ಸರ್ವಸಮಾನತೆಯಲ್ಲಿ ನಂಬುಗೆ ಇಟ್ಟಿದ್ದವನು. ಅವನ ಆಳುಕಾಳು, ಅವನ ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದ ಗೌರ್ನೆಸ್. ಎಲ್ಲರೂ ಅದೇ ಸಂಸಾರದೊಂದಿಗೆ ವಾಸಿಸುತ್ತಿದ್ದರು. ಅವರ ಸಾಮಗ್ರಿಗಳನ್ನು ನೋಡಿದರೆ ಅವರಿಗೂ, ನಮಗೂ ಏನೂ ಭೇದವಿರಲಿಲ್ಲ ಎಂದು ಕಾಣುತ್ತದೆ. ತಾನು ನಂಬಿದಂತೆ ನಡೆದವನು ಆ ಮಹನೀಯನು.

ಮನೆಗೆ ಸೇರಿದಂತೆ ವಿಶಾಲವಾದ ತೋಟವಿದೆ. ಎಷ್ಟೋ ವಸಂತ, ಗ್ರೀಷ್ಮ ಮತ್ತು ಹೇಮಂತಗಳನ್ನು ಈ ತೋಟವನ್ನು ನೋಡಿಯೇ ಕಳೆದಿರಬೇಕು. ನಿಸರ್ಗವು ಅಲ್ಲಿ ಧರಿಸಿದ ವೇಷಗಳನ್ನು ಕಂಡು ಎಷ್ಟು ಸ್ಫೂರ್ತಿಗೊಂಡು ಆನಂದಪಟ್ಟನೋ! ಅವನ ಕಾದಂಬರಿಗಳಲ್ಲಿ ಬರುವ ವರ್ಣನೆಗಳಿಗೆ ಇದೇ ಸ್ಫೂರ್ತಿಯಾಗಿದ್ದಿರಬಹುದು.

ಅವನ ಜೀವನದಲ್ಲಿ ಸಾಕಷ್ಟು ನೋವಿದ್ದಿತು. ತನ್ನ ಒಬ್ಬನೇ (?) ಮಗನನ್ನು ಅವನು ಏಳನೇ ವಯಸ್ಸಿನಲ್ಲಿದ್ದಾಗ ಕಳೆದುಕೊಂಡ. ಆ ಮಗು ಆಡುತ್ತಿದ್ದ ಆಟಿಕೆಗಳು, ಬರೆಯುತ್ತಿದ್ದ ಲೇಖಣಿ, ಉಪಯೋಗಿಸುತ್ತಿದ್ದ ಪುಸ್ತಕಗಳು, ಹಾಕುತ್ತಿದ್ದ ಬಟ್ಟೆಗಳು ಎಲ್ಲವನ್ನೂ ಒಂದು ಕೊಠಡಿಯಲ್ಲಿ ಇಟ್ಟಿದ್ದಾರೆ. ಅವನ್ನು ನೋಡಿನೋಡಿ ಎಷ್ಟುಬಾರಿ ಆ ಮೃದುಹೃದಯ ಕಣ್ಣೀರು ಸುರಿಸಿತೋ ! ನಮಗೆ ದುಃಖವಾಗುತ್ತದೆ, ಅದನ್ನು ನೋಡುವಾಗ.

ಇಬ್ಬರು ಹೆಣ್ಣುಮಕ್ಕಳು ವಾಸಿಸುತ್ತಿದ್ದ ಎರಡು ಕೊಠಡಿಗಳೂ ಮ್ಯೂಸಿಯಂನಲ್ಲಿವೆ. ಅವರಲ್ಲಿ ಒಬ್ಬಳು ತಂದೆಗೆ ಕಾರ್ಯದರ್ಶಿಯಾಗಿದ್ದು, ಆತನಂತೆ ಶಾಕಾಹಾರಿಯಾಗಿದ್ದಳಂತೆ. ಅವಳನ್ನು ಕಂಡರೆ ತಂದೆಗೆ ಅತಿ ಪ್ರೇಮವಂತೆ. ಉಳಿದ ಮಕ್ಕಳ ವಿಷಯ (ಟಾಲ್‌ಸ್ಟಾಯ್‌ಗೆ ಹತ್ತುಜನ ಮಕ್ಕಳಂತೆ) ಏನೇನೂ ತಿಳಿಯದು.

ಟಾಲ್‌ಸ್ಟಾಯ್ ವಿಷಯವನ್ನು ವಿವರಿಸುವಾಗ ಆತನಲ್ಲಿಗೆ ಗಾರ್ಕಿ ಬರುತ್ತಿದ್ದುದು: ಪೋಲೀಸರು ಆತನ (ಗಾರ್ಕಿಯ) ಮೇಲೆ ಕಣ್ಣಿಟ್ಟಿದ್ದು; ಅಂದಿನ ಕಲೆಗಾರರು, ಸಂಗೀತಗಾರರು ಮತ್ತು ಸಾಹಿತಿಗಳಿಗೆ ಟಾಲ್‌ಸ್ಟಾಯ್‌ಯ ಮನೆ ಕೇಂದ್ರವಾಗಿದ್ದುದು ಮುಂತಾದುವುಗಳನ್ನು ಹೇಳುತ್ತಾರೆ, ಗೈಡುಗಳು. ಟಾಲ್‌ಸ್ಟಾಯ್‌ಯ ವ್ಯಕ್ತಿತ್ವ ಹಾಗೂ ಕೃತಿಗಳಿಗಿಂತ ಈ ಸಂಪರ್ಕಕ್ಕೆ ಹೆಚ್ಚಿನ ಮಹತ್ವ ಕೊಟ್ಟಂತಿದೆ, ಈ ಗೈಡುಗಳ ವಿವರಣೆ.

ಮ್ಯೂಸಿಯಂನಿಂದ ಹಿಂದಿರುಗಿದ ಮೇಲೆ ನಮ್ಮ ನಮ್ಮಲ್ಲಿ ಚರ್ಚೆ ನಡೆಯಿತು. ಹರುಕು ಮುರುಕಾಗಿ ಇಂಗ್ಲಿಷ್ ಮಾತಾಡಬಲ್ಲ ರಷ್ಯನ್ ಆಗಂತುಕರೊಬ್ಬರು ನಮ್ಮಲ್ಲಿ ಸೇರಿಕೊಂಡರು. ಅವರಿಗೆ ಇಂಗ್ಲಿಷ್ ಮಾತಾಡಲು ತುಸು ಕಷ್ಟವಾಗುತ್ತಿತ್ತಾದರೂ ಮಾತನಾಡಿದ್ದನ್ನು

ಸುಲಭವಾಗಿ ಅರ್ಥಮಾಡಿಕೊಳ್ಳುತ್ತಿದ್ದರು. ಅವರ ಮಾತಿನ ಧಾಟಿಯನ್ನು ನೋಡಿ; 'ಟಾಲ್‌ಸ್ಟಾಯ್‌ಯಂತಹ ಸಾಧಾರಣ ಸಾಹಿತಿಯಲ್ಲಿ ನಿಮಗೇಕೆ ಅಷ್ಟು ಗೌರವ? ಅವನ ಉತ್ಕೃಷ್ಟ ಸಾಹಿತಿಗಳು ನಮ್ಮಲ್ಲಿದ್ದರು; ಇದ್ದಾರೆ. ಅವರ ಕೃತಿಗಳನ್ನು ಓದಿ; ಆಗ ಅವರಲ್ಲಿ ಟಾಲ್‌ಸ್ಟಾಯ್‌ಗಿಂತ ಹೆಚ್ಚು ಗೌರವವನ್ನು ತೋರಿಸುತ್ತೀರಿ' ಎಂದು ಹೇಳುವಂತಿ

ಅವರ ಮಾತುಗಳನ್ನು ಕೇಳಿ ನಾನು ಉತ್ತರ ಕೊಟ್ಟೆ — 'ಗಾಂಧಿಯವರಿಗೆ ಸ್ಫೂ ಕೊಟ್ಟವರಲ್ಲಿ ಟಾಲ್‌ಸ್ಟಾಯ್ ಒಬ್ಬನಾದುದರಿಂದ ನಮಗೆ ಬೇರೆ ರಷ್ಯನ್ ಸಾಹಿತಿಗಳಿ ಆತನೇ ಸುಪರಿಚಿತನಾಗಿದ್ದಾನೆ. ಆತನ ಸರಳತೆ, ಮಾನವಪ್ರೇಮಗಳು ನಮಗೆ ಹಿಡಿ ನಮ್ಮ ದೇಶದ ಹಿಂದಣ ಋಷಿಗಳಂತೆ ವೈರಾಗ್ಯವನ್ನು ಹೊಂದಿದ್ದ ಆತನು ನಮ್ಮ ಹೃದ ಸಮೀಪನಾಗಿದ್ದಾನೆ. ಆತನ ಮನೋಧರ್ಮ ನಮಗೆ ಹಿಡಿಸಿದೆ. ಆದುದರಿಂದ ನಮಗೆ ಮೆಚ್ಚು

ನಮ್ಮ ರಷ್ಯನ್ ಮಿತ್ರರಿಗೆ ನನ್ನ ವಿವರಣೆ ಪ್ರಾಯಶಃ ತೃಪ್ತಿಕರವಾಗಿರಲಿಕ್ಕಿಲ್ಲ. ಶಾಕಾಹಾರಿತ್ವವೇ ನಮ್ಮ, ಅಂದರೆ ಭಾರತೀಯರ, ಮೆಚ್ಚುಗೆಗೆ ಕಾರಣ ಎಂಬ ಸಿದ್ಧಾಂತಕ್ಕೆ ಅವರು ಎಂದೋ ಬಂದಿದ್ದಂತೆ ತೋರಿತು.

ಟಾಲ್‌ಸ್ಟಾಯ್‌ಮ್ಯೂಸಿಯಂ ಆದ ಮೇಲೆ ಗಾರ್ಕಿಮ್ಯೂಸಿಯಂಗೆ ಹೋದೆವು. ಸೋವಿಯ ಸರಕಾರದ ಉತ್ಕೃಷ್ಟ ಗೌರವಕ್ಕೆ ಪಾತ್ರನಾದವನು ಅವನು. ಗಾರ್ಕಿಯ ಮ್ಯೂಸಿ ಆಗಿರುವುದು ಆತನು ಕೊನೆಯ ದಿನಗಳಲ್ಲಿ ವಾಸಿಸುತ್ತಿದ್ದ ಮನೆ. ಅದನ್ನು ಹತ್ತೊಂಬತ್ತ ಶತಮಾನದಲ್ಲಿ ಶ್ರೀಮಂತನೊಬ್ಬನು ಕಟ್ಟಿಸಿದನಂತೆ. ಕ್ರಾಂತಿಯ ಅಧ್ವರ್ಯುಗಳ ಮಿತ್ರನಾಗಿ, ಕ್ರಾಂತಿಕಾರಕ ಚಟುವಟಿಕೆಗಳಲ್ಲಿ ಭಾಗವಹಿಸಿ, ಜೀವನದಲ್ಲಿ ಅನೇಕ ಬವಣೆಗ ಅನುಭವಿಸಿದ ಗಾರ್ಕಿಯನ್ನು ಸೋವಿಯತ್ ಸರಕಾರ ಚೆನ್ನಾಗಿ ನೋಡಿಕೊಂಡಿ ಆದುದರಿಂದ ಆತನ ಕೊನೆಯ ದಿನಗಳು ಸಾಕಷ್ಟು ಸುಖಮಯವಾಗಿದ್ದುವು. ಅವನ ಲೇ ವ್ಯವಸಾಯಕ್ಕೆ ಬೇಕಾದ ಎಲ್ಲಾ ಸೌಲಭ್ಯಗಳನ್ನೂ ಒದಗಿಸಿತು. ಆ ಮನೆಯಲ್ಲಿರುವ ಚಿತ್ರಗ ಮರದ ಸಾಮಾನುಗಳು, ಅಲಂಕಾರ ವಸ್ತುಗಳು—ಇವುಗಳನ್ನು ನೋಡಿದಾಗ ಸೋವಿಯ ಸರಕಾರ ತಮ್ಮ ಮೆಚ್ಚಿನ ಸಾಹಿತಿಯನ್ನು ಬಹು ಆದರದಿಂದ ನೋಡಿಕೊಂಡಿತು ಎಂಬು ತಿಳಿಯುತ್ತದೆ. ಈ ಸಮಾಜದಲ್ಲಿ ಸಾಹಿತಿಗಳಿಗೆ, ಕಲೆಗಾರರಿಗೆ, ವಿಜ್ಞಾನಿಗಳಿಗೆ ಇರು ಸ್ಥಾನಮಾನ ಮತ್ತಾರಿಗೂ ಇಲ್ಲ. ಅವರಿಗೆ ಸಿಕ್ಕುವ ಆರ್ಥಿಕ ಪ್ರತಿಫಲವೂ ಚೆನ್ನಾಗಿ ಇರುತ್ತದೆ. ಗಾರ್ಕಿಗೆ ದೊರೆತ ಅನುಕೂಲ ಮತ್ತು ಮಾನ್ಯತೆಗಳು ಈ ಸಾಧಾರಣ ನಿಯಮ ಹೊರತಾಗಿಲ್ಲ ಎನಿಸುತ್ತದೆ.

ಗಾರ್ಕಿಯ ಮನೆಯನ್ನು ಹುಡುಕಲು ಮತ್ತು ಅದನ್ನು ಅಂದಗೊಳಿಸಲು ಸೋವಿಯ ಸರಕಾರ ಗಾರ್ಕಿಯ ಸೆಕ್ರೆಟರಿಯನ್ನು ನೇಮಿಸಿತಂತೆ. ಆ ಸೆಕ್ರೆಟರಿ ಹುಡುಕಿ ಕೊಟ್ಟ ಮ ಮತ್ತು ಮಾಡಿದ ವ್ಯವಸ್ಥೆ ಗಾರ್ಕಿಗೇ ಗಾಬರಿಯನ್ನು ಉಂಟುಮಾಡಿತಂತೆ. ಆ ಶ್ರೀಮಂ

ಆತನಿಗೆ ಹಿಡಿಸದಿದ್ದಿರಬಹುದು. ಏನೇ ಇರಲಿ. ಗಾರ್ಕಿಯ ಕೊನೆಯ ದಿನಗಳು ಸುಖಮಯ ವಾಗಿರುವಂತೆ ಸೋವಿಯತ್ ಸರಕಾರ ನೋಡಿಕೊಂಡಿತು. ಮಾಸ್ಕೋನಗರದ ಮುಖ್ಯ ಬೀದಿಗಳಲ್ಲಿ ಒಂದಕ್ಕೆ ಆತನ ಹೆಸರನ್ನೇ ಇಟ್ಟಿದ್ದಾರೆ.

ಗಾರ್ಕಿ, ಟಾಲ್‌ಸ್ಟಾಯ್—ಇವರಲ್ಲಿ ಯಾರು ಉತ್ತಮ ? ಈ ಪ್ರಶ್ನೆಗೆ ಉತ್ತರ ಹೇಳುವುದು ಬಹು ಕಷ್ಟ : ಇಬ್ಬರೂ ಉತ್ತಮ ಸಾಹಿತಿಗಳು. ಕೆಲವರಿಗೆ ಗಾರ್ಕಿಯ ಕೃತಿಗಳು ಮೆಚ್ಚುಗೆಯಾಗಿದ್ದರೆ. ಮತ್ತೆ ಕೆಲವರಿಗೆ ಟಾಲ್‌ಸ್ಟಾಯ್‌ಯ ಕೃತಿಗಳು ಮೆಚ್ಚುಗೆ ಯಾಗಿವೆ. ಉತ್ತಮ ಸಾಹಿತಿಗಳನ್ನು ಗೌರವಿಸಬೇಕಾದುದು ಸರಕಾರದ ಮತ್ತು ಸಮಾಜದ ಕರ್ತವ್ಯ. ಆದರೆ ಹಾಗೆ ಮಾಡುವಾಗ ಕೇವಲ ಕೃತಿಗಳನ್ನೇ ಗಮನದಲ್ಲಿಟ್ಟುಕೊಳ್ಳಬೇಕೇ ಹೊರತು ಅವರ ರಾಜಕೀಯ ಅಭಿಪ್ರಾಯಗಳನ್ನಲ್ಲ. ಗಾರ್ಕಿಯನ್ನು ಗೌರವಿಸುತ್ತಿರುವ ಸೋವಿಯತ್ ಸರಕಾರ ಎಷ್ಟರ ಮಟ್ಟಿಗೆ ಆತನ ಕೃತಿಗಳಿಗಾಗಿ ಅವನಿಗೆ ಗೌರವ ನೀಡುತ್ತದೆ : ಎಷ್ಟರ ಮಟ್ಟಿಗೆ ಆತ ರಾಜಕೀಯ ಕ್ಷೇತ್ರದಲ್ಲಿ ದುಡಿದಿರುವುದಕ್ಕಾಗಿ ನೀಡುತ್ತದೆ— ಹೇಳುವುದು ಕಷ್ಟ.

ನಾವು ನೋಡಿದ ಮೂರನೆಯ ಮ್ಯೂಸಿಯಂ ರಷ್ಯದ ಕ್ರಾಂತಿಗೆ ಸಂಬಂಧಪಟ್ಟದ್ದು: ೧೯೦೦ ರಿಂದ ಇಲ್ಲಿಯವರೆವಿಗೆ ರಷ್ಯದೇಶದ ಚರಿತ್ರೆಯ ವಿವರಣೆ ಇಲ್ಲಿದೆ. ಈ ಶತಮಾನದ ಆದಿಭಾಗದಿಂದ ೧೯೧೭ ರ ವರೆಗೆ ಆಗಿಹೋದ ಅನೇಕ ಐತಿಹಾಸಿಕ ಘಟನೆಗಳನ್ನು ತಿಳಿಸುವ ಚಿತ್ರಪಟಗಳಿವೆ. ಒಂದು ಸತ್ವಪೂರಿತವಾದ ಜನಾಂಗ ತನಗಾದ ಅನ್ಯಾಯವನ್ನು ಸಹಿಸದೆ. ಕೊರಳ ಮೇಲೆ ಹೇರಿದ್ದ ಶೋಷಣೆಯ ನೊಗವನ್ನು ಕಿತ್ತೊಗೆದ ಹಿರಿಯ ಕತೆ ಇವರಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ತಮಗೆ ನ್ಯಾಯವನ್ನು ದೊರಕಿಸಿಕೊಳ್ಳಲು ಅವರು ಸುರಿಸಿದ ರಕ್ತ ನಮ್ಮ ಹೃದಯವನ್ನು ಹಿಂಡುತ್ತದೆ. ಅವರ ತ್ಯಾಗ. ಧೈರ್ಯ. ಜಾಣಾಕ್ಷತನಗಳು ನಮ್ಮ ಹೃದಯವನ್ನು ಸೂರೆಗೊಳ್ಳುತ್ತವೆ. ಅವರ ವೀರ ಲೆನಿನ್ನನ ಭೀಷ್ಮವ್ಯಕ್ತಿತ್ವದ ಪರಿಚಯ ವಾಗುತ್ತದೆ. ಮ್ಯೂಸಿಯಂನ ಅಂಗವಾಗಿ ಎರಡು ವಾಕ್‌ದೃಶ್ಯ ಪ್ರದರ್ಶನಗಳನ್ನೂ ತೋರಿಸು ತ್ತಾರೆ. ಒಂದು ೧೯೦೫ ರಲ್ಲಿ ಮಾಸ್ಕೋ ನಗರದಲ್ಲಿ ನಡೆದ ಕ್ರಾಂತಿಯ ಒಂದು ಘಟನೆಯನ್ನು ನಿರೂಪಿಸುತ್ತದೆ. ಅದನ್ನು ವ್ಯವಸ್ಥೆ ಮಾಡಿರುವ ರೀತಿ ಅದ್ಭುತ. ಅಂದಿನ ಮಾಸ್ಕೋ ನಗರ ದಲ್ಲಿ ನಾವಿದ್ದಂತೆ. ಕ್ರಾಂತಿಯಲ್ಲಿ ನಾವು ಭಾಗವಹಿಸಿದಂತೆ ಭ್ರಮೆಯನ್ನು ಹುಟ್ಟಿಸುತ್ತದೆ : ಮಾಯಾಲೋಕಕ್ಕೆ ವೀಕ್ಷಕರು ಒಯ್ಯಲ್ಪಡುತ್ತಾರೆ. ೧೯೧೭ ರಲ್ಲಿ ಲೆನಿನ್‌ಗ್ರಾಡ್‌ನಲ್ಲಿ (ಅಂದಿನ ಪೆಟ್ರೋಗ್ರಾಡ್) ನಡೆದ ಒಂದು ಘಟನೆಯನ್ನು ಮತ್ತೊಂದು ಪ್ರದರ್ಶನ ತೋರಿಸು ತ್ತದೆ. ಅವರ ನಿರೂಪಣೆಯಂತೂ ಇನ್ನೂ ಅದ್ಭುತ. ಲೆನಿನ್ ವಾಣಿಯ ಧ್ವನಿಮುದ್ರಿಕೆ ಗಳನ್ನು ಹಾಕುತ್ತಾರೆ. ಅದು ಎಂಥ ಸಿಂಹವಾಣಿ ! ಎಂಥವನ ಎದೆಯಲ್ಲೂ ಕೆಚ್ಚನ್ನು ತುಂಬಬಲ್ಲ ಮಹತ್‌ಶಕ್ತಿ ಆ ವಾಣಿಯಲ್ಲಿತ್ತು. ಲೆನಿನ್ ಒಬ್ಬ ಪುರುಷಸಿಂಹ. ಅವನನ್ನು ಪವಾಡಪುರುಷನೆಂದು ಈ ಜನ ನಂಬಿದ್ದರೆ ಆಶ್ಚರ್ಯವಿಲ್ಲ.

ಕ್ರಾಂತಿ, ಕೊಲೆ, ರಕ್ತ, ಸಾವು, ಕಣ್ಣೀರು —ಇವೇ ಮ್ಯೂಸಿಯಂನ ಎಲ್ಲ ಚಿತ್ರಪಟ್ಟ ವಸ್ತು. ಆ ದಿನಗಳಲ್ಲೂ ಇದೇ ನಿತ್ಯಜೀವನದ ಜೀವಾಳವಾಗಿತ್ತು. ಜಗತ್ತಿನ ಕಥ ಪುಸ್ತಕದಲ್ಲಿ ರಷ್ಯನ್‌ಕ್ರಾಂತಿಯ ಪುಟಗಳು ರಕ್ತರಂಜಿತವಾದವುಗಳು. ಆಗ ರಷ್ಯದ ಕ್ರೂರ ವ್ಯವಸ್ಥೆಯನ್ನು ನಿರ್ನಾಮಮಾಡಲು ಪ್ರಾಯಶಃ ಕ್ರಾಂತಿಯ ಅವಶ್ಯಕತೆ ಇತ್ತು ಏನೋ. ಅಂತೂ ಎಲ್ಲಾ ರೀತಿಯ ಹಿಂಸೆಗಳಿಗೂ ಹೇಸಿಕೊಳ್ಳುವ ನನಗೆ ಈ ಘಟನೆಗಳ ನೆನೆದು ನೋವೇ ಆಯಿತು.

ಅನ್ಯಾಯವನ್ನು ಎದುರಿಸಲು ಹಿಂಸೆಯೊಂದೇ ಉಪಾಯವೇ ? ಕ್ರೌರ್ಯದ ಮರ್ದನ ಯಿಂದಲೇ ಆಗಬೇಕೆ ? ಪ್ರೇಮದಿಂದ, ಸಾಮಮಾರ್ಗದಿಂದ ಆಗದೆ ? ಪ್ರಾಯಶಃ ಮಾ ಅಪೂರ್ಣತೆ ಇಲ್ಲಿದೆ.

ಮನಸ್ಸು ಹಿಂಸೆಗಾಗಿ ಹೇಸಿಕೊಂಡರೂ . ಲೆನಿನನ ವ್ಯಕ್ತಿತ್ವದಲ್ಲಿ ನನಗೆ ಗೌರವ ಕಡಿಮೆ ಗಿರಲಿಲ್ಲ. ಅನ್ಯಾಯವನ್ನು ಸಹಿಸದ ಹಿರಿಯ ಮನಸ್ಸು ಅವನದು. ದೀನಜನತೆಗೆ ನ್ಯಾ ದೊರಕಿಸಲು ಅವನು ಪಟ್ಟ ಬವಣೆಗಳೆಷ್ಟು ? ಎದುರಿಸಿದ ಗಂಡಾಂತರಗಳೆಷ್ಟು ? ಧೀರನಿಗೆ ಕ್ರಾಂತಿಯ ಹೊರತು ಮಿಕ್ಕೆಲ್ಲ ಮಾರ್ಗಗಳು ಅತಿ ಸಮರ್ಪಕವಲ್ಲದ, ಸಂದೇಹಾಸ್ಪದವಾದ ಮಾರ್ಗಗಳಾಗಿದ್ದುವೇನೋ ! ಅಂತೂ ಅಂದಿನ ರಷ್ಯಕ್ಕೆ ಬೇಕಾಗಿದ್ದ ಲೆನಿನ್. ಆತ ಜಗತ್ತಿನ ಇತಿಹಾಸದಲ್ಲಿ ಒಂದು ಮೈಲಿಗಲ್ಲನ್ನು ಸ್ಥಾಪಿಸಿದ.

ಮ್ಯೂಸಿಯಂನ ಉಳಿದ ಭಾಗವೆಲ್ಲಾ ಬರೀ ಪ್ರಚಾರಸಾಧನ ಎನಿಸಿತು. ಕ್ರಾಂ ಅನಂತರದ ಸೋವಿಯತ್‌ಸರ್ಕಾರದ ಸಾಧನೆ, ಎರಡನೆಯ ಮಹಾಯುದ್ಧದಲ್ಲಿ ಅದು ಕಷ್ಟ. ಯುದ್ಧಾನಂತರದ ಪುನರ್ನಿರ್ಮಾಣದ ಕಾರ್ಯದಲ್ಲಿ ಜನತೆ ತೋರಿಸಿದ ಉತ್ಸಾಹ ಇವುಗಳ ನಿರೂಪಣೆಯೇ ಈ ಭಾಗ. ಇದರಲ್ಲಿ ವಿಷಯಕ್ಕಿಂತ ನಿರೂಪಿಸುವ ರೀತಿ ಮೆಚ್ಚುಗೆಯಾಯಿತು. ಪ್ರಚಾರಕಾರ್ಯದಲ್ಲಿ ಆಧುನಿಕ ವಿಜ್ಞಾನತಂತ್ರಕ್ಕೆ ಕಲೆಯ ಪೂ ರೀತಿಯನ್ನು ಅಳವಡಿಸಿಕೊಂಡಿದ್ದಾರೆ. ಈ ಜನ. ಒಂದು ಯೋಜನೆ ನಮ್ಮ ಮುಂದೆ ನಡೆಯುತ್ತಿದೆಯೇನೋ ಎಂಬ ಭಾವನೆ ಬರುವಂತೆ ಪ್ರದರ್ಶಿಸಿದ್ದಾರೆ. ಇಲ್ಲಿ ಕಲಿಯುವುದು ಬೇಕಾದಷ್ಟಿದೆ. ನಮ್ಮ ಜನರಿಗೆ ದೇಶಪ್ರೇಮ ಬೆಳೆಯುವಂತೆ ಮಾಡಲು ಪ್ರದರ್ಶನಗಳನ್ನು ಈ ರೀತಿ ಏರ್ಪಾಡು ಮಾಡಿದರೆ ಮಾತ್ರ ಅವು ಯಶಸ್ವಿಯಾದಾವು.

ಮ್ಯೂಸಿಯಂನ್ನು ನೋಡುತ್ತಿದ್ದಾಗ ಎರಡು ಘಟನೆಗಳು ನಡೆದವು. ಯಾವ ಚಿತ್ರವನ್ನು ನಾವು ನೋಡುತ್ತಿದ್ದಾಗ ಯಾರೋ ಬಂದು ನಮ್ಮ ಕಿವಿಯಲ್ಲಿ, 'ಸ್ಟಾಲಿನ್ ಕಾ ಈ ಕೊಠಡಿಯಲ್ಲಿ ಅವನಿಗೆ ಬಂದ ಬಹುಮಾನಗಳನ್ನೂ, ಬಳುವಳಿಗಳನ್ನೂ ಪ್ರದ ಕ್ಕಿಟ್ಟಿದ್ದರು. ಅವುಗಳನ್ನು ತೆಗೆದು ಹಾಕಿ ಈ ವಸ್ತುಗಳನ್ನು ಇಟ್ಟಿದ್ದಾರೆ' ಎಂದು ಉಸುರಿ ಕಡೆ ತಿರುಗಿ ನೋಡದೆ ಹೊರಟುಹೋದರು.

ಮತ್ತೊಮ್ಮೆ ಯಾವುದೋ ವಿಚಾರ ಬಂದು " ಟ್ರಾಟ್‌ಸ್ಕಿಯನ್ನು ದೇಶದಿಂದ ಓಡಿಸಿದರು " ಎಂದೆ. ಪಕ್ಕದಲ್ಲಿದ್ದ ಆಗಂತುಕರೊಬ್ಬರು " ಹುಷ್ " ಎಂದರು. ಅಂತೂ ನಿರಾಳವಾಗಿ ಮಾತಾಡಲು ಈ ದೇಶದಲ್ಲಿ ಅವಕಾಶವಿಲ್ಲ. ಏನೋ ಒಂದು ಹೆದರಿಕೆ ಆವರಿಸಿಕೊಳ್ಳುತ್ತದೆ. ಈ ದೃಷ್ಟಿಯಿಂದ ಇಂಗ್ಲೆಂಡ್ ಎಂಥ ಅದ್ಭುತದೇಶ ಎನಿಸುತ್ತದೆ. ಕಮ್ಯೂನಿಸಂನ ಜನಕನಾದ ಮಾರ್ಕ್ಸ್‌ಗೂ ಆ ದೇಶ ಆಶ್ರಯ ಕೊಟ್ಟಿತು. ಈಗಲೂ ಕಮ್ಯೂನಿಸಂನ ಪ್ರಚಾರಕ್ಕೆ ಆ ದೇಶದಲ್ಲಿ ಎಡೆಯಿದೆ. ಅಲ್ಲಿಯ ಕಮ್ಯೂನಿಸ್ಟ್ ಪಕ್ಷ ಪ್ರಕಟಿಸುತ್ತಿರುವ " ಮಾರ್ನಿಂಗ್ ಸ್ಟಾರ್" ಈ ದೇಶಕ್ಕೆ ಬರುತ್ತಿದೆ.

ಇಂಗ್ಲೆಂಡಿನಲ್ಲಿರುವ ಸ್ವಾತಂತ್ರ್ಯ ನಮಗೂ ಇದೆ. ಆದರೆ ಹೊಣೆಗಾರಿಕೆ ಏನೇನೂ ಗೊತ್ತಿಲ್ಲ; ಪ್ರಾಮಾಣಿಕತೆ ಶೂನ್ಯ. ನಮ್ಮಷ್ಟು ಸ್ವಾತಂತ್ರ್ಯವಿಲ್ಲದಿರುವ ಈ ದೇಶದಲ್ಲಿಯೂ ಜನರು ಹೊಣೆಗಾರಿಕೆಯನ್ನು ಅರಿತಿದ್ದಾರೆ ; ಹೆಚ್ಚು ಪ್ರಾಮಾಣಿಕರಾಗಿದ್ದಾರೆ. ಉಳಿದ ಪಾಶ್ಚಿಮಾತ್ಯ ರಾಷ್ಟ್ರಗಳಂತೆ ಇಲ್ಲಿಯೂ ಬಸ್ಸುಗಳಿಗೆ ಕಂಡಕ್ಟರುಗಳಿಲ್ಲ; ಆದರೆ ಯಾರೂ ಟಿಕೆಟ್ಟಿಲ್ಲದೆ ಪ್ರಯಾಣ ಮಾಡುವುದಿಲ್ಲ, ಎಲ್ಲಾ ಅಂಗಡಿಗಳನ್ನು ಸರ್ಕಾರದವರೇ ನಡೆಸುತ್ತಾರೆ. ಆದರೂ ವ್ಯವಹಾರದಲ್ಲಿ ಸರ್ಕಾರಕ್ಕೆ ನಷ್ಟವಾಗಿಲ್ಲ. ನಮ್ಮ ರೈಲುಗಳಲ್ಲಾದರೋ ಒಂದನೇ ತರಗತಿಯಿಂದ ಮೂರನೆಯ ತರಗತಿಯವರೆಗೆ ಟಿಕೆಟ್ಟಿಲ್ಲದೆ ಪ್ರಯಾಣ ಮಾಡುವ ಜನರು ದೊರಕುತ್ತಾರೆ. ಸಹಕಾರೀ ಸಂಘಗಳು ನಷ್ಟ ಹೊಂದುವುದು ಅತಿ ಸಾಮಾನ್ಯ. ಕಬ್ಬಿಣಕ್ಕೂ ಗೆದ್ದಲು ಹಿಡಿಯ ಬಹುದು ! ಡೆಮಾಕ್ರಸಿಯೇ ಆಗಲಿ, ಕಮ್ಯೂನಿಸಮ್ಮೇ ಆಗಲಿ ಜನರ ಪ್ರಾಮಾಣಿಕತೆ ಇಲ್ಲದೆ ಸಾಗದು. ಅದು ಇಲ್ಲದ ವ್ಯವಸ್ಥೆ ಅವ್ಯವಸ್ಥೆಯೇ ?

ಇಲ್ಲಿಯ ಜನರ ಪ್ರಾಮಾಣಿಕತೆಗೆ ಒಂದು ನಿದರ್ಶನ ಇಂದು ದೊರೆಯಿತು. ಕಿತ್ತಲೆಹಣ್ಣಿನ ಅನುಭವವನ್ನು ಹಿಂದೆಯೇ ಬರೆದಿದ್ದೇನೆ. ಈ ದಿನ ಒಂದು ಕಡೆ ಆರು ಕಿತ್ತಲೆ ಹಣ್ಣುಗಳು ದೊರಕಿದವು. ಹೋಟೆಲಿಗೆ ಹೋದಾಗ ಅದನ್ನು ಮರೆತು ಅಲ್ಲಿಯೇ ಬಿಟ್ಟು ಹಿಂದಿರುಗಿದೆ. ಒಬ್ಬ ಶಾಲಾ ಬಾಲಕ ನನ್ನನ್ನು ಹುಡುಕಿಕೊಂಡು ಬಂದು ಅದನ್ನು ತಲುಪಿಸಿ ಹೋದ. ನಮ್ಮಲ್ಲಿ ಇಂಥ ಎಷ್ಟು ಉದಾಹರಣೆಗಳಿರಬಹುದು ?

## ಟಿಪ್ಪಣಿ

### ಕವಿ ಮತ್ತು ಕೃತಿ :

" ಮಾಸ್ಕೋ ನಗರದ ಮ್ಯೂಸಿಯಂ " ಎಂಬ ಭಾಗವನ್ನು ಶ್ರೀ ಹಾರೋಹಳ್ಳಿ ವೆಂಕಟಪ್ಪ ಶ್ರೀರಂಗರಾಜುರವರ " ಸೋವಿಯೆತ್ ದಿನಚರಿ " ಯಿಂದ ಆಯ್ದುಕೊಳ್ಳಲಾಗಿದೆ. ಸುಪ್ರಸಿದ್ಧ ಶಿಕ್ಷಣವೇತ್ತರಾದ ಶ್ರೀರಂಗರಾಜುರವರು ವಿಶ್ವವಿದ್ಯಾನಿಲಯದ ಪದವೀಧರರಾದ ಮೇಲೆ ಶಿಕ್ಷಣಖಾತೆಯ ಬೇರೆ ಬೇರೆ ಹಂತಗಳಲ್ಲಿ ಸೇವೆಯನ್ನು ಸಲ್ಲಿಸಿ, ಆ ಖಾತೆಯ ಅಡಿಷನಲ್

ಡೈರೆಕ್ಟರಾಗಿದ್ದು, ಈಗ ಬೆಂಗಳೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್‌ರವರಾಗಿದ್ದಾರೆ. ಇವರ ಬರಹ ನಿರಾಭರಣಸುಂದರ, ನಿರ್ದುಷ್ಟ, ಶಕ್ತಿಯುತ. ಇವರ 'ಆಲ್ಬರ್ಟ್ ಐನ್‌ಸ್ಟೈನ್' ಇದಕ್ಕೆ ಒಂದು ಉದಾಹರಣೆ. ಇವರು ಇಂಗ್ಲೀಷ್ ಕನ್ನಡಗಳಲ್ಲದೆ ಪಾಲಿ ಭಾಷೆಯಲ್ಲಿಯೂ ಪ್ರವೀಣರಾಗಿದ್ದು. ಆ ಭಾಷೆಯಿಂದ 'ಧಮ್ಮಪದ'ವನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ೧೯೬೦ರಲ್ಲಿ ಇವರು 'ಯುನೆಸ್ಕೊ' ಸಂಸ್ಥೆಯ ಅಭ್ಯರ್ಥಿಯಾಗಿ ಸೋವಿಯೆತ್ ಒಕ್ಕೂಟದ ಶಿಕ್ಷಣ ಪದ್ಧತಿಯನ್ನು ಅಭ್ಯಾಸಮಾಡುವುದಕ್ಕಾಗಿ ಮಾಸ್ಕೋಗೆ ಹೋದರು. ಆ ಕಾಲದಲ್ಲಿ ಅವರು ಬರೆದಿಟ್ಟುಕೊಂಡ ತಮ್ಮ ದಿನದಿನದ ಅನುಭವಗಳನ್ನು 'ಸೋವಿಯೆತ್ ದಿನಚರಿ' ಎಂಬ ಹೆಸರಿನಿಂದ ಪುಸ್ತಕರೂಪದಲ್ಲಿ ಪ್ರಕಟಿಸಿದ್ದಾರೆ. ಗ್ರಂಥಕಾರರ ಕುತೂಹಲಪೂರ್ಣವಾದ ವ್ಯಾಪಕದೃಷ್ಟಿ, ಬುದ್ಧಿಚಾತುರ್ಯಗಳು ಇಲ್ಲಿ ಎದ್ದು ಕಾಣುತ್ತವೆ.

ಕಠಿಣ ಪದಗಳ ಅರ್ಥ :

ಮಾಸ್ಕೋ—ರಷ್ಯಾದೇಶದ ರಾಜಧಾನಿ. ಮ್ಯೂಸಿಯಂ—ವಸ್ತುಗಳನ್ನು ಸಂಗ್ರಹಿಸಿಡುವ ಸ್ಥಳ. ಉತ್ತಮೋತ್ತಮ—ಉತ್ತಮ + ಉತ್ತಮ (ಗು.ಸಂ.). ಪೂಜನೀಯ—ಪೂಜೆಗೆ ಯೋಗ್ಯ.

ಟಾಲ್‌ಸ್ಟಾಯ್—ಕೌಂಟ್‌ಲಿಯೋ ನಿಕೊಲೇವಿಚ್ ಟಾಲ್‌ಸ್ಟಾಯ್ ೧೮೨೮ ರಲ್ಲಿ ರಷ್ಯಾದ 'ಎಸ್ನಾ ಪೊಲ್ಯಾಯ್ನನ್' ಎಂಬಲ್ಲಿ ಶ್ರೀಮಂತ ಕುಟುಂಬದಲ್ಲಿ ಜನಿಸಿದ. ಇವನೊಬ್ಬ ದೊಡ್ಡ ಸಾಹಿತಿ. "ಕೋಸಾಕ್ಸ್", "ವಾರ್ ಅಂಡ್ ಪೀಸ್", "ಅನ್ನಾ ಕಾರ್ನೀನ" ಇವೇ ಮೊದಲಾದ ಕಾದಂಬರಿಗಳನ್ನೂ "ದಿ ಪವರ್ ಆಫ್ ಡಾರ್ಕ್‌ನೆಸ್" ಎಂಬ ನಾಟಕವನ್ನೂ, ಇನ್ನೂ ಅನೇಕ ಗ್ರಂಥಗಳನ್ನೂ ಬರೆದಿದ್ದಾನೆ. ೧೯೧೦ರಲ್ಲಿ ಮೃತನಾದನು. ಈತನ ಪ್ರಭಾವ ಮಹಾತ್ಮ ಗಾಂಧಿ ಯವರ ಜೀವನದ ಮೇಲೆ ಸಾಕಷ್ಟು ಆಗಿದೆ ಎಂಬುದು ಗಮನಾರ್ಹವಾದ ಸಂಗತಿ.

ಪುಷ್ಕಿನ್—(೧೭೯೯-೧೮೩೭) ರಷ್ಯಾದ ಆದಿಕವಿ ಎಂದು ಹೇಳಬಹುದು. ಇವನು "ಪೊಲ್ಟಾವ" ಮೊದಲಾದ ಕವನಗಳನ್ನು ಬರೆದಿದ್ದಾನೆ. ರಷ್ಯನ್ ಸಾಹಿತ್ಯ ಸಂಕಲನದಲ್ಲಿ ಇವನ ಭಾವಗೀತೆಯೊಂದನ್ನು ಪ್ರಾರಂಭದಲ್ಲಿ ಸೇರಿಸುವುದು ವಾಡಿಕೆ.

ಗಾರ್ಕಿ—(೧೮೬೮–೧೯೩೬) "ಗಾರ್ಕಿ" ಎಂಬುದು ಇವನ ಕಾವ್ಯನಾಮ. "ಅಲೆಕ್ಸಿ ಮಾಕ್ಸಿ ಮೋವಿಚ್ ಪೆಷ್ಕಾವ್" ಎಂಬುದು ಇವನ ನಿಜವಾದ ಹೆಸರು. ಇವನು ಅನೇಕ ಕಾದಂಬರಿ, ನಾಟಕ, ಸಣ್ಣಕತೆ, ಆತ್ಮಚರಿತ್ರೆ ಮೊದಲಾದವುಗಳನ್ನು ಬರೆದಿದ್ದಾನೆ. "ಮದರ್" (Mother-ತಾಯಿ) ಎಂಬುದು ಇವನ ಪ್ರಸಿದ್ಧ ಕಾದಂಬರಿ.

ಮಾನ್ಯತೆ—ಗೌರವ. ಸ್ಮಾರಕ—ಜ್ಞಾಪಕಾರ್ಥವಾಗಿ ಇಟ್ಟಿರುವ ವಸ್ತು. ಇಣುಕು ನೋಟ—ಸೂಕ್ಷ್ಮವಾದ ನೋಟ. ಅಂತಸ್ತು—ಯೋಗ್ಯತೆ. ಗೌರ್ನೆಸ್—ಮನೆಯಲ್ಲಿ

...ಳಿಕೊಡುವ ಉಪಾಧ್ಯಾಯಿನಿ. ನಿಸರ್ಗ—ಪ್ರಕೃತಿ. ಸ್ಫೂರ್ತಿ—ಉತ್ಸಾಹ. ಆಟಿಕೆ—ಆಟದ ...ಮಾನು. ಶಾಕಾಹಾರಿ—ಸಸ್ಯಸಂಬಂಧವಾದ ಆಹಾರವುಳ್ಳವನು ; ಮಾಂಸಾಹಾರಿಯಲ್ಲ ...ವನು. ಗೈಡು—ಮಾರ್ಗದರ್ಶಕ. ಆಗಂತುಕ—ಆಕಸ್ಮಾತ್ತಾಗಿ ಬಂದವನು. ಕೃತಿ—ಗ್ರಂಥ. ...ರ್ವಸಿದ್ಧಾಂತ—ವಿಷಯವನ್ನು ತಿಳಿಯುವುದಕ್ಕೆ ಮೊದಲೇ ಮನಸ್ಸಿನಲ್ಲಿ ಮಾಡಿಕೊಂಡಿರುವ ...ರ್ಮಾನ. ಆಂದೋಲನ—ಮಾರ್ಪಾಟಿಗಾಗಿ ಹೂಡುವ ಹೋರಾಟ. ಅಧ್ವರ್ಯು— ...ಂದಾಳು ; ಕಾರ್ಯವನ್ನು ಕೈಗೊಂಡಿರುವವನು. ಬವಣೆ—ತೊಂದರೆ. ಕಷ್ಟ. ...ಣಾಕ್ಷತನ—ಚತುರತೆ: ಕೌಶಲ್ಯ.

ಲೆನಿನ್ ವ್ಲ್ಯಾಡಿಮಿರ್‌ಇಲಿಟ್ಸಿಜ್:— (೧೮೭೦–೧೯೨೪). ರಷ್ಯಾದ ಪ್ರಸಿದ್ಧ ...ಜಕಾರಿಣಿ. ಸೋವಿಯೆತ್ ವಿಪ್ಲವಕ್ಕೆ ಮಾರ್ಕ್ಸ್ ಸಿದ್ಧಾಂತವನ್ನಳವಡಿಸಿದವನು. ರಷ್ಯಾದಲ್ಲಿ ...ಡೆದ ಕ್ರಾಂತಿಗಳಿಗೆ ಈತ ಸಹಾಯಮಾಡಿದನು. ೧೯೧೭ ರಲ್ಲಿ ನಡೆದ ರಷ್ಯನ್ ಕ್ರಾಂತಿಯಲ್ಲಿ ...ಮುಂದಾಳಾಗಿದ್ದನು. ಮುಂದೆ ತನ್ನ ಜೀವಿತಕಾಲದಲ್ಲಿ ರಷ್ಯಾದೇಶದ ಮೊದಲನೆಯ ...ಧ್ಯಕ್ಷನಾದನು.

...ಪವಾಡ—ಅದ್ಭುತಕಾರ್ಯ. ನಿರ್ನಾಮ—ಹೆಸರಿಲ್ಲದಂತಾಗುವುದು. ಮರ್ದನ— ... ಸಾಮಮಾರ್ಗ—ಉಪಾಯದಿಂದ ಕಾರ್ಯ ಸಾಧಿಸುವುದು. ಶಾಂತಿಮಾರ್ಗ. ...ದೀನ—ದರಿದ್ರ

...ಟ್ರಾಟ್‌ಸ್ಕಿ—ಲಿಯೋಡೇವಿಡೋವಿಚ್—(೧೮೭೯–೧೯೪೦). ಕಾರ್ಮಿಕರ ಹಿತಚಿಂತಕ ...ದ ಇವನು ಕ್ರಾಂತಿಕಾಲದಲ್ಲಿ ಕೆಂಪು ಸೇನೆಯನ್ನು ಕಟ್ಟಿದನು. ಶ್ರೀಮಂತರ ಮನೆತನದಲ್ಲಿ ...ನಿಸಿದವನು. ಲೆನಿನ್ನನ ಮರಣಾನಂತರ ಸ್ಟಾಲಿನ್ನನು ಇವನನ್ನು ದೇಶಭ್ರಷ್ಟನನ್ನಾಗಿ ...ಮಾಡಿದನು. ಇವನು 'ದಿ ಪರ್ಮನೆಂಟ್ ರಿವೊಲ್ಯೂಶನ್' (The Permanent ...evolution—ಶಾಶ್ವತಕ್ರಾಂತಿ) ಎಂಬ ಗ್ರಂಥವನ್ನು ಬರೆದಿದ್ದಾನೆ. ೧೯೪೦ರಲ್ಲಿ ತನ್ನ ...ವಾಸದಲ್ಲಿಯೇ ಕೊಲೆಗೀಡಾದನೆಂದು ಹೇಳುತ್ತಾರೆ.

ಡೆಮೋಕ್ರಸಿ—ಪ್ರಜಾಪ್ರಭುತ್ವ. ಹಾಟೆಲ್—ಹೋಟೆಲ್. ಉಪಾಹಾರಗೃಹ. ...ಮಾರ್ನಿಂಗ್ ಸ್ಟಾರ್—ಕಮ್ಯೂನಿಸ್ಟ್ ಪಕ್ಷವು ಹೊರಡಿಸುವ ಒಂದು ಪತ್ರಿಕೆ.

...ಪ್ರಶ್ನೆಗಳು :

೧. ಟಾಲ್‌ಸ್ಟಾಯ್ ವಿಷಯವನ್ನು ಸಂಗ್ರಹಿಸಿ ಬರೆಯಿರಿ.
೨. ಗಾರ್ಕಿ ಮ್ಯೂಸಿಯಂ ನೋಡಿದಾಗ ತಿಳಿದುಬರುವ ಅವನ ವಿಷಯವೇನು ?
೩. ವಾಕ್‌ದೃಶ್ಯ ಪ್ರದರ್ಶನಗಳು ಏನನ್ನು ಬೋಧಿಸುತ್ತವೆ ?

೪. ಮೂರನೆ ಮ್ಯೂಸಿಯಂ ದರ್ಶಿಸಿದಾಗ ಗ್ರಂಥಕರ್ತರು ತಿಳಿದುಕೊಂಡುದೇನು ?

೫. 'ಲೆನಿನ್ ಒಬ್ಬ ಪವಾಡಪುರುಷ' ಹೇಗೆ ? ವಿವರಿಸಿ.

೬. ಗ್ರಂಥಕರ್ತರು ಮ್ಯೂಸಿಯಂ ಅನ್ನು ನೋಡುತ್ತಿದ್ದಾಗ ನಡೆದ ಎರಡು ಘ
ಗಳಾವುವು ?

ಸಂದರ್ಭದೊಡನೆ ಸ್ಪಷ್ಟೀಕರಿಸಿ :

೧. 'ನಿಸರ್ಗವು ಅಲ್ಲಿ ಧರಿಸಿದ ವೇಷಗಳನ್ನು ಕಂಡು ಎಷ್ಟು ಸ್ಫೂರ್ತಿಗೊ
ಆನಂದಪಟ್ಟನೋ !'

೨. 'ಅವನ್ನು ನೋಡಿ ನೋಡಿ ಎಷ್ಟು ಬಾರಿ ಆ ಮೃದುಹೃದಯ ಕಣ್ಣ
ಸುರಿಸಿತೋ !'

೩. 'ಆತನ ಮನೋಧರ್ಮ ನಮಗೆ ಹಿಡಿಸಿದೆ.'

ಈ ಮಾತುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬರೆಯಿರಿ :

ಸ್ಥಾನಮಾನ : ಸುಖಮಯ : ಸಿಂಹವಾಣಿ : ಗಂಡಾಂತರ : ಆಗಂತುಕ : ಹೊಣೆಗಾ
ಪ್ರಾಮಾಣಿಕತೆ ; ಕಣ್ಣೀಡು ; ಹರಕುಮುರುಕು.

ಇವುಗಳ ವಿರುದ್ಧಾರ್ಥಕ ಶಬ್ದಗಳನ್ನು ಬರೆಯಿರಿ :

ಗೌರವ ; ಪವಿತ್ರ ; ತೃಪ್ತಿ ; ಅನುಕೂಲ ; ಉತ್ತಮ ; ಆವಶ್ಯಕ ; ವ್ಯವಸ್ಥೆ.

# ಬಲಿದಾನ

ದೇ. ಜ. ಗೌ.

ಏಪ್ರಿಲ್ ಐದರಂದು ಗಾಂಧೀಜಿ ದಂಡಿಯನ್ನು ತಲುಪಿದರು. ಮಾರನೆಯ ದಿವಸ ಪ್ರಾರ್ಥನಾ ಸಭೆ ಮುಗಿದನಂತರ ಅವರು ಸಮುದ್ರದಂಚಿಗೆ ಹೋಗಿ ಉಪ್ಪಿನ ತುಣುಕುಗಳನ್ನು ಸಂಗ್ರಹಿಸುವ ಮೂಲಕ ಕಾನೂನನ್ನು ಮುರಿದರು. ಅವರು ಜವಾಹರಲಾಲರಿಗೆ ಕಳುಹಿಸಿಕೊಟ್ಟ ಒಂದು ಚಿಟಕಿ ಉಪ್ಪನ್ನು ಹರಾಜು ಮಾಡಿದಾಗ ಒಂದು ಸಾವಿರ ರೂಪಾಯಿ ಬೆಲೆ ಬಂದಿತು.. ಅವರು ಕಾನೂನು ಮುರಿದರೂ. ಜನ ಉರಿದೇಳಬಹುದೆಂಬ ಭಯದಿಂದ ಸರ್ಕಾರ ಅವರನ್ನು ಕೂಡಲೇ ಬಂಧಿಸಲಿಲ್ಲ.

ಏಪ್ರಿಲ್ ೧೪ ರಂದು ಸರ್ಕಾರ ಜವಾಹರಲಾಲರನ್ನು ಬಂಧಿಸಿ, ವಿಚಾರಣೆ ಮಾಡಿ, ಆರು ತಿಂಗಳ ಶಿಕ್ಷೆ ವಿಧಿಸಿತು. ಮೊದಲೇ ನಿರೀಕ್ಷಿಸಿದ್ದಂತೆ ವಿದೇಶಿ ವಸ್ತ್ರದಹನ, ಹೆಂಡದಂಗಡಿಗಳ ಮುಂದೆ ಹರತಾಳ; ಕಾರ್ಮಿಕರ ಮುಷ್ಕರ ಇವೇ ಮುಂತಾದ ಚಳುವಳಿ ದೇಶದ ನಾನಾ ಭಾಗ ಗಳಲ್ಲಿ ಭಿರುಸಾಗಿ ಸಾಗಿದುವು. ಸ್ತ್ರೀಯರು ಕಷ್ಟಸಹಿಷ್ಣುಯರಲ್ಲವೆಂದೊ ಏನೋ ಅವರು ಅಂಥ ಚಳುವಳಿಯಲ್ಲಿ ಭಾಗವಹಿಸಕೂಡದೆಂದು ಮೋತಿಲಾಲರು ಆಗಾಗ್ಗೆ ಹೇಳುತ್ತಿದ್ದರು. ಆದರೆ ಅವರ ಸೊಸೆ, ಹೆಂಡತಿ, ಮಕ್ಕಳು ಮನೆಯಲ್ಲಿ ಸುಮ್ಮನಿರಲಿಷ್ಟಪಡಲಿಲ್ಲ. ಆದರಲ್ಲಿಯೂ ಆರೋಗ್ಯ ದೃಢಕಾಯವಲ್ಲದ ಸೂಕ್ಷ್ಮ ಪ್ರಕೃತಿಯ ಕಮಲಾನೆಹ್ರೂ ಅವರು ಅಸಹಕಾರ ಚಳುವಳಿ ಯಲ್ಲಿ ನಿರ್ಭಯವಾಗಿ ಧುಮುಕಿದರು. ಅವರ ಸಾಹಸವನ್ನು ನೋಡಿ ಮೋತಿಲಾಲರು ಮನಸ್ಸಿನಲ್ಲಿಯೇ ಹಿರಿಹಿರಿ ಹಿಗ್ಗಿದರು. ಆ ಸುದ್ದಿ ಕೇಳಿದಾಗ ಜವಾಹರರು ಆನಂದಪರವಶ ರಾದರು. ಕೃಷ್ಣಾನೆಹರು ತಮ್ಮ ಕೆಲಸಕ್ಕೆ ರಾಜಿನಾಮೆಯಿತ್ತು ಸ್ವಯಂಸೇವಕದಳವನ್ನು ಸೇರಿದರು. ಆ ಹೆಂಗಸರು ಮುಂಜಾನೆಯಿಂದ ಸಂಜೆಯುವರೆಗೆ ಸುಡುಬಿಸಿಲಿನಲ್ಲಿ ವಿದೇಶಿ ವಸ್ತ್ರಗಳನ್ನು ಮಾರುತ್ತಿದ್ದ ಅಂಗಡಿಗಳ ಮುಂದೆ ಸತ್ಯಾಗ್ರಹ ಹೂಡುತ್ತಿದ್ದರು. ಆಗಾಗ್ಗೆ ಮೆರವಣಿಗೆಗಳನ್ನು ವ್ಯವಸ್ಥೆಗೊಳಿಸುತ್ತಿದ್ದರು.

ಮೇ ಐದರಂದು ಸರ್ಕಾರ ಗಾಂಧೀಜಿಯನ್ನು ನಟ್ಟಿರುಳಿನಲ್ಲಿ ಬಂಧಿಸಿ. ಪೂನಾದ ಯರವಾ
ಜೈಲಿನಲ್ಲಿ ಕೂಡಿಟ್ಟಿತು. ನಾಡಿನ ನಾನಾ ಭಾಗಗಳಲ್ಲಿ ಲಕ್ಷಗಟ್ಟಳೆ ಸತ್ಯಾಗ್ರಹಿಗಳು ಸೆರೆವಾ
ಸೇರಿದರು : ಕಾರ್ಮಿಕರು ಗಿರಣಿಗಳನ್ನು ತೊರೆದು ಹೊರಗೆ ಬಂದರು ; 'ಮಹಾತ್ಮಗಾಂಧಿ
ಜೈ' ಎಂದು ಕೂಗುತ್ತ ವಿದ್ಯಾರ್ಥಿಗಳು ಶಾಲೆಗಳನ್ನು ತೊರೆದರು. ಮಗ ಸೆರೆಮನೆಗೆ ಹೋದ
ನಂತರ ಹಂಗಾಮಿ ಅಧ್ಯಕ್ಷರಾಗಿದ್ದ ಮೋತಿಲಾಲರು ವೈದ್ಯರ ಸಲಹೆಯನ್ನು ನಿರಾಕರಿ
ಬೊಂಬಾಯಿಗೆ ಹೋಗಿ ಮುಷ್ಕರ ಪ್ರದರ್ಶನಗಳನ್ನು ವ್ಯವಸ್ಥೆಗೊಳಿಸಿದರು. ಬಿಡುವಿಲ್ಲ
ತೊಳಲಾಟದಿಂದ ಅವರ ಆರೋಗ್ಯ ಮತ್ತಷ್ಟು ಹದಗೆಟ್ಟಿತು : ಕೈಕಾಲುಗಳಲ್ಲಿ ಶಕ್ತಿ ಕುಂದಿ
ಕೊನೆಗೆ ಗಿರಿನಗರವಾದ ಮಸ್ಸೂರಿಯಲ್ಲಿ ವಿಶ್ರಾಂತಿ ತೆಗೆದುಕೊಳ್ಳುವುದೆಂದು ನಿಶ್ಚಯಿಸಿ ಅಷ್ಟರ
ಅಲಹಾಬಾದಿಗೆ ಹಿಂದಿರುಗಿದರು. ಆದರೆ ಸರಕಾರ ಅವರ ಬಗ್ಗೆ ಅಜಾಗರೂಕವಾಗಿರ
ಅವರು ೧೯೩೦ ನೆಯ ಇಸವಿ ಜೂನ್ ಮೂವತ್ತರಂದು ಗಂಗಾನದಿಯನ್ನು ದಾಟಿ ನೈ
ಸೆರೆಮನೆಯನ್ನು ಸೇರಬೇಕಾಯಿತು. ಮುಂಜಾನೆಗೆ ಮುಂಚೆಯೇ ತಂದೆಯನ್ನು ಕಂಡ ಮಗ
ಸೋಜಿಗವಾಯಿತು. 'ಮತ್ತೆ ನಾವಿಬ್ಬರೂ ಜೊತೆಗೂಡುವಂತಾಯಿತು' ಎನ್ನು
ಮೋತಿಲಾಲರು ಮಗನನ್ನು ನೋಡಿ ನಕ್ಕರು.

ಅಲ್ಲಿಯತನಕ ಜವಾಹರಲಾಲರು ಒಬ್ಬೊಂಟಿಗರಾಗಿದ್ದು ಬೇಸರಿಕೆಯ ಬೇನೆಯನ್ನ
ಭವಿಸುತ್ತಿದ್ದರು. ಇಳಿವಯಸ್ಸಿನ ರೋಗಪೀಡಿತರಾದ ತಂದೆಯ ಬಳಿಯಲ್ಲಿದ್ದು
ಒಂದೆರಡು ದಿನವಾದರೂ ಸೇವೆಸಲ್ಲಿಸುವ ಭಾಗ್ಯ ದೊರೆತುದಕ್ಕಾಗಿ ಅವರು ಸಂತೋ
ಗೊಂಡರು. ಅದೇ ತಾನೆ ಮುಂಗಾರುಮಳೆ ಪ್ರಾರಂಭವಾಗಿದ್ದುದರಿಂದ ಅವರನ್ನು
ಗಿಡುವುದೇ ಕಷ್ಟವಾಯಿತು. ಮಳೆಯ ನೀರು ಚಾವಣಿಯ ಮೂಲಕ ಕೊಟಡಿಯೊ
ಸುರಿಯುತ್ತಿತ್ತು. ಹತ್ತು ಅಡಿ ಉದ್ದ. ಐದು ಅಡಿ ಅಗಲದ ಅಂಗಳದಲ್ಲಿ ಅವರ ಹಾ
ಹಾಸಬೇಕಾಗಿತ್ತು. ಮಳೆ ಜೋರಾದಾಗ ಅಲ್ಲಿಗೆ ಇರಿಚಲು ಬಡಿಯುತ್ತಿತ್ತು. ಅವರಿ
ಬೇರೊಂದು ಕೊಟಡಿಗೆ ವರ್ಗಾಯಿಸುವುದಾಗಿ ಜೈಲಿನ ಮುಖ್ಯಾಧಿಕಾರಿ ತಿಳಿಸಿದರು. ಜೊ
ಮಗನ ಶುಶ್ರೂಷೆ ಅತ್ಯವಶ್ಯವಾಗಿದ್ದುದರಿಂದ ಅವರು ಅಗಲಿಕೆಗೆ ಒಡಂಬಡಲಿಲ್ಲ. ಆದುದ
ಆ ಕೋಣೆಯ ಪಕ್ಕದಲ್ಲಿಯೆ ಮತ್ತೊಂದು ಕೋಣೆ ಕಟ್ಟುವಂತೆ ಏರ್ಪಾಡಾಯಿತು. ಹೊಸ
ಕೋಣೆಗೆ ಹೋದನಂತರವೂ ಅವರು ಗುಣಮುಖರಾಗಲಿಲ್ಲ. ಪ್ರತಿದಿನವೂ
ಆನಂದಭವನದಿಂದ ಬರುತ್ತಿತ್ತು.

ಅವರು ೧೯೩೦ ರ ಜುಲೈ ಮೂವತ್ತರಂದು ತಮ್ಮ ಕಿರಿಯ ಮಗಳಿಗೆ ಬರೆದ ಪತ್ರ
ಸೆರೆಮನೆಯ ದಿನಚರಿಯನ್ನು ವಿವರಿಸಿದ್ದಾರೆ. "ಕೆಲವು ದಿನಗಳಾದ ಮೇಲೆ ನಾನೇ
ಮಾಡಿಕೊಳ್ಳುತ್ತೇನೆ. ಆಗ ನಾನು ಹೊಸ ಹೊಸ ಭಕ್ಷ್ಯಗಳನ್ನು ಕಂಡುಹಿಡಿಯ
ಅದರಿಂದ ನನಗೆ ಬೇಸರಿಕೆ ನೀಗುತ್ತದೆ. ನನಗೀಗ ಕೆಲಸವೇ ಇಲ್ಲ. ಊಟ, ನಿದ್ರೆ,
ಇವಲ್ಲದೆ ಬೇರೆ ಕೆಲಸವೇ ಇಲ್ಲ. ಶುಶ್ರೂಷೆಯ ವಿಷಯದಲ್ಲಿ ಹರಿ ಜವಾಹರನನ್ನು

ಲಿತುಕೊಂಡರೊಳ್ಳೆಯದು. ಮುಂಜಾನೆಯ ಟೀಯಿಂದ ಹಿಡಿದು ರಾತ್ರಿ ಮಲಗುವತನಕ ಎಲ್ಲವೂ ಯಂತ್ರದಂತೆ ಕ್ರಮವಾಗಿ ನಡೆದುಹೋಗುತ್ತದೆ. ಸಣ್ಣ ವಿಷಯವನ್ನು ಸಹ ಬಹು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾನೆ. ಆನಂದಭವನದಲ್ಲಿ ಏನು ಬೇಕಾದರೂ ಕೇಳಿ ಮಾಡಿಸಿಕೊಳ್ಳಬೇಕಾಗಿತ್ತು. ಒಮ್ಮೊಮ್ಮೆ ಕೂಗಾಟವೂ ಅನಿವಾರ್ಯವಾಗುತ್ತಿತ್ತು. ನಾನು ಸೋಮಾರಿಯಾಗಿರುವುದಾಗಲಿ. ಜವಾಹರ್ ನನಗಾಗಿ ಕಾಲವ್ಯಯ ಮಾಡುವುದಾಗಲಿ ನನಗಿಷ್ಟ ವಿಲ್ಲ. ಆದರೆ ನಾನು ಯೋಚಿಸುವ ಮೊದಲೆ ನನ್ನ ಅವಶ್ಯಕತೆಗಳನ್ನೂಹಿಸಿ ಅಣಿಮಾಡುತ್ತಾನೆ. ಯಾವ ಕೆಲಸವನ್ನೂ ನನ್ನಿಂದ ಮಾಡಗೊಡುವುದಿಲ್ಲ. ಅಂಥ ಮಕ್ಕಳನ್ನು ಪಡೆದು ಹೆಮ್ಮೆ ಪಡಬಹುದಾದಂಥ ತಂದೆಯರು ಈ ಜಗತ್ತಿನಲ್ಲಿ ಹಲವರಿರಲಾರರು."

ಜುಲೈ ತಿಂಗಳ ಕೊನೆಯಲ್ಲಿ ತೇಜ್ ಬಹದ್ದೂರ್ ಸಪ್ರೂ ಮತ್ತು ಜಯಕರ್ ಅವರು ವೈಸ್‌ರಾಯರ ಅನುಮತಿ ಪಡೆದು ಕಾಂಗ್ರೆಸ್ಸಿನೊಡನೆ ಸಂಧಾನ ನಡೆಸುವ ಸಲುವಾಗಿ ಯರವಾಡದ ಜೈಲಿಗೆ ಹೋದರು. ಸಂಧಾನ ಜವಾಬ್ದಾರಿ ಸರ್ಕಾರಸ್ಥಾಪನೆಗೆ ನೆರವಾಗುವುದಾದರೆ. ಹಾಗೂ ನೆಹ್ರೂಗಳಿಬ್ಬರಿಗೆ ಒಪ್ಪಿಗೆಯಾಗುವುದಾದರೆ ಮಾತುಕತೆ ನಡೆಸಬಹುದೆಂದು ಗಾಂಧೀಜಿ ಸ್ಪಷ್ಟಪಡಿಸಿದರು.. ಗಾಂಧೀಜಿಯೊಡನೆ ಮಾತಾಡದೆ ಅಭಿಪ್ರಾಯ ನೀಡಲು ತಾವು ಸಿದ್ಧರಾಗಿಲ್ಲವೆಂದು ನೆಹ್ರೂಗಳಿಬ್ಬರೂ ಸಂಧಾನಕಾರರಿಗೆ ತಿಳಿಸಿದರು. ನೆಹ್ರೂಗಳು ಯರವಾಡ ಜೈಲಿನಲ್ಲಿ ಗಾಂಧೀಜಿಯನ್ನು ಭೇಟಿ ಮಾಡಬಹುದೆಂದು ವೈಸ್‌ರಾಯರ ಅಪ್ಪಣೆಯಾಯಿತು. ಗಸ್ಟ್ ಹತ್ತರಂದು ಮೋತಿಲಾಲ್. ಜವಾಹರಲಾಲ್ ಮತ್ತು ಕಾಂಗ್ರೆಸ್ ಕಾರ್ಯದರ್ಶಿ ಸಯ್ಯದ್‌ಮಹಮ್ಮದರು ವಿಶೇಷ ರೈಲಿನಲ್ಲಿ ನೈನಿಯಿಂದ ಪೂನಾಕ್ಕೆ ಹೊರಟರು. ಅವರು ಪೂನಾ ತಲುಪಿದಾಗ ಮಧ್ಯರಾತ್ರಿಯಾಗಿತ್ತು.

ಜೈಲು ತಲುಪಿದ ಕೂಡಲೇ ತಮ್ಮನ್ನು ಗಾಂಧೀಜಿಯ ಕೋಣೆಗೆ ಕರೆದೊಯ್ಯಬಹುದೆಂದು ಅವರು ನಂಬಿಕೊಂಡಿದ್ದರು. ಮೊದಲೇ ಅವರು ಸಂಧಿಸಿದರೆ ಸಂಧಾನ ವಿಫಲವಾಗಬಹುದೆಂದು ಪೊಲೀಸ್ ಅಧಿಕಾರಿಗಳು ಭಾವಿಸಿದ್ದರು. ಸಪ್ರೂ ಜಯಕರ್‌ರ ಸಮ್ಮುಖದಲ್ಲಿ ಅವರು ಗಾಂಧೀಜಿಯನ್ನು ಭೇಟಿ ಮಾಡಬೇಕೆಂದೂ. ಅವರು ಬರುವತನಕ ಬೇರೆ ಕೋಣೆಯಲ್ಲಿರಬೇಕೆಂದೂ ಪೊಲೀಸ್‌ನವರು ಮೋತಿಲಾಲರಿಗೆ ತಿಳಿಸಿದರು. ' ನೈನಿಯಿಂದ ದಣಿದು ಬಂದುದು ದಕ್ಕೇಯೆ ? ' ಎಂದು ಮೋತಿಲಾಲರು ಕೂಗಾಡಿದರು. ಮಾರನೆಯ ದಿನ ಸಪ್ರೂ ಜಯಕರ್ ಬಂದರು. ಸೆರೆಮನೆಯ ಕಚೇರಿಯಲ್ಲಿ ಅವರ ಭೇಟಿ ಏರ್ಪಾಡಾಯಿತು. ಮೊದಲೇ ಗಾಂಧೀಜಿಯ ಬಳಿ ಬಿಡದೆ ಮಾಡಿದ ಅವಮಾನಕ್ಕಾಗಿ ತಾವು ಮಾತುಕತೆಗೆ ಸಿದ್ಧವಾಗಿಲ್ಲವೆಂದು ಮೋತಿಲಾಲರು ಹಠಹಿಡಿದರು. ತಾವು ಮೊದಲೇ ಗಾಂಧೀಜಿಯನ್ನು ನೋಡಲವಕಾಶ ಕಲ್ಪಿಸುವುದಾದರೆ, ತಮ್ಮ ತಪ್ಪಿಗಾಗಿ ಪೊಲೀಸ್ ಅಧಿಕಾರಿ ಕ್ಷಮೆ ಕೇಳಿಕೊಳ್ಳುವುದಾದರೆ ತಾವು ಭೇಟಿಮಾಡಲು ಸಿದ್ಧವೆಂದು ಅವರು ತಮ್ಮ ನಿಲುವನ್ನು ವಿಶದಪಡಿಸಿದರು. ಬೇರೆ ಮಾರ್ಗ ಕಾಣದೆ ಅಧಿಕಾರಿಗಳು ಅವರಿಗೆ ಮಣಿದರು.

ಅದೇ ಸಮಯದಲ್ಲೊಂದು ಲಘುಪ್ರಸಂಗ ನಡೆಯಿತು. ಜೈಲಿನ ಅಧಿಕಾರಿ ಮೋತಿ ಆಹಾರ ಪಾನೀಯಗಳನ್ನೊದಗಿಸುವ ಸಲುವಾಗಿ ಅವುಗಳ ಬಗ್ಗೆ ವಿವರ ಕೇ ಮೋತಿಲಾಲರು ತಮ್ಮ ಆಹಾರ ತುಂಬ ಸರಳವಾದುದೆಂದು ತಿಳಿಸಿ. ಮುಂಜಾ ಸಂಜೆಯವರೆಗೆ ತಮಗೆ ಬೇಕಾದ ಅವಶ್ಯಕತೆಗಳನ್ನೆಲ್ಲ ವಿವರಿಸಿದರು. ಅವರು ಆಹಾರದ ಪಟ್ಟಿ ದೊಡ್ಡದಾಗಿ ಕಂಡರೂ, ಪರಿಕರಗಳು ಸರಳವಾಗಿದ್ದುವು. ಪ್ರತಿನಿತ್ಯ ಮನೆಯಿಂದ ಏನೇನು ತರಿಸಿಕೊಳ್ಳುತ್ತಿದ್ದರೋ ಅದನ್ನಷ್ಟೆ ಹೆಸರಿಸಿದರು. ಪಟ್ಟಿಯನ್ನು ಕೇಳುತ್ತಿದ್ದಂತೆ ಅಧಿಕಾರಿಯ ಮುಖ ಕೆಂಪಗಾಯಿತು. ಯೆರವಾಡ ಜೈ ಆಡಿನ ಹಾಲು. ಖರ್ಜೂರ ಮತ್ತು ಕಿತ್ತಳೆ ಹಣ್ಣುಗಳನ್ನು ಮಾತ್ರ ಒದಗಿಸುತ್ತಿದ್ದ ತುಂಬ ಗಾಬರಿಯಾಯಿತು. ಅಲ್ಲಿಯತನಕ ಅವನಂಥ ಶ್ರೀಮಂತ ಖೈದಿಯನ್ನು ಕಂ ಪಕ್ಕದಲ್ಲಿದ್ದ ಜವಾಹರರು " ಇದು ಹೋಟಲಲ್ಲ. ಸೆರೆಮನೆ " ಎಂದು ನಕ್ಕರಂತೆ.

ಮಾತುಕತೆ ಮೂರು ದಿನಗಳತನಕ ಒಂದೇ ಸಮನೆ ನಡೆಯಿತು. ಶಾಂತಿ ದೌತ್ಯ ವಿಫಲವಾಯಿತು. ಮಾನಸಿಕ ಮತ್ತು ದೈಹಿಕಶ್ರಮದ ಪರಿಣಾ ಮೋತಿಲಾಲರ ಮೈ ಜ್ವರದಿಂದ ಬೇಯತೊಡಗಿತು. ಆದುದರಿಂದ ಅವರ ಪ್ರಯಾಣವನ್ನು ಮೂರು ದಿನಗಳ ಕಾಲ ಮುಂದುವರಿಸಿದರು. ನೈನಿ ಜೈಲನ್ನು ನಂತರವೂ ಅವರ ಆರೋಗ್ಯ ಕುದುರಲಿಲ್ಲ. ಅನೇಕ ವೈದ್ಯರು ಬಂದು ಪರೀಕ್ಷಿ ನಡೆಸುತ್ತಿದ್ದರು. ಯಾವ ಚಿಕಿತ್ಸೆಯೂ ಪ್ರಯೋಜನವಾಗಲಿಲ್ಲ. ರೋಗ ವಿಷಮಿ ಅವರನ್ನು ಬಿಡುಗಡೆ ಮಾಡದಿದ್ದುದಕ್ಕಾಗಿ ಯಾರೋ ಸ್ನೇಹಿತರೊಬ್ಬರು ವಿಷಾದ ಪತ್ರಿಕೆಗೊಂದು ಲೇಖನ ಕಳುಹಿಸಿದ್ದರು. ಅದರಿಂದ ಜನರಲ್ಲಿ ತಪ್ಪು ಅಭಿ ಮೂಡಬಹುದೆಂದು ಮೋತಿಲಾಲರು ಕೋಪಾರೂಢರಾದರು. ಯಾವ ಕಾರಣದಿಂ ಸರಿಯೇ ತಮ್ಮನ್ನು ಬಿಡುಗಡೆಮಾಡಬಾರದೆಂದು ವೈಸ್‌ರಾಯರಿಗೆ ತಂತಿ ಕಳುಹಿ ದಿನೇ ದಿನೇ ತೂಕ ಕಡಿಮೆಯಾಗಿ ಶರೀರ ಜೀರ್ಣವಾಗುತ್ತಿದ್ದಾಗ ಸರಕಾರ ಅ ಬಿಡುಗಡೆ ಮಾಡಬೇಕಾಗಿ ಬಂತು. ಸೆರೆಮನೆಗೆ ಹೋದ ಹತ್ತು ವಾರಗಳಲ್ಲಿ ಅವರು ಬಂದರು.

ಕೂಡಲೇ ಮೋತಿಲಾಲರು ಚಿಕಿತ್ಸೆಗಾಗಿ ಮುಸ್ಸೋರಿಗೆ ಹೋದರು. ಹವಾಗುಣದಿಂದ ಅವರ ದೇಹದಲ್ಲಿ ಶಕ್ತಿ ಸಂಚರಿಸಿದಂತಾಯಿತು. ಕೆಲವು ಜವಾಹರಲಾಲರು ಬಿಡುಗಡೆ ಹೊಂದಿ ಬಂದುದರಿಂದ ಅವರ ಮನಸ್ಸಿಗೆ ತುಸು ಕಾಣಿಸಿತು. ಆದರೆ ಆ ನೆಮ್ಮದಿ ಬಹಳ ದಿನಗಳಿರಲಿಲ್ಲ. ಮಗನಿಗೆ ಸೆರೆಮನೆಯ ಆಹ್ವಾನ ಯೆಂಬ ಸುದ್ದಿ ಎಲ್ಲೆಲ್ಲೂ ಹಬ್ಬಲಾರಂಭಿಸಿತು. ವೈದ್ಯರು ಬೇಡವೆಂದರೂ ಮಗನನ್ನು ಸಲುವಾಗಿ ಅವರು ಅಲಹಾಬಾದಿಗೆ ಹಿಂದಿರುಗಿದರು. ಜವಾಹರಲಾಲ್ ಮತ್ತು ನೆಹ್ರೂಗಳಿಬ್ಬರೂ ನಿಲ್ದಾಣದಲ್ಲಿ ತಂದೆತಾಯಿಯರನ್ನೆದುರುಗೊಂಡರು. ಕೂಡಲೇ ಸಾ

...ಯೊಂದರಲ್ಲಿ ಭಾಗವಹಿಸಬೇಕಾಗಿದ್ದುದರಿಂದ ಅವರು ತಂದೆತಾಯಿಯರನ್ನು ಮನೆಯ ಕಡೆಗೆ ...ಹಿಸಿ. ಹೆಂಡತಿಯೊಡನೆ ಸಭಾಭಿಮುಖವಾಗಿ ಹೊರಟರು. ಸಭೆ ಮುಗಿದನಂತರ ...ರಳಿಬ್ಬರೂ ಮನೆಯ ಬಾಗಿಲು ತಲುಪುವಷ್ಟರಲ್ಲಿ ಪೊಲೀಸಿನವರು ಅವರ ವಾಹನವನ್ನು ...ಸಿ. ಜವಾಹರಲಾಲರನ್ನು ಬಂಧಿಸಿದರು. ರೋಗಗ್ರಸ್ತರಾದ ತಂದೆ ಬೀದಿಯ ಕಡೆಗೆ ಕಣ್ಣಾಗಿ ...ಗಮನ ನಿರೀಕ್ಷೆಯಲ್ಲಿದ್ದರು. ತಂದೆಯ ದರ್ಶನಭಾಗ್ಯದಿಂದ ವಂಚಿತರಾಗಿ ಜವಾಹರರು ...ತ್ತೆ ಪೂರ್ವಪರಿಚಯದ ನೈನಿ ಸೆರೆಮನೆಯನ್ನು ಸೇರಿದರು.

ಏಕಾಕಿಯಾಗಿ ಬಂದ ಪೆಚ್ಚುಮೋರೆಯ ಸೊಸೆಯನ್ನು ಕಂಡು ಮೋತಿಲಾಲರ ಎದೆ ಜಗ್ಗೆಂದಿತು. ...ಗನ ಬಂಧನದ ಸುದ್ದಿ ಬರಸಿಡಿಲಂತೆ ಅವರ ಕಿವಿದೆರೆಯನ್ನು ತಾಕಿತು. ಕೆಲವು ರಾಜಕೀಯ ...ತ್ತು ಕೌಟುಂಬಿಕ ವಿಷಯಗಳ ಬಗ್ಗೆ ಮಗನೊಡನೆ ಮಾತಾಡಬಹುದೆಂದು ಅವರು ನಂಬಿ ...ಕೊಂಡಿದ್ದರು. ಆ ನಂಬಿಕೆ ನುಚ್ಚುನೂರಾದಾಗ ಅವರು ದುಃಖಾಕ್ರಾಂತರಾಗಿ ತುಸುಹೊತ್ತು ...ಲೆ ತಗ್ಗಿಸಿಕೊಂಡು ಕುಳಿತಿದ್ದರು. ಮರುಕ್ಷಣವೇ ಅವರ ಸಿಂಹಹೃದಯದಲ್ಲಿ ಧೈರ್ಯ ಹೆಡೆ ...ತ್ತಿತು. ಮಂಜುಗುರುಳ ತಲೆಯನ್ನು ಮೇಲೆತ್ತಿ ಮುಂದಿದ್ದ ಮೇಜನ್ನು ಕುಟ್ಟಿ "ಇನ್ನು ...ಮುಂದೆ ಈ ವೈದ್ಯರೂ ಬೇಡ. ಅವರ ಸಲಹೆಯೂ ಬೇಡ. ನಾನು ದುರ್ಬಲವ್ಯಕ್ತಿಯಂತೆ ...ನೆಯ ಮೂಲೆಯಲ್ಲಿ ತೆಪ್ಪಗಿರಲಾರೆ. ಕಾರ್ಯರಂಗಕ್ಕಿಳಿದರೆ ಆರೋಗ್ಯ ತಾನೇತಾನಾಗಿ ...ಮರುತ್ತದೆ" ಎಂದವರು ಹೂಂಕರಿಸಿದರು. ದೃಢಸಂಕಲ್ಪದಿಂದ ದೈಹಿಕ ವ್ಯಾಧಿಯನ್ನು ...ಳಿಯಲು ಅವರು ಹವಣಿಸುತ್ತಿದ್ದರು. ಈ ಹೊಸ ಹುರುಪಿನ ಫಲವಾಗಿಯೋ ಏನೋ ...ವರ ಕಫದಲ್ಲಿ ಬರುತ್ತಿದ್ದ ರಕ್ತ ತಾತ್ಕಾಲಿಕವಾಗಿ ನಿಂತಿತು. ಅಸಹಕಾರ ಚಳುವಳಿ ಪುನಃ ...ಗ್ರರೂಪ ತಾಳುವಂತೆ ವ್ಯವಸ್ಥೆಗೊಳಿಸಿದರು. ನವೆಂಬರ್ ಹದಿನಾಲ್ಕರಂದು ಜವಾಹರರ ...ಟ್ಟುಹಬ್ಬ. ಅಂದು 'ಜವಾಹರ್‌ದಿನ'ವನ್ನಾಚರಿಸುವಂತೆ ಮೋತಿಲಾಲರು ರುಗ್ಣಶಯ್ಯೆ ...ಯಿಂದಲೇ ನಾಡಿಗೆ ಕರೆಗೊಟ್ಟರು. ಎಲ್ಲೆಲ್ಲೂ ಹುಟ್ಟುಹಬ್ಬ ಯಶಸ್ವಿಯಾಗಿ ನೆರವೇರಿತು. ...ದು ಸುಮಾರು ಐದು ಸಾವಿರ ಮಂದಿ ಸೆರೆಮನೆ ಸೇರಿದರು. ಅನೇಕ ಮಂದಿ ಪೊಲೀಸಿನವರ ...ಠೀಪ್ರಹಾರಕ್ಕೆ ಗುರಿಯಾದರು.

ಭಾವಾವೇಶದ ರಭಸದಲ್ಲಿ ಶಾರೀರಕ ಬಾಧೆಯನ್ನು ಮರೆತು ಮೋತಿಲಾಲರು ...ಶ್ರಾಂತವಾಗಿ ದುಡಿದರು. ಆ ದುಡಿಮೆಗೆ ಅವರು ಚಕ್ರಬಡ್ಡಿ ತೆರಬೇಕಾಯಿತು: ...ತ್ಕಾಲಿಕವಾಗಿ ಶಮನವಾಗಿದ್ದ ರೋಗ ಮತ್ತೆ ಕೆರಳಿದಾಗ ಅವರ ಬಿರುಬು ಹಿಂದಿನದಕ್ಕಿಂತ ...ರ್ಮಡಿಯಾಯಿತು. ಇಂಡಿಯಾದಲ್ಲಿರುವತನಕ ಅವರಿಗೆ ವಿಶ್ರಾಂತಿ ದೊರೆಯದೆಂದು ...ಲೋಚಿಸಿ. ರಂಗೂನ್ ಮತ್ತು ಸಿಂಗಪೂರ್‌ಗಳ ಕಡೆಗೆ ಹೋಗುವುದು ಮೇಲೆಂದು ...ವಾಹರಲಾಲರು ತಂದೆಗೆ ಒತ್ತಾಯ ಪೂರ್ವಕವಾಗಿ ಪತ್ರ ಬರೆದರು. ಆ ಸಲಹೆ ...ರಿಗೊಪ್ಪಿಗೆಯಾಯಿತು. ಕಲ್ಕತ್ತೆಯಿಂದ ಜೊತೆಗೊಬ್ಬರು ವೈದ್ಯರನ್ನು ಕರೆದೊಯ್ಯುವ ...ದು ಅವರು ನಿರ್ಧರಿಸಿಕೊಂಡರು. ಕಲ್ಕತ್ತೆಯಲ್ಲಿ ವಸತಿ ಸೌಕರ್ಯವನ್ನೇರ್ಪಡಿಸುವಂತೆ

ಸುಭಾಷ್‌ಚಂದ್ರಬೋಸರಿಗೆ ಪತ್ರ ಬರೆದರು. ನವೆಂಬರು ಹದಿನೇಳರಂದು ಅವರು ಮಗಳೊಡಗೂಡಿ ಪ್ರಯಾಣಸನ್ನದ್ಧರಾದರು. ಕಲ್ಕತ್ತೆಯನ್ನು ತಲುಪುವಷ್ಟರಲ್ಲಿ ತುಂಬ ನಿಶ್ಯಕ್ತರಾದುದರಿಂದ ಮುಂದಿನ ಪ್ರಯಾಣವನ್ನು ನಿಲ್ಲಿಸಬೇಕಾಯಿತು. ಕೆಲವು ಅವರಲ್ಲಿಯೇ ತಂಗಿ, ಮೃತ್ಯುವಿನೊಡನೆ ಹೋರಾಟ ನಡೆಸಿದರು. ತಾವು ಕ್ಷಿಪ್ರದಲ್ಲಿಯೇ ಕೊನೆಮುಟ್ಟಬಹುದೆಂದು ಅರಿತಿದ್ದರು. ಆದರ ಅವರೆಂದೂ ಜೋಲುಮೋರೆ ಹಾಕಿ ಸದಾ ಧೈರ್ಯದಿಂದಿರುತ್ತಿದ್ದರು.

ಸೆರೆಮನೆಗೆ ತಾವೂ ಗಂಡನನ್ನು ಹಿಂಬಾಲಿಸಬೇಕೆಂದು ಬಹುದಿನಗಳಿಂದ ಕಮಲಾ ತವಕಪಡುತ್ತಿದ್ದರು. ಪತಿಯ ಬಂಧನಾನಂತರ ಅವರು ವಿದೇಶೀ ವಸ್ತ್ರಗಳನ್ನು ಮಾರು ಅಂಗಡಿಗಳ ಮುಂದೆ ಹರತಾಳ ಆಚರಿಸಿದರು. ಅದೇ ಕಾರಣವಾಗಿ ಪೋಲೀ ಅವರನ್ನು ಬಂಧಿಸಿದರು. "ನನ್ನ ಆನಂದಕ್ಕೆಂದು ಪಾರವಿಲ್ಲ. ನನ್ನ ಗಂಡನ ಹೆಜ್ಜೆ ಹಿಂಬಾ ಸುಯೋಗ ಲಭಿಸಿದುದರಿಂದ ನಾನಿಂದು ಧನ್ಯೆ. ನಮ್ಮ ರಾಷ್ಟ್ರಧ್ವಜ ಸದಾ ಮಂಡಲದಲ್ಲಿ ಹಾರಾಡುತ್ತಿರಲಿ" ಎಂದು ಜನತೆಗೆ ಸಂದೇಶ ನೀಡಿ ಅವರು ಸೆರೆಮ ಹೊಕ್ಕರು. ಅವರ ಬಂಧನದ ಸುದ್ದಿ ಮೋತಿಲಾಲರನ್ನು ನಡುಗಿಸಿತು. ಸೂಕ್ಷ್ಮಪ್ರಕೃತಿಯ ಆ ಹೆಣ್ಣು ಸೆರೆಮನೆಯ ಕಷ್ಟನಿಷ್ಠುರಗಳನ್ನು ಸಹಿಸಬಲ್ಲಳೆ ಕೊರಗುತ್ತಿದ್ದರು. ಕೂಡಲೇ ಕೃಷ್ಣಾ ನೆಹ್ರೂ ಅವರನ್ನು ಅಲಹಾಬಾದಿಗೆ ಕಳುಹಿ ದಿನಗಳ ನಂತರ ಉಳಿದ ಕುಟುಂಬದೊಡನೆ ಹಿಂದಿರುಗಿದರು.

ಒಂದು ದಿನ ಕೃಷ್ಣಾ ನೆಹ್ರೂ ತಮ್ಮ ಗೆಳತಿಯರ ವಿಚಾರಣೆಯನ್ನು ನೋಡುವ ಜಿಲ್ಲಾ ನ್ಯಾಯಾಧೀಶರ ಕೋರ್ಟಿಗೆ ಹೋದರು. ಒಂದು ವಾರದ ಹಿಂದೆ ಕೂಟವೊಂದರಲ್ಲಿ ಭಾಗವಹಿಸಿದ್ದುದಾಗಿ ಪೋಲೀಸರು ಅವರ ಮೇಲೆ ಆಪಾದನೆ ಕೋರ್ಟಿನ ಮುಂದೆ ಕರೆತಂದು ನಿಲ್ಲಿಸಿದರು. ಒಂದು ತಿಂಗಳು ಸಜಾ ಇಲ್ಲವೇ ರೂಪಾಯಿಗಳ ದಂಡ ಅವರಿಗೆ ವಿಧಾಯಕವಾಯಿತು. ಇದರಿಂದ ಅವರಿಗೆ ತುಂಬಾ ಯಾಯಿತು. ಕಾರಾಗೃಹವಾಸಕ್ಕವರೆಂದೋ ಸಿದ್ಧವಾಗಿದ್ದರು. ಆದರೆ ರೋಗಗ್ರಸ್ತ ತಂದೆಯನ್ನವರು ಬಿಟ್ಟಗಲುವಂತಿರಲಿಲ್ಲ. ಅವರ ಶುಶ್ರೂಷೆಗೆ ಸರಿಯಾದ ಜನ ತಂದೆಯ ಭಯದಿಂದ ನಡುಗುತ್ತ ಅವರು ಸೆರೆಮನೆಗೆ ಹೋದರು. ಮಧ್ಯರಾತ್ರಿ ಗಾಢ ನಿದ್ರೆಯಲ್ಲಿದ್ದಾಗ ಕೋಣೆಯ ಬಾಗಿಲು ತೆರೆಯಿತು. ದಂಡದ ಹಣ ಸಂದಾಯವಾ ರಿಂದ ಅವರನ್ನು ಬಿಡುಗಡೆಮಾಡುವುದಾಗಿ ಕಾವಲುಗಾರರು ತಿಳಿಸಿದರು. ಗಂಟು ಮೂ ಹೊತ್ತುಕೊಂಡು ಹೊರಗೆ ಹೋದಾಗ ಗೆಳೆಯ ವಕೀಲರೊಬ್ಬರು ಅವರಿಗೆ ಕಾಣಿಸಿಕೊ ದಂಡದ ಹಣ ತೆತ್ತವರ ಹೆಸರು ಕೊನೆಗೂ ಬಯಲಾಗಲಿಲ್ಲ.

ದಂಡದ ಹಣ ತೆತ್ತು ಕೃಷ್ಣಾ ನೆಹರೂವನ್ನು ಬಿಡಿಸಬಹುದೆಂಬ ಸುದ್ದಿ ಹಿಂದಿನ ದಿ ಅವರಿಗೆ ಗೊತ್ತಾಗಿತ್ತು. ಸುದ್ದಿ ಗೊತ್ತಾದಾಗ ಮೋತಿಲಾಲರು ಹಾಸಿಗೆಯ

ಮಲಗಿಕೊಂಡೇ ಕೂಗಾಡಿದರು. ಜುಲ್ಮಾನೆಯ ತೆರುಗಡೆ ಸತ್ಯಾಗ್ರಹ ತತ್ವಕ್ಕೆ ತೀರ ವಿರುದ್ಧವಾದುದೆಂದೂ. ಅಂಥ ಕಾರ್ಯದಿಂದ ತಮಗೆ ತುಂಬಾ ನೋವುಂಟಾಗುತ್ತದೆಂದೂ ಅವರು ಉರಿದೆದ್ದರು. ತಕ್ಷಣವೆ ಅವರು ಪತ್ರಿಕೆಗೊಂದು ಹೇಳಿಕೆ ಕಳುಹಿಸಿದರು: "ನನ್ನ ಮಗಳು ಕೃಷ್ಣೆಯ ಮೇಲೆ ಹೊರಿಸಿರುವ ಐವತ್ತು ರೂಪಾಯಿ ದಂಡವನ್ನು ಯಾರೋ ಅಜ್ಞಾತ ವ್ಯಕ್ತಿ ತೆತ್ತಿರುವಂತೆ ಇದೇ ತಾನೆ ಕೇಳಿದೆ. ಈ ಸುದ್ದಿ ನಿಜವಾದರೆ ಆ ಅಜ್ಞಾತವ್ಯಕ್ತಿ ನನಗೆ, ನನ್ನ ಮಗಳಿಗೆ ಮತ್ತು ಇಡೀ ನಾಡಿಗೆ ಅನೂಹ್ಯವಾದ ಅಪಕಾರವನ್ನೆಸಗಿದ್ದಾನೆ. ಅವನ ಹೆಸರು ಬಹಳ ದಿನ ಗುಟ್ಟಾಗಿರಲಾರದು. ನನ್ನಲ್ಲಿ ಮತ್ತು ನನ್ನ ಅಳಿಲು ಸೇವೆಯಲ್ಲಿ ನನ್ನ ದೇಶಬಾಂಧವರಿಗೇನಾದರೂ ವಿಶ್ವಾಸವಿರುವುದಾದರೆ, ಆ ವ್ಯಕ್ತಿ ನನ್ನ ಮತ್ತು ನಾಡಿನ ಜನ್ಮವೈರಿಯೆಂದವರು ಬಗೆದು ಆತನಿಗೆ ತಕ್ಕ ಶಿಕ್ಷೆ ವಿಧಿಸುತ್ತಾರೆಂದು ನಂಬಿದ್ದೇನೆ.''

ತತ್ವಭಂಗಮೂಲವಾದ ಮನೋವೇದನೆಯಿಂದ ಬಳಲಿದ ಮೋತಿಲಾಲರು ಬಹು ಬೇಗನೆ ಮಲಗಿಕೊಂಡರು. ಸ್ವರೂಪರಾಣಿಯವರು ನಟ್ಟಿರುಳಿನ ತನಕ ರಾಮಾಯಣ ಪಾರಾಯಣದಲ್ಲಿ ನಿರತರಾಗಿದ್ದರು. ಆ ಅವೇಳೆಯಲ್ಲಿ ಜೈಲಿನಿಂದ ಬಂದ ಮಗಳನ್ನು ಕಂಡಾಗ ತಾಯಿ ಹರ್ಷಚಕಿತರಾದರು, ಮಾರನೆಯ ಬೆಳಗ್ಗೆ ಮಗಳು ಎದುರು ನಿಂತಾಗ ಮೋತಿಲಾಲರ ಮುಖದ ಮೇಲೆ ನಲ್ಮೆ ಬೇಸರಿಕೆಗಳೆರಡೂ ಪೈಪೋಟಿ ನಡೆಸುತ್ತಿದ್ದಂತೆ ಕಾಣುತ್ತಿತ್ತು.

೧೯೩೧ ರ ಜನವರಿ ೧೨ನೆಯ ದಿನ ಮಗನನ್ನು ನೋಡುವ ಸಲುವಾಗಿ ಮೋತಿಲಾಲರು ನೈನಿ ಸೆರೆಮನೆಗೆ ಹೋದರು. ಜವಾಹರಲಾಲರು ತಂದೆಯನ್ನು ನೋಡಿ ಅಂದಿಗೆ ಎರಡು ತಿಂಗಳಾಗಿತ್ತು. ಆ ಅವಧಿಯಲ್ಲಿ ಮೋತಿಲಾಲರ ದೇಹ ಜೀರ್ಣವಾಗಿತ್ತು; ರೋಗ ವಿಷಮಿಸಿತ್ತು; ಮುಖ ಬಾತುಕೊಂಡು ವಿರೂಪವಾಗಿತ್ತು; ಬೆನ್ನು ಬಾಗಿತ್ತು; ಅತ್ತಿತ್ತ ಚಲಿಸಿದರೆ, ತುಟಿಯಲುಗಿಸಿದರೆ ಹಿಂದೆಯೇ ಉಬ್ಬಸ ಕಾದಿರುತ್ತಿತ್ತು. ಗುರುತು ಸಿಗದಂತೆ ರೂಪಾಂತರ ಹೊಂದಿದ್ದ ತಂದೆಯನ್ನು ನೋಡಿ ಜವಾಹರಲಾಲರ ಹೃದಯ ತಲ್ಲಣಿಸಿತು. ಅಪಶಕುನರೂಪದಲ್ಲಿ ಹಿಂದೆಂದೂ ಕಾಣದ ಹೆದರಿಕೆ ಅವರಲ್ಲಿ ಮೂಡಿತು. ಆರೋಗ್ಯ, ದೃಢಕಾಯಗಳು ತಂದೆಗೆ ಮೀಸಲೆಂದೂ ಸಾವು ಅವರ ಕಡೆ ಇಣುಕಲಾರದೆಂದೂ ಅವರು ಭಾವಿಸಿಕೊಂಡಿದ್ದರು. ಮೋತಿಲಾಲರು ಸಹ ಆಗಾಗ್ಗೆ ಮೃತ್ಯುವನ್ನಣಕಿಸುತ್ತ ತಾವು ನೂರು ವರ್ಷವಾದರೂ ಬದುಕಬಹುದೆಂದು ಹಾರೈಸಿಕೊಂಡಿದ್ದರು. ಸಾವಿನ ದವಡೆಯಲ್ಲಿ ಹೆಣಗಾಡುತ್ತಿದ್ದಾಗಲೂ ತಮ್ಮ ಆರೋಗ್ಯ ಉತ್ತಮಗೊಳ್ಳುತ್ತಿತ್ತೆಂದು ಅವರು ನಂಬಿಕೊಂಡಿದ್ದರು, ಜವಾಹರಲಾಲರು ತಮ್ಮ ಎದೆಯ ತುಡಿತ, ತಲ್ಲಣಗಳನ್ನು ತಂದೆಗೆ ತೋರ್ಪಡಿಸಿಕೊಳ್ಳಲಿಲ್ಲ.

ಪಾಶ್ಚಾತ್ಯರೀತಿಯ ಚಿಕಿತ್ಸೆಯಿಂದ ಗುಣ ಕಾಣಲಿಲ್ಲವಾದ್ದರಿಂದ ಕೆಲವು ದಿನ ಆಯುರ್ವೇದ ಪದ್ಧತಿಯ ಚಿಕಿತ್ಸೆಯನ್ನು ಪ್ರಯೋಗಿಸಿ ನೋಡಬಹುದೆಂದು ಕೆಲವು ಮಿತ್ರರು

ಸಲಹೆ ಮಾಡಿದರು. ಕಲ್ಕತ್ತೆಯ ಸುಪ್ರಸಿದ್ಧ ವೈದ್ಯರಾದ ಕವಿರಾಜ ಶ್ಯಾಮದಾಸ ವಾಚಸ್ಪತಿಗಳು ಶಕ್ತಿ ಮೀರಿ ವೈದ್ಯೋಪಚಾರ ನಡೆಸಿದರು. ಆದರೂ ರೋಗ ವೈದ್ಯರ ಹಿಡಿತಕ್ಕೆ ನಿಲುಕಲಿಲ್ಲ. ಅವಿಶ್ರಾಂತವಾದ ಅವರ ಕಾರ್ಯತತ್ಪರತೆಯೇ ಅದಕ್ಕೆ ಕಾರಣ. ಅವರು ಓಡಾಡಲಾರದಿದ್ದರೂ ಮಲಗಿಕೊಂಡೇ ಕಾಂಗ್ರೆಸ್ಸಿನ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಿದ್ದರು. ವೈದ್ಯರೊಮ್ಮೆ ಆಗ್ರಹಪೂರ್ವಕವಾಗಿ, ಮತ್ತೊಮ್ಮೆ ಪ್ರಾರ್ಥನಾಪೂರ್ವಕವಾಗಿ ಕಾರ್ಯಕಾರಿ ಸಮಿತಿಯ ಸಭೆಗಳಲ್ಲಿ ಮತ್ತು ಚರ್ಚೆಗಳಲ್ಲಿ ಭಾಗವಹಿಸಕೂಡದೆಂದೂ, ಅದರಿಂದ ಚಿಕಿತ್ಸೆ ಅಂಟುವುದಿಲ್ಲವೆಂದೂ ಒತ್ತಿ ಒತ್ತಿ ಹೇಳಿದರು. ಕೊನೆಯತನಕ ಕರ್ಮಯೋಗಿಯಂತೆ ದುಡಿಯಬಲ್ಲಿಸಿದ ಮೋತಿಲಾಲರು ವೈದ್ಯರ ಸಲಹೆಯನ್ನು ನಿರಾಕರಿಸಿದರು. "ನನ್ನ ರಾಷ್ಟ್ರಸೇವೆಗೆ ಏನಾದರೂ ತಡೆಯಾಗುವ ಸಂದರ್ಭವೊದಗಿದರೆ ನಾನು ಜೀವವಿಟ್ಟುಕೊಂಡಿರುವುದಕ್ಕಿಂತ ಸಾಯುವುದೇ ಮೇಲು. ಅದೇ ನನ್ನ ಇಚ್ಛೆ" ಎಂದವರು ವೈದ್ಯರಿಗೆ ಬಿರುಸಾಗಿ ಪ್ರತ್ಯುತ್ತರ ನೀಡಿದರು. ಅವರು ಕೊನೆಯತನಕ ಪತ್ರವ್ಯವಹಾರವನ್ನು ನಿಲ್ಲಿಸಲಿಲ್ಲ. ತಮ್ಮ ಮಗನಿಗೆ ಬರೆದುಕೊಟ್ಟ ಕೊನೆಯ ಪತ್ರವಿದು :

ಅಲಹಾಬಾದ್, ಜನವರಿ ೨೦, ೧೯೩೧

ಪ್ರಿಯ ಜವಾಹರ್,

ಕಮಲಳ ಕಾಗದ ನಿನ್ನೆ ಸಂಜೆ ತಾನೆ ಬಂತು. ಅದನ್ನು ನಿನಗೆ ಬೆಳಗ್ಗೆಯೆ ಕಳುಹಿಸಬೇಕಾಗಿತ್ತು. ಆದರೆ ನಮ್ಮ ಕಾಗದ ಸಿದ್ಧವಾಗಿರಲಿಲ್ಲ. ಜೈಲಿನಲ್ಲಿ ಅವಳನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಾರಂತೆ. ಆ ಬಗ್ಗೆ ಅವಳ ಕಾಗದದಲ್ಲಿ ಸೂಚನೆಯಿದೆ. ಬೇರೆ ಕಡೆಗಳಿಂದಲೂ ಕೇಳಿ ತಿಳಿದುಕೊಂಡಿದ್ದೇನೆ. ರಾಜ್ ತುಂಬ ಮುತುವರ್ಜಿ ವಹಿಸುತ್ತಿದ್ದಾನೆ. ಇಪ್ಪತ್ತೆರಡನೆಯ ತಾರೀಖು ನಾವು ಲಖ್ನೋ ನಗರದಲ್ಲಿ ಮತ್ತೆ ಭೇಟಿಯಾಗುತ್ತೇವೆ. ಇದೇಕಷ್ಟು ತಡವೋ ಕಾಣೆ. ಅದರೆ ನಾನವಳನ್ನು ನೋಡಲಾರೆನೆಂದೇ ತೋರುತ್ತದೆ. ಏಕೆಂದರೆ ನಾನು ಪ್ರಯಾಣ ಮಾಡುವ ಸ್ಥಿತಿಯಲ್ಲಿಲ್ಲ. ಬೆಟ್ಟಿ ಮತ್ತು ಇಂದು ಹೋಗುತ್ತಾರೆ.

ನಿನ್ನೆಯತನಕ ನನ್ನ ಆರೋಗ್ಯ ತೃಪ್ತಿಕರವಾಗಿತ್ತೆಂದೇ ಹೇಳಬಹುದು. ನಿನ್ನೆ ಇದ್ದಕ್ಕಿದ್ದಂತೆ ಏನೋ ತೊಡಕಾಗಿ ರಾತ್ರಿಯೆಲ್ಲ ರೆಪ್ಪೆ ಊರಲಿಲ್ಲ. ಜ್ವರದ ಕಾವೂ ಏರಿತು. ವಾಂತಿಯಲ್ಲಿ ಬಹಳ ರಕ್ತ ಹೋಯಿತು. ಅದರ ಪರಿಣಾಮವಾಗಿ ಈ ದಿನ ತುಂಬ ಆಯಾಸವಾಗಿದೆ. ರಾತ್ರಿಗೆ ಸ್ವಲ್ಪ ಉತ್ತಮವಾದೀತೆಂದು ನಂಬಿದ್ದೇನೆ. ನನ್ನ ತೂಕ ಕೆಲವು ದಿನಗಳಿಂದ ಏಕರೀತಿಯಾಗಿದೆ. ಈ ದಿನ ೧೧೯ ಪೌಂಡು ತೂಗಿದೆ.

ಕವಿರಾಜ ಬಾಬು ಒಂದೆರಡು ದಿನ ಬನಾರಸ್ಸಿಗೆ ಹೋಗಿದ್ದಾರೆ. ನಾಳೆ ಸಂಜೆ ಹಿಂದಿರುಗುತ್ತಾರೆ, ಬಂದನಂತರ ಬೇರೆ ಚಿಕಿತ್ಸೆ ವಿಧಿಸುತ್ತಾರೆ. ಎಲ್ಲವೂ ಅವರ ಪರಿಯನ್ನವಲಂಬಿಸಿದೆ.

ನದಿಯಲ್ಲಿ ದಿನದ ಬಹುಭಾಗ ಕಳೆಯಬೇಕೆಂದೂ, ರಾತ್ರಿ ಮನೆಯಲ್ಲಿ ಮಲಗಬೇಕೆಂದೂ ರು ನನಗೆ ಸಲಹೆ ನೀಡಿದ್ದಾರೆ. ಮಾಳವೀಯಜಿ ಕಾಶಿಯಿಂದ ನನಗೊಂದು ದೋಣಿ ಳಿಸಲಿದ್ದಾರೆ.

ಇಂದು ಚೆನ್ನಾಗಿದ್ದಾಳೆ. ಜಿಂಕೆಯನ್ನು ಕೂಡುತ್ತಿದ್ದ ಮರದ ಮನೆಯನ್ನು ಸರಿಪಡಿಸಿದ್ದಾಳೆ. ಲ್ಲೆಲ್ಲಾ ಅವಳೂ, ಬೆಟ್ಟಿಯೂ ಅಲ್ಲಿಯೇ ಕಾಲಕಳೆಯುತ್ತಾರೆ.

ನಿನ್ನ ತೋಟದಿಂದ ಸಿಹಿ ಬಟಾಣಿ ಬಂದಿದೆ. ಅವುಗಳನ್ನು ಎಚ್ಚರಿಕೆಯಿಂದ ಒಪ್ಪವಾ ದ್ದೇನೆ. ಅವು ಬಾಡುವ ಚಿಹ್ನೆ ಕಾಣುತ್ತಿಲ್ಲ.

ನಿನ್ನ ಪ್ರೀತಿಯ
ತಂದೆ.

೧೯೩೧ನೆಯ ಇಸವಿ ಜನವರಿ ೨೬ನೆಯ ತಾರೀಖು ನಾಡಿನಲ್ಲೆಲ್ಲ ದ್ವಿತೀಯ ಸ್ವಾತಂತ್ರ್ಯ ಚರಣೆಯ ಉತ್ಸವ ನಡೆಯುತ್ತಿತ್ತು. ಮೋತಿಲಾಲರ ರೋಗ ಉಲ್ಬಣಾವಸ್ಥೆ ಮುಟ್ಟಿ ದರಿಂದ ಸರ್ಕಾರ ಜವಾಹರಲಾಲರನ್ನೂ, ರಣಜಿತ್ತರನ್ನೂ ಬಿಡುಗಡೆಮಾಡಿತು. ಇಬ್ಬರೂ ವಾಗಿ ಆನಂದಭವನಕ್ಕೆ ಧಾವಿಸಿದರು. ಜವಾಹರಲಾಲರು ಅತ್ತಿತ್ತ ನೋಡದೆ, ಸ್ವಲ್ಪವೂ ವದೆ ತಂದೆಯ ಕೊಠಡಿಗೆ ಹೋದರು. ಒಂದು ಕ್ಷಣ ಹೊಸ್ತಿಲಲ್ಲಿಯೆ ನಿಂತು ತಂದೆಯ ದೃಷ್ಟಿ ಹರಿಸಿದರು. ತಂದೆಯ ಯಾತನೆಯನ್ನೂ, ಬಾತುಕೊಂಡಿದ್ದ ಮೋರೆಯನ್ನೂ ಡಿದಾಗ ಅವರ ಶರೀರ ಕಂಪಿಸಿತು. ತಂದೆಯನ್ನಾಲಿಂಗಿಸಿಕೊಳ್ಳುವ ಸಲುವಾಗಿ ಅವರು ನ್ನುಗ್ಗಿದರು. ತಂದೆ ತಲೆದಿಂಬಿನಿಂದೆದ್ದು ತೋಳು ನೀಡಿದರು. ತಂದೆಮಕ್ಕಳಿಬ್ಬರೂ ಟಕ್ಕೆನ್ನದೆ ಕೆಲವು ಕ್ಷಣ ಪರಸ್ಪರಾಲಿಂಗನದಲ್ಲಿ ತಲ್ಲೀನರಾಗಿದ್ದರು. ತಂದೆಯ ತೋಳ್ತೆಕ್ಕೆ ದ ಬಿಡಿಸಿಕೊಂಡು ಹಾಸಿಗೆಯಮೇಲೆ ಕುಳಿತಾಗ ಜವಾಹರರ ಕಣ್ಣುಗಳಲ್ಲಿ ನೀರು ಡಿವರಿಯುತ್ತಿತ್ತು. ನಲ್ಮೆ, ಹೆಮ್ಮೆಗಳಿಂದ ತಂದೆಯ ಕಣ್ಣು ಮಿರಮಿರನೆ ಮಿಂಚುತ್ತಿದ್ದುವು.

ಒಂದೆರಡು ದಿನಗಳಲ್ಲಿ ರಣಜಿತ್ ಮತ್ತೆ ಸೆರೆಮನೆಗೆ ಹೋಗಬೇಕಾಯಿತು. ಅದರಿಂದ ತಿಲಾಲರು ರೇಗಾಡಿದರು. ದುಃಖೋನ್ಮತ್ತರಾದರು. ಗಂಟೆಗೊಮ್ಮೆಯಾವರೂ ನ್ನ ರಣಜಿತ್ ಎಲ್ಲಿ? ನನ್ನ ರಣಜಿತ್ ಎಲ್ಲಿ?" ಎಂದು ಕೂಗಾಡುತ್ತಿದ್ದರು. "ನಾಡಿನ ಲೆಮೂಲೆಯ ಜನ ನನ್ನ ದರ್ಶನಕ್ಕಾಗಿ ಬರುತ್ತಿರುವಾಗ, ನನ್ನ ಅಳಿಯ ನನ್ನ ಬಳಿ ರದೆ! ಅಯ್ಯೋ ಅಳಿಯನನ್ನು ನೋಡುವ ಭಾಗ್ಯ ನನಗಿಲ್ಲವೆ?" ಎಂದು ಪರಿತಪಿಸು ರು; ಆಗಾಗ್ಗೆ ಕನವರಿಸುತ್ತಿದ್ದರು. ರೋಗಿಯ ಆ ಉನ್ಮಾದಾವಸ್ಥೆಯಿಂದ ವೈದ್ಯರಿಗೆ ಟವಾಯಿತು. ಅವರ ಸಲಹೆಯ ಮೇರೆಗೆ ಎರಡು ಮೂರು ದಿನಗಳಲ್ಲಿ ಸರಕಾರ ಜಿತ್‌ರನ್ನು ಬಿಡುಗಡೆ ಮಾಡಿತು.

ಜವಾಹರ್‌ಲಾಲ್ ಬಿಡುಗಡೆ ಹೊಂದಿದ ದಿನವೇ ಮಹಾತ್ಮಾಜೀಯವರ ಬಿಡುಗಡೆಯಾಯಿತು. ಮೋತಿಲಾಲರ ದೇಹಸ್ಥಿತಿಯ ವಿಷಯ ತಿಳಿದ ಕೂಡಲೆ ಅವರು ಯರವಾಡ ಸೆರೆಮನೆಯಿಂದ ನೆಟ್ಟಗೆ ಅಲಹಾಬಾದಿಗೆ ಹೋದರು. ಮೋತಿಲಾಲರು ಅವರ ಆಗಮನ ನಿರೀಕ್ಷೆಯಲ್ಲಿ ರಾತ್ರಿ ಬಹಳ ಹೊತ್ತಿನತನಕ ಎಚ್ಚರವಾಗಿದ್ದರು. ಗಾಂಧೀಜಿ ಕೆಲವು ನಿಮಿಷ ಮರಣೋನ್ಮುಖ ರಾಗಿದ್ದ ತಮ್ಮ ಮಿತ್ರರನ್ನು ಎವೆಯಿಕ್ಕದೆ ನೋಡುತ್ತ ನಿಂತಿದ್ದರು. ಅವರ ದರ್ಶನ ಮಾತ್ರ ದಿಂದ ಮೋತಿಲಾಲರಿಗೆ ಆನಂದಸಮಾಧಾನಗಳೊದಗಿದಂತೆ ಕಂಡು ಬಂದಿತು. "ಈ ವಿಷಮ ಪರಿಸ್ಥಿತಿಯಿಂದ ನೀವು ಪಾರಾದರೆ ನಾವು ಖಂಡಿತ ಸ್ವರಾಜ್ಯವನ್ನು ಸಾಧಿಸುತ್ತೇವೆ" ಎಂದು ಗಾಂಧೀಜಿ ನಿಶ್ಚಲಧ್ವನಿಯಿಂದ ನುಡಿದರು. "ಇಲ್ಲ, ಇಲ್ಲ, ಮಹಾತ್ಮಾಜಿ, ನಾನು ಬೇಗ ಹೋಗುತ್ತಿದ್ದೇನೆ. ಸ್ವರಾಜ್ಯವನ್ನು ನೋಡಲು ನಾನಿಲ್ಲಿರುವುದಿಲ್ಲ. ನೀವದನ್ನು ಬೇಗ ಬೇಗ ಪಡೆಯುತ್ತೀರೆಂದು ಮಾತ್ರ ನಾನು ಧೈರ್ಯವಾಗಿ ಹೇಳಬಲ್ಲೆ" ಎಂದು ಮೋತಿಲಾಲರು ಖಚಿತವಾಗಿ ನುಡಿದರು.

ಸೊಸೆ, ಮಡದಿ ಮಕ್ಕಳು ಮೋತಿಲಾಲರ ಹಾಸಿಗೆಯನ್ನು ಬಿಟ್ಟೇಳುಗಲಿಲ್ಲ. ಅವರು ರಾತ್ರಿ ವೇಳೆ ರೋಗಿಯ ಬಳಿ ಸರದಿಯ ಮೇಲೆ ಮಲಗುತ್ತಿದ್ದರು. ತಮಗೆ ನೀರು ಬೇಕಾದರೆ ಮೋತಿಲಾಲರು ತಪ್ಪಿತಸ್ಥರಂತೆ ನೋದುಕೊಂಡು ಕೇಳುತ್ತಿದ್ದರು. ಅಂಥ ಸಮಯದಲ್ಲಿಯೂ ಇತರರಿಗೆ ತೊಂದರೆ ಕೊಡಲು ಅವರಿಗಿಷ್ಟವಿರಲಿಲ್ಲ. ರೋಗದ ಯಾತನೆಯಿಂದ ನರಳುತ್ತಿದ್ದರೂ ಪರರ ಹಿತವನ್ನು ಕುರಿತು ಆಲೋಚಿಸುತ್ತಿದ್ದರು. ಕೊನೆಯತನಕ ಅವರ ಹಾಸ್ಯದ ಚಿಲುಮೆ ಬತ್ತಿರಲಿಲ್ಲ. ಹಲವುಸಾರಿ ಗಾಂಧೀಜಿಯೊಡನೆ ನಗೆ ಹೊನಲಿನಲಿ ತೇಲಾಡುತ್ತಿದ್ದರು; ತಮ್ಮ ಮುಂದಾಗಿ ಪರಲೋಕಕ್ಕೆ ತೆರಳಿ ಕಾದುಕೊಂಡಿರುವುದಾಗಿ ಅವರು ಮತ್ತೆ ಮತ್ತೆ ಹೆಂಡತಿಯನ್ನು ಕಾಡುತ್ತಿದ್ದರು. ಅವರು ಸಾವಿಗೆ ಹೆದರಿದಂತೆ ಕಾಣಲಿಲ್ಲ. ಅವರ ಜೀವನವೇ ಒಂದು ಸಂಗ್ರಾಮಕ್ಷೇತ್ರವಾಗಿತ್ತು. ಹೋರಾಟವಿಲ್ಲದೆ ಅವರು ಸಾವಿಗೂ ದಕ್ಕುವಂತಿರಲಿಲ್ಲ. ಪ್ರಾಪಂಚಿಕ ಸುಖಸಾಧನೆಗಾಗಿ ಜೀವಿಸಬೇಕೆಂದು ಅವರು ಬಯಸಲಿಲ್ಲ. ಯಾವ ಮಹತ್ಕಾರ್ಯ ಸಾಧನೆಗಾಗಿ ತಮ್ಮ ಜೀವನ ಸರ್ವಸ್ವವನ್ನು ಸಮರ್ಪಿಸಿಕೊಂಡಿದ್ದರೊ ಆ ಕಾರ್ಯಸಿದ್ಧಿಯನ್ನು ಕಣ್ಣಾರೆ ನೋಡುವ ಕುತೂಹಲದಿಂದ ಅವರು ಸಾವಿನೊಡನೆ ಹೋರಾಟ ನಡೆಸಿದ್ದರು. ಆದರೆ ಅವರ ಹೋರಾಟ ಸಫಲವಾಗಲಿಲ್ಲ.

ತಮ್ಮ ಆಪ್ತಮಿತ್ರನ, ಧೀರನಾಯಕನ ಮತ್ತು ತ್ಯಾಗವೀರನ ಕೊನೆಯ ಸಂದರ್ಶನಕ್ಕೆ ಜನ ಬೆಳಗಿನಿಂದ ಸಂಜೆಯತನಕ ಬಿಡುವಿಲ್ಲದೆ ಬಂದು ಹೋಗುತ್ತಿದ್ದರು. ಎಷ್ಟು ... ಕೊಂಡರೂ ಕೇಳದೆ ಮೋತಿಲಾಲರು ಆರಾಮಕುರ್ಚಿಯ ಮೇಲೆ ಕುಳಿತು ಬಂದವ ರೊಡನೆಮಾತಾಡುತ್ತಿದ್ದರು. ಕೊನೆಕೊನೆಗೆ ಮಾತೂ ನಿಂತುಹೋಯಿತು. ಮುಖ ಶೂನ್ಯವಾಯಿತು. ಪೂರ್ವಪರಿಚಯದ ಮಿತ್ರರನ್ನು ಗುರುತಿಸಿದಾಗ ಅವರ ಕಣ್ಣಲ್ಲಿ ಆನಂದದಮಿಂಚು ಸೂಸುತ್ತಿತ್ತು; ತಲೆ ಬಾಗುತ್ತಿತ್ತು; ಕೈ ಮುಗಿಯುತ್ತಿದ್ದುವು.

ಗುಂಡು ತಾಗಿದ ಮುದಿಸಿಂಹದಂತೆ ಕಾಣುತ್ತಿದ್ದರು. ಅಂಥ ಸಮಯದಲ್ಲೂ ಅವರು ಮಾತಾಡಲು ಬಾಯಿ ತೆರೆದರೆಂದರೆ ಹಾಸ್ಯದ ಬುಗ್ಗೆ ಚಿಮ್ಮುತ್ತಿತ್ತು. ಅವರು ರಾಜಕೀಯ ಪರಿಸ್ಥಿತಿಯನ್ನು ಗ್ರಹಿಸಲು ಪ್ರಯತ್ನಿಸುತ್ತಿದ್ದಂತೆಯೂ, ಅವರ ತಲೆಯಲ್ಲಿ ಏನೇನೋ ಆಲೋಚನೆಗಳು ತಾರಾಡುತ್ತಿದ್ದಂತೆಯೂ, ಅವುಗಳನ್ನು ಹೊರಗೆಡಹಲು ಪ್ರಯತ್ನಿಸಿದಾಗ ಗಂಟಲು ಕಟ್ಟುತ್ತಿದ್ದಂತೆಯೂ ತೋರುತ್ತಿತ್ತು. ಒಮ್ಮೊಮ್ಮೆ ತಮ್ಮ ಮನೋಭಿಪ್ರಾಯವನ್ನು ಕಾಗದದ ಮೇಲೆ ಬರೆದು ತಿಳಿಸುತ್ತಿದ್ದರು.

ಆಗ ಕಾಂಗ್ರೆಸ್ ಕಾರ್ಯಸಮಿತಿಯ ಸದಸ್ಯರೆಲ್ಲ ಅಲಹಾಬಾದಿನಲ್ಲಿದ್ದರು. ಕೂಡಲೆ ಕಾರ್ಯ ಸಮಿತಿ ಸ್ವರಾಜ್ಯಭವನದಲ್ಲಿ ಸೇರಿ, ಸಂಪೂರ್ಣ ಸ್ವರಾಜ್ಯ ಸಾಧನೆಗಾಗಿ ಮುಂದೆ ಕೈಗೊಳ್ಳಬೇಕಾದ ಕಾರ್ಯಕ್ರಮವನ್ನು ನಿರ್ಧರಿಸಲೆಂದು ಮೋತಿಲಾಲರು ಗಾಂಧೀಜಿಯ ಮುಂದೆ ತಮ್ಮ ಬಯಕೆಯನ್ನು ತೋಡಿಕೊಂಡರು. “ಸ್ವರಾಜ್ಯಭವನದಲ್ಲಿ ಭರತಮಾತೆಯ ಭವಿತವ್ಯನ್ನು ನಿರ್ಧಾರವಾಗಲಿ : ನನ್ನೆದುರಿಗೆ ನನ್ನ ಮಾತೆಯ ಅದೃಷ್ಟ ರೂಪುಗೊಳ್ಳಲಿ ! ತಾಯ್ನಾಡಿನ ಭವಿಷ್ಯವನ್ನು ನಿರ್ಣಯಿಸುವ ಮಹಾ ಪುಣ್ಯಕಾರ್ಯದಲ್ಲಿ ಭಾಗಿಯಾಗುವ ಸುಯೋಗ ನನಗೆ ಲಭಿಸಲಿ. ನಾನು ಸಾಯಬೇಕೆಂಬುದೇ ವಿಧಿಯ ಸಂಕಲ್ಪವಾದರೆ ಸ್ವತಂತ್ರ ಭರತಮಾತೆಯ ತೊಡೆಗಳ ಮೇಲೆ ಸಾಯುವ ಸೌಭಾಗ್ಯವೊದಗಿ ಬರಲಿ. ಬಂಧನಮುಕ್ತಳಾದ ಮಾತೆಯ ಮಡಿಲಿನಲ್ಲಿ ನನ್ನ ಚರಮ ಚಿರನಿದ್ರೆ ಪ್ರಾರಂಭವಾಗಲಿ” ಇವೇ ಅವರ ಕೊನೆಯ ಮಾತುಗಳು.

ದರ್ಶನಾರ್ಥಿಗಳಾಗಿ ಬೇರೆ ಬೇರೆ ಊರುಗಳಿಂದ ಬಂದಿದ್ದ ಜನ ಹೊರಟುಹೋದರು. ಕೆಲವರು ಆಪ್ತೇಷ್ಟರು, ಬಂಧುಗಳು, ಮೂವರು ವೈದ್ಯರು—ಅನ್ಸಾರಿ. ಬಿ. ಸಿ. ರಾಯ್ ಮತ್ತು ಜೀವರಾಜ ಮೆಹ್ತಾ ಮತ್ತು ಗಾಂಧೀಜಿ ಮೋತಿಲಾಲರ ಸಮೀಪದಲ್ಲುಳಿದರು. ಫೆಬ್ರುವರಿ ನಾಲ್ಕನೆಯ ದಿನ ಅವರು ಸ್ವಲ್ಪ ಉತ್ತಮಗೊಂಡಂತೆ ಕಂಡರು. ಎಕ್ಸ್‌ರೇ ಚಿಕಿತ್ಸೆಗಾಗಿ ಅವರನ್ನು ಲಕ್ನೋ ನಗರಕ್ಕೆ ಕರೆದೊಯ್ಯುವುದು ಸೂಕ್ತವೆಂದು ವೈದ್ಯರು ಸಲಹೆಯಿತ್ತರು. ಆ ಸಲಹೆ ಮೋತಿಲಾಲರಿಗೆ ಸರಿಬೀಳಲಿಲ್ಲ. ತಮ್ಮ ಕಾಲ ಸನ್ನಿಹಿತವಾಗಿತ್ತೆಂಬ ವಿಷಯ ಅವರಿಗರಿವಾಗಿತ್ತು. ತಾವೇ ಹೆಮ್ಮೆಯಿಂದ ನಿರ್ಮಿಸಿದ್ದ. ಎದೆಯಾರೆ ಮುದ್ದಿಸಿದ್ದ ಆನಂದಭವನದಲ್ಲಿ ಕೊನೆಯುಸಿರೆಳೆಯಬೇಕೆಂಬುದೇ ಅವರ ಬಯಕೆಯಾಗಿತ್ತು. ವೈದ್ಯರ ಅಭಿಪ್ರಾಯವನ್ನು ಗಾಂಧೀಜಿ ಸಹ ಅನುಮೋದಿಸಿದರು. ಪ್ರತಿವಾದ ಹೂಡಲು ಮೋತಿಲಾಲರ ದೇಹದಲ್ಲಿ ಶಕ್ತಿಯಿರಲಿಲ್ಲ. ಆ ದಿನವೇ ಅವರನ್ನು ಕಾರಿನಲ್ಲಿ ಲಕ್ನೋನಗರಕ್ಕೊಯ್ಯಲಾಯಿತು. ಹೊರಡುವ ಮುನ್ನ ಅವರು ರಾಜೇಂದ್ರ ಪ್ರಸಾದರನ್ನು ಕುರಿತು “ನನ್ನ ಮುಖ ನೋಡಿ, ಎಷ್ಟು ಚೆನ್ನಾಗಿದೆ ! ನಾನೀಗ ಸೌಂದರ್ಯಸ್ಪರ್ಧೆಯಲ್ಲಿ ಭಾಗವಹಿಸುವ ಸಲುವಾಗಿ ಹೋಗುತ್ತಿದ್ದೇನೆ” ಎಂದು ಅಣಕವಾಡಿದರು. ಸುತ್ತಮುತ್ತ ನಿಂತಿದ್ದ ಜನರ ಮುಖದಲ್ಲಿ ನಗೆ ಮಿಂಚು ತಲೆದೋರಿ ಮಾಯ

ವಾಯಿತು. ಮೋತಿಲಾಲರ ಹಿಂದೆ ಗಾಂಧೀಜಿ ಮೊದಲುಗೊಂಡು ದೊಡ್ಡದೊಂದು ಗುಂಪು ಹೊರಟಿತು. ಪ್ರಯಾಣದ ಪ್ರಯಾಸ ಮಾರನೆಯ ಬೆಳಿಗ್ಗೆ ಶಮನವಾಗುತ್ತಿದ್ದಂತೆ ಕಂಡಿತು. ಆದರೆ ಸಂಜೆಯ ವೇಳೆಗೆ ರೋಗ ಮತ್ತೆ ವಿಷಮಿಸಿತು. ಉಸಿರಾಟವೂ ಕಷ್ಟವಾಯಿತು. ಆಮ್ಲಜನಕ ಕೊಟ್ಟರು. ಬಾಹ್ಯಪ್ರಪಂಚದ ಪ್ರಜ್ಞೆಯಿನ್ನೂ ಮಾಯವಾಗಿರಲಿಲ್ಲ.

ಸಂಜೆ ಐದು ಗಂಟೆಯ ವೇಳೆಗೆ ವೈದ್ಯರು ಕೃಷ್ಣಾ ನೆಹರುವನ್ನು ಕರೆದು. ತಂದೆಗೆ ಊರೆಯಾಗಿ ಅವರ ಹಿಂದೆ ಕುಳಿತುಕೊಳ್ಳುವಂತೆ ಹೇಳಿ ಹೊರಗೆ ಹೋದರು. ಕೆಲವು ನಿಮಿಷಗಳಲ್ಲಿ ಮೋತಿಲಾಲರು ಏನನ್ನೋ ಹುಡುಕುತ್ತಿದ್ದಂತೆ ಕಂಡರು. ಮಗಳು ಮುಂದೆ ತಲೆಬಾಗಿ ಏನು ಬೇಕೆಂದು ವಿಚಾರಿಸಿದಳು. ಬಾತುಕೊಂಡಿದ್ದ ತಮ್ಮ ಕೈಗಳ ನಡುವೆ ಪ್ರಯತ್ನಪೂರ್ವಕವಾಗಿ ಮುಖವನ್ನಿರುಕಿಸಿಕೊಂಡರು. ಗುರುತು ಸಿಕ್ಕದಂತೆ ಬಾತುಕೊಂಡಿದ್ದ ತಮ್ಮ ತುಟಿಗಳಿಂದ ಕೊನೆಯ ಮುತ್ತೋ ಎಂಬಂತೆ ಅವಳ ಮುಖದ ಮೇಲೆಲ್ಲ ಮುತ್ತಿಟ್ಟರು. ಅವಳ ಕಣ್ಣೀರು ಕೋಡಿವರಿಯಿತು: ಅಳುವಿನ ಶಬ್ದ ಹೊರಹೊಮ್ಮದ ಹಾಗೆ ಹಲ್ಲುಗಳನ್ನು ಬಿಗಿಹಿಡಿದಳು. ಗದ್ಗದವನ್ನು ತಡೆಯಲಾರದೆ ಅವರ ತೆಕ್ಕೆಯಿಂದ ಬಿಡಿಸಿಕೊಂಡು ಹೋಗಲು ಪ್ರಯತ್ನಿಸಿದಳು. ಅವರ ಸೂಕ್ಷ್ಮಗ್ರಹಣ ಶಕ್ತಿಗೆ ಮಗಳ ಅವಸ್ಥೆ ಅರಿವಾಗಿರಬೇಕು. ಅವಳನ್ನಪ್ಪಿಕೊಂಡು "ನನ್ನ ಮುದ್ದುಮಗಳೇ. ಸದಾ ಧೈರ್ಯದಿಂದಿರು." ಎಂದವರು ತುಟಿಯಲುಗಿಸದೆಯೆ ಕಷ್ಟದಿಂದ ಗೊಣಗುಟ್ಟಿದರು. ಒತ್ತಿಒತ್ತಿ ಬರುತ್ತಿದ್ದ ಅಳುವನ್ನು ತಡೆಯಲಾರದೆ ಅವಳು ಅಲ್ಲಿಂದೆದ್ದು ಮತ್ತೊಂದು ಕೋಣೆಗೆ ಹೋಗಿ, ಬಾಗಿಲು ಹಾಕಿಕೊಂಡು ದುಃಖಶಮನವಾಗುವತನಕ ಅತ್ತಳು.

ಮೋತಿಲಾಲರಿಗೆ ರಾತ್ರಿಯೆಲ್ಲ ನಿದ್ದೆ ಹತ್ತಲಿಲ್ಲ: ಯಾತನೆಯಿಂದ ಅತ್ತಿಂದಿತ್ತ ಹೊರಳಾಡುತ್ತಿದ್ದರು. ನಿರಂತರವಾಗಿ ನರಳುತ್ತಿದ್ದರು. ಬೆಳಕು ಹರಿಯುವತನಕ ಜವಾಹರರು ತಂದೆಯ ಬಳಿ ಕುಳಿತು ಅವರ ಮುಖವನ್ನೇ ದಿಟ್ಟಿಸುತ್ತಿದ್ದರು. ಇದ್ದಕ್ಕಿದ್ದಂತೆ ಯಾತನೆ ಮಾಯವಾಗಿ ಅವರ ಮುಖದ ಮೇಲೆ ಶಾಂತಿ ತೇಲಾಡಿತು. ಅವರಿಗೆ ಗಾಢನಿದ್ರೆ ಬಂದಿರಬಹುದೆಂದು ಜವಾಹರರಿಗೆ ತುಸು ಸಮಾಧಾನವಾಯಿತು. ಆದರೆ ಸ್ವರೂಪರಾಣಿಯವರಿಗೆ ಪರಿಸ್ಥಿತಿ ವೇದ್ಯವಾಗಿ ಚೀರಿದರು. ಅವರ ಚೀರಾಟದಿಂದ ತಂದೆಯ ನಿದ್ರೆ ಭಂಗವಾದೀತೆಂದು ಮಗ ತಾಯಿಯನ್ನೆಚ್ಚರಿಸಿದರು. ಮರುಕ್ಷಣದಲ್ಲಿಯೇ ಅವರಿಗೆ ನಿಜಸ್ಥಿತಿ ತಿಳಿಯಿತು. ತಂದೆಯ ತಲೆಯ ಮೇಲೆ ಕೈಯಾಡಿಸುತ್ತ ಅವರು ಏನನ್ನೂ ದುರುಗುಟ್ಟಿ ನೋಡುತ್ತಿದ್ದರು. ಅವರ ಕಣ್ಣುಗಳಲ್ಲಿ ನೀರು ಮಡುಗಟ್ಟಿ ನಿಂತಿತ್ತು. ಸ್ವರೂಪರಾಣಿಯ ಆರ್ತನಾದದಿಂದ ಮಲಗಿದ್ದವರೆಲ್ಲ ಎಚ್ಚರಗೊಂಡು ಓಡೋಡಿ ಬಂದರು. ಗಾಂಧೀಜಿ ಮೋತಿಲಾಲರ ಬಳಿ ಸಾರಿ ತಲೆಬಾಗಿ ನಿಂತರು. ಕೊನೆಯಸಾರಿ ಬೀಳ್ಕೊಳ್ಳುವಂತೆ. ಭಗವಂತನಿಗೆ ಪ್ರಾರ್ಥನೆ ಸಲ್ಲಿಸುವಂತೆ ಅವರು ತುಸು ಹೊತ್ತು ಕಣ್ಮುಚ್ಚಿದರು. ಅನಂತರ ಅವರು ಸ್ವರೂಪರಾಣಿಯವರ ಬಳಿ ಕುಳಿತು ಅವರ ಭುಜದ ಮೇಲೆ ಕೈಯಿಟ್ಟು "ತಾಯಿ. ಮೋತಿಲಾಲರು ಸತ್ತಿಲ್ಲ: ಅವರು ಚಿರಂಜೀವಿ" ಎಂದು ನುಡಿದರು. ಆದರೂ ಸ್ವರೂಪರಾಣಿಯವರು ನೀರವವಾಗಿ ರೋದಿಸುತ್ತಿದ್ದರು.

# ಟಿಪ್ಪಣಿ

## ಕವಿ ಮತ್ತು ಕೃತಿ :

ದೇ.ಜ.ಗೌ. ಎಂಬ ಕಾವ್ಯನಾಮದಿಂದ ಸಾಹಿತ್ಯ ಜಗತ್ತಿನಲ್ಲಿ ಸುಪ್ರಸಿದ್ಧರಾಗಿರುವ ಡಾ. ದೇ. ಜವರೇಗೌಡರು ಬೆಂಗಳೂರು ಜಿಲ್ಲೆಯ ಚೆನ್ನಪಟ್ಟಣ ತಾಲೂಕಿನ ಚಕ್ಕೆರೆ ಎಂಬ ಊರಿನಲ್ಲಿ ೬-೭-೧೯೧೮ ರಲ್ಲಿ ಜನಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಪದವೀಧರರಾಗಿ. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ. ತಮ್ಮ ಅಧ್ಯಾಪಕ ಜೀವನವನ್ನು ಪ್ರಾರಂಭಿಸಿದ ಇವರು ಮಹಾರಾಜಾ ಕಾಲೇಜಿನ ಕನ್ನಡ ಅಧ್ಯಾಪಕರಾಗಿ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಕಾರ್ಯದರ್ಶಿಯಾಗಿ. ಪರೀಕ್ಷೆಗಳ ಮುಖ್ಯಾಧಿಕಾರಿಯಾಗಿ. ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ. ಈಗ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದಾರೆ. ಇವರು ' ಬೆಂಗಳೂರು ಕೆಂಪೇಗೌಡ '. ' ಗೋಪಾಲಕೃಷ್ಣ ಗೋಖಲೆ ' ಮುಂತಾದ ಜೀವನಚರಿತ್ರೆಗಳನ್ನೂ; ಹರಿಹರಕವಿಯ ' ಗಿರಿಜಾಕಲ್ಯಾಣ'. ಆಂಡಯ್ಯನ ' ಕಬ್ಬಿಗರ ಕಾವ ' ಇವೇ ಮೊದಲಾದ ಸುಮಾರು ೨೦ ಸಂಪಾದಿತ ಗ್ರಂಥಗಳನ್ನೂ; ' ನೆನಪು ಸುರುಳಿ '. ' ಹಮ್ಮು ಬಿಮ್ಮು ' ಮೊದಲಾದ ಭಾಷಾಂತರ ಗ್ರಂಥಗಳನ್ನೂ, ಅನೇಕ ವಿಮರ್ಶಾ ಪ್ರಬಂಧಗಳನ್ನೂ. ಲೇಖನಗಳನ್ನೂ ಬರೆದಿದ್ದಾರೆ. ಪ್ರಸ್ತುತ ಪಠ್ಯ ವಿಷಯವನ್ನು ಅವರ ' ಮೋತಿಲಾಲ್ ನೆಹರು ' ಎಂಬ ಜೀವನಚರಿತ್ರೆಯಿಂದ ಆಯ್ದುಕೊಳ್ಳಲಾಗಿದೆ.

ಜವಾಹರ್‌ಲಾಲ್ ನೆಹರು ಅವರ ತಂದೆಯವರಾದ ಮೋತಿಲಾಲ್ ನೆಹರು ಅವರು ಅತ್ಯಂತ ಶ್ರೀಮಂತ ಕುಟುಂಬವೊಂದರಲ್ಲಿ ಜನಿಸಿ ತಮ್ಮ ಅದ್ಭುತವಾದ ಪ್ರತಿಭೆ ಮತ್ತು ಶಕ್ತಿಗಳ ಫಲವಾಗಿ ಅದ್ವಿತೀಯ ನ್ಯಾಯವಾದಿಗಳೆಂಬ ಕೀರ್ತಿ ಗಳಿಸಿದ್ದರು. ಅವರು ಮಹಾತ್ಮ ಗಾಂಧಿಯವರ ' ಅಸಹಕಾರ ಚಳುವಳಿ 'ಯಲ್ಲಿ ಧುಮುಕಿ ಭಾರತದ ಸ್ವಾತಂತ್ರ್ಯಕ್ಕಾಗಿ ತನು ಮನ ಧನಗಳನ್ನು ತೆತ್ತವರು. ಅವರ ಜೀವನದ ಕಡೆಯ ಭಾಗದ ಒಂದು ದೃಶ್ಯವನ್ನು ಇಲ್ಲಿ ಕೊಡಲಾಗಿದೆ. ಇದು ಅತ್ಯಂತ ಕರುಣಾರಸಪೂರಿತವಾಗಿ ಹೃದಯಸ್ಪರ್ಶಿಯಾಗಿದೆ.

## ಕಠಿಣ ಪದಗಳ ಅರ್ಥ :

ದಂಡಿ—ಅರಬ್ಬಿ ಸಮುದ್ರದ ದಡದಲ್ಲಿರುವ ಒಂದು ಊರು ; ೬-೪-೧೯೩೦ರಂದು ಈ ಸ್ಥಳದಲ್ಲಿ ಗಾಂಧೀಜಿಯವರು ಉಪ್ಪಿನ ಸತ್ಯಾಗ್ರಹವನ್ನು ಮಾಡಿದರು. ತುಣುಕು—ಚೂರು. ಮೀರು—ಉಲ್ಲಂಘಿಸು. ಉರಿದೇಳು—ಉದ್ರಿಕ್ತವಾಗು. ಹರತಾಳ—ಸತ್ಯಾಗ್ರಹ. ಕಾರ್ಮಿಕ—ಕೂಲಿಗಾರ. ಸಹಿಷ್ಣು—ಸಹಿಸಿಕೊಳ್ಳುವವನು. ದೃಢಕಾಯ—ಗಟ್ಟಿಮುಟ್ಟಾದ ಶರೀರ. ವ್ಯವಸ್ಥೆಗೊಳಿಸು—ಕ್ರಮವಾಗಿ ಏರ್ಪಡಿಸು. ನಟ್ಟಿರುಳು—ನಡು+ಇರುಳು (ಕ.ಸ.) ಮಧ್ಯರಾತ್ರಿ. ಹಂಗಾಮಿ—ತಾತ್ಕಾಲಿಕ. ತೊಳಲಾಟ—ಅಲೆದಾಟ. ಅಜಾಗರೂಕತೆ—ಎಚ್ಚರಿಕೆ ಇಲ್ಲದಿರುವಿಕೆ. ಮುಂಗಾರು—ಕಾರಿನ+ಮುಂದು (ಅಂ.ಸ.). ಸಂಧಾನ—ರಾಜಿಯ ಪ್ರಯತ್ನ.

ವಿಫಲ—ವ್ಯರ್ಥವಾದ. ನಿಲುವು—ಅಭಿಪ್ರಾಯ. ಮಣಿ—ಸೋಲು. ಖೈದಿ—ಅಪರಾಧಿ. ದೌತ್ಯ—ಮಧ್ಯಸ್ಥಿಕೆ. ವಿಷಮಿಸು—ಉಲ್ಬಣವಾಗು. ಹೆಚ್ಚಾಗು. ಮೂಡು—ಉಂಟಾಗು. ಕೋಪಾರೂಢ—(ಕೋಪ + ಆರೂಢ)—ಕೋಪಗೊಂಡ. ಜೀರ್ಣವಾಗು—ದುರ್ಬಲವಾಗು. ಸಭಾಭಿಮುಖ—(ಸಭಾ + ಅಭಿಮುಖ)—ಸಭೆಗೆ ಎದುರಾಗಿ. ರೋಗಗ್ರಸ್ತ—ಖಾಯಿಲೆಯಿಂದ ಕೂಡಿದ. ಕಿವಿದೆರೆ—ಕಿವಿಯ+ತೆರೆ (ತ.ಸಂ.). ಕೌಟುಂಬಿಕ—ಕುಟುಂಬಕ್ಕೆ ಸಂಬಂಧಿಸಿದ : ಸಂಸಾರಕ್ಕೆ ಸೇರಿದ. ನುಚ್ಚುನೂರಾಗು—ನಾಶವಾಗು : ಹಾಳಾಗು. ಮಂಜುಗುರುಳು—ಬಿಳಿದಾದ ತಲೆಗೂದಲು. ಹವಣಿಸು—ಪ್ರಯತ್ನಿಸು. ಹುರುಪು—ಉತ್ಸಾಹ. ಅವಿಶ್ರಾಂತ—ಬಿಡುವಿಲ್ಲದ : ವಿಶ್ರಾಂತಿಯಿಲ್ಲದ. ಬಿರುಬು—ಜೋರು. ಪಾರು—ಎಲ್ಲೆ. ನಭೋಮಂಡಲ—ಆಕಾಶ. ತೆರುಗಡೆ—ಕೊಡುವುದು. ಅನೂಹ್ಯ—ಊಹಿಸಲು ಸಾಧ್ಯವಲ್ಲದ. ಎಸಗು—ಮಾಡು. ಆಜನ್ಮವೈರಿ—ಹುಟ್ಟಿದಂದಿನಿಂದಲೂ ವೈರಿ. ನಲ್ಮೆ—ಪ್ರೀತಿ. ಅವಧಿ—ಕಾಲ. ಹೆಣಗಾಡು—ಹೋರಾಡು. ತುಡಿತ—ಸೆಳೆತ. ತಲ್ಲಣ—ಗಾಬರಿ. ಪಾಶ್ಚಾತ್ಯ—ಪಶ್ಚಿಮ ದೇಶಗಳ. ಆಗ್ರಹಪೂರ್ವಕ—ಬಲವಂತವಾಗಿ. ಕಣ್ಣು ಊರು—ಕಣ್ಣು ಮುಚ್ಚು. ಒಪ್ಪವಾಗಿ—ಜೋಪಾನವಾಗಿ. ತಳುವು—ತಡಮಾಡು: ನಿಧಾನಮಾಡು. ಕಂಪಿಸು—ನಡುಗು. ತೋಳ್ತೆಕ್ಕೆ—ಆಲಿಂಗನ. ಪರಿತಪಿಸು—ಸಂಕಟಪಡು. ಎವೆಯಿಕ್ಕದೆ—ಕಣ್ಣು ಮುಚ್ಚದೆ ; ರೆಪ್ಪೆ ಬಡಿಯದೆ. ಅಣಕ—ಹಾಸ್ಯ. ಊರೆ—ಆಶ್ರಯ. ವೇದ್ಯವಾಗು—ಅರಿವಾಗು ; ಗೊತ್ತಾಗು. ಆರ್ತನಾದ—ದುಃಖದ ಧ್ವನಿ. ನೀರವ—ಮೌನ. ಮಿಡಿ—ಸುರಿಸು. ಮುಪ್ಪಡಸು—ಮುದಿತನ ಪ್ರಾಪ್ತವಾಗು ; ವಯಸ್ಸಾಗು. ತರಗಾಗು—ಒಣಗು ; ಕೃಶವಾಗು.

ಪ್ರಶ್ನೆಗಳು :

೧. ಮೋತಿಲಾಲರ ಕುಟುಂಬ ವರ್ಗದವರು ಸತ್ಯಾಗ್ರಹದಲ್ಲಿ ವಹಿಸಿದ ಪಾತ್ರವನ್ನು ವಿವರಿಸಿ.

೨. ನೈನಿ ಸೆರೆಮನೆಯಿಂದ ಮೋತಿಲಾಲರು ತಮ್ಮ ಕಿರಿಯ ಮಗಳಿಗೆ ಬರೆದ ಪತ್ರದ ಸಾರಾಂಶವನ್ನೂ ಮತ್ತು ಸ್ವಾರಸ್ಯವನ್ನೂ ಬರೆಯಿರಿ.

೩. ನೆಹರುಗಳಿಬ್ಬರು ಯರವಾಡ ಜೈಲಿನಲ್ಲಿ ಗಾಂಧೀಜಿಯವರನ್ನು ಭೇಟಿಮಾಡಿದ ಪ್ರಸಂಗವನ್ನು, ಅದರ ಹಿನ್ನೆಲೆ ಮತ್ತು ಫಲಿತಾಂಶಗಳೊಡನೆ ವಿವರಿಸಿ.

೪. ಕೃಷ್ಣಾ ನೆಹರು ಅವರ ಬಂಧನ ಮತ್ತು ಬಿಡುಗಡೆಗಳಿಂದ ಮೋತಿಲಾಲರ ಮನಸ್ಸಿನಲ್ಲಾದ ಪರಿಣಾಮವೇನು ?

೫. ಮೋತಿಲಾಲರು ಜವಾಹರರಿಗೆ ಬರೆದ ಕಡೆಯ ಪತ್ರದ ಸಾರಾಂಶವನ್ನು ಸಂಗ್ರಹಿಸಿ ಬರೆಯಿರಿ.

೬. ಮೋತಿಲಾಲರ ಕಡೆಗಾಲದ ಜೀವನ ಚಿತ್ರಣವನ್ನು ಸಂಗ್ರಹಿಸಿ ಬರೆಯಿರಿ.
೭. ಜೈಲಿನಿಂದ ಹಿಂದಿರುಗಿದ ಜವಾಹರರು ರುಗ್ಣಶಯ್ಯೆಯಲ್ಲಿದ್ದ ತಮ್ಮ ತಂದೆಯನ್ನು ಕಂಡ ಸಂದರ್ಭವನ್ನು ನಿಮ್ಮ ಸ್ವಂತ ಮಾತುಗಳಲ್ಲಿ ಬರೆಯಿರಿ.

ಇವುಗಳನ್ನು ಸಂದರ್ಭಸಹಿತ ಸ್ಪಷ್ಟೀಕರಿಸಿ :

೧. 'ಮತ್ತೆ ನಾವಿಬ್ಬರೂ ಜೊತೆಗೂಡುವಂತಾಯಿತು.'
೨. 'ಇದು ಹೋಟಲಲ್ಲ. ಸೆರೆಮನೆ.'
೩. 'ನಾನು ದುರ್ಬಲ ವ್ಯಕ್ತಿಯಂತೆ ಮನೆಯ ಮೂಲೆಯಲ್ಲಿ ತೆಪ್ಪಗಿರಲಾರೆ.'
೪. 'ಈ ದುಡಿಮೆಗೆ ಅವರು ಚಕ್ರಬಡ್ಡಿ ತೆರಬೇಕಾಯಿತು.'
೫. 'ನನ್ನ ರಾಷ್ಟ್ರಸೇವೆಗೆ ಏನಾದರೂ ತಡೆಯಾಗುವ ಸಂದರ್ಭವೊದಗಿದರೆ ನಾನು ಜೀವವಿಟ್ಟುಕೊಂಡಿರುವುದಕ್ಕಿಂತ ಸಾಯುವುದೇ ಮೇಲು.'
೬. 'ಇಂದಿನ ವಿಷಮ ಪರಿಸ್ಥಿತಿಯಿಂದ ನೀವು ಪಾರಾದರೆ ನಾವು ಖಂಡಿತ ಸ್ವರಾಜ್ಯ ಸಾಧಿಸುತ್ತೇವೆ.'
೭. 'ಸ್ವರಾಜ್ಯ ಭವನದಲ್ಲಿ ಭರತಮಾತೆಯ ಭವಿತವ್ಯ ನಿರ್ಧಾರವಾಗಲಿ.'
೮. 'ಬಂಧನಮುಕ್ತಳಾದ ಮಾತೆಯ ಮಡಿಲಿನಲ್ಲಿ ನನ್ನ ಚರಮ ಚಿರನಿದ್ರೆ ಪ್ರಾರಂಭವಾಗಲಿ.'
೯. 'ನಾನೀಗ ಸೌಂದರ್ಯ ಸ್ಪರ್ಧೆಯಲ್ಲಿ ಭಾಗವಹಿಸುವ ಸಲುವಾಗಿ ಹೋಗುತ್ತಿದ್ದೇನೆ.'
೧೦. 'ತಾಯಿ, ಮೋತಿಲಾಲರು ಸತ್ತಿಲ್ಲ : ಅವರು ಚಿರಂಜೀವಿ.'

ಇಲ್ಲಿರುವ ಪದಗಳನ್ನು ಬಿಡಿಸಿ ಸಂಧಿಯ ಹೆಸರನ್ನು ಹೇಳಿ :

ಮುಖ್ಯಾಧಿಕಾರಿ ; ಅತ್ಯವಶ್ಯ : ಪುತ್ರಾಗಮನ ; ವೈದ್ಯೋಪಚಾರ ; ಮರಣೋನ್ಮುಖ ; ದುಃಖಾಕ್ರಾಂತ.

ಈ ಮಾತುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಪ್ರಯೋಗಿಸಿ :

ಮಾತುಕತೆ ; ಸಂದಾಯವಾಗು : ಹದಗೆಡು ; ಒಡಂಬಡು ; ಅಣಿಮಾಡು ; ಬಯಲಾಗು ; ಜೀರ್ಣವಾಗು ; ವಿಷಮಿಸು : ಹೆಣಗಾಡು : ಕುತೂಹಲ: ತಲೆದೋರು; ತರಗಾಗು ; ರುಗ್ಣಶಯ್ಯೆ.

ಇವುಗಳ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ :

ಶಕ್ತಿ ; ವ್ಯವಸ್ಥೆ ; ಅವಿಶ್ರಾಂತ ; ಆರೋಗ್ಯ ; ಕಾರ್ಯ ; ಹಿತ ; ಸಫಲ ; ವೇಳೆ ; ಶಾಂತಿ,

## ಲಘು ಟಿಪ್ಪಣಿ

**ಅನ್ಸಾರಿ** :—೧೮೮೦—೧೯೩೬ ಸಂಯುಕ್ತ ಪ್ರಾಂತದ ವೈದ್ಯರು: ಕಾಂಗ್ರೆ ಕಾರ್ಯಕರ್ತರಲ್ಲಿ ಒಬ್ಬರು : ೧೯೨೭ ರಲ್ಲಿ ಕಾಂಗ್ರೆಸ್ ಅಧ್ಯಕ್ಷರಾಗಿದ್ದರು.

**ಸುಭಾಷ್** :—ಅಜಾದ್ ಹಿಂದ್ ಸೇನೆಯ ಜನ್ಮದಾತರು. ಸ್ವಾತಂತ್ರ್ಯಕ್ಕಾ ಹೋರಾಡಿದರು. ೧೯೪೦ ರಲ್ಲಿ ಹಿಂದುಸ್ಥಾನದಿಂದ ತಲೆಮರೆಸಿಕೊಂಡು ಹೋದರು. ೧೯೪೨ರಲ್ಲಿ ಜರ್ಮನಿಯ ಹಿಟ್ಲರ್‌ನನ್ನು ಸಂಧಿಸಿ ಮಾತನಾಡಿದರು : ಜಪಾನಿಗೆ ಹೋದರು : ಸ್ವರಾಜ್ಯಕ್ಕಾ ಹೋರಾಡಿದರು ; ೧೯೪೫ ರಲ್ಲಿ ವಿಮಾನಾಪಘಾತದಲ್ಲಿ ಮಡಿದುದಾಗಿ ತಿಳಿದುಬರುತ್ತದೆ.

**ಸಪ್ರು** :—೧೮೭೫—೧೯೪೯. ಸಂಯುಕ್ತ ಪ್ರಾಂತಗಳ ಸುಪ್ರಸಿದ್ಧ ವಕೀಲರು. ಅವ ಕೇಂದ್ರ ಶಾಸನಸಭೆಯ ಸದಸ್ಯರು.

***

# ನಮ್ಮ ಶಿಕ್ಷಣದಲ್ಲಿ ಕನ್ನಡ

—ಡಿ.ವಿ.ಜಿ.

ನಮ್ಮ ದೇಶದಲ್ಲಿ ಈಗ ರೂಢಿಯಲ್ಲಿರುವ ವಿದ್ಯಾಭ್ಯಾಸ ಕ್ರಮದಲ್ಲಿ ಇಂಗ್ಲಿಷು ಭಾಷೆಗಿರುವ ಪ್ರಾಧಾನ್ಯದ ಕಾರಣದಿಂದ ವಿದ್ಯಾರ್ಥಿಗಳಿಗೆ ಆಯುಸ್ಸಿನ ವ್ಯರ್ಥವ್ಯಯವೂ, ಶಕ್ತಿಯ ವ್ಯರ್ಥವ್ಯಯವೂ ಅತಿಯಾಗಿ ಆಗುತ್ತಿವೆ. ನಮ್ಮ ವಿದ್ಯಾರ್ಥಿಗಳಿಗೆ ಈಗ ಇರುವ ಕಷ್ಟವು ಎರಡು ಬಗೆಯದು : ಒಂದು ವಿಷಯನವೀನತೆಯಿಂದ ಆಗಿರುವುದು : ಇನ್ನೊಂದು ಭಾಷಾನವೀನತೆಯಿಂದ ಆಗಿರುವುದು. ಅವರು ಹೊಸ ವಿಷಯವನ್ನು ತಿಳಿದುಕೊಳ್ಳುವುದಕ್ಕಾಗಿ ಹೊಸ ಭಾಷೆಯನ್ನು ಕಲಿತುಕೊಳ್ಳಬೇಕಾಗಿದೆ. ಆದರೆ ಈ ಹೊಸ ಭಾಷೆಯನ್ನು ಕಲಿತುಕೊಳ್ಳುವುದಕ್ಕೆ ಬೇಕಾಗಿರುವ ಕಾಲವ್ಯಯ, ಶಕ್ತಿವ್ಯಯಗಳಲ್ಲಿ "ವಿಷಯ"ವನ್ನು ತಿಳಿದುಕೊಳ್ಳುವುದಕ್ಕೆ ಬೇಕಾದ ಕಾಲವೂ, ಶಕ್ತಿಯೂ ಅವರಿಗೆ ಉಳಿಯದಂತಾಗಿದೆ. ಜ್ಞಾನಕ್ಕೆ ಕೊಡಬೇಕಾದ ಗಮನವನ್ನು ಈಗ ಅವರು ಜ್ಞಾನದ ಹೊದಿಕೆಗೆ ಕೊಡಬೇಕಾಗಿ ಬಂದಿದೆ : ಕೊಬರಿಗೆ ಸಲ್ಲಬೇಕಾದ ಗಮನವನ್ನು ಕರಟಕ್ಕೆ ಸಲ್ಲಿಸಬೇಕಾಗಿದೆ. ಇದುವರೆಗೂ ನಮ್ಮ ದೇಶದಲ್ಲಿ ಈ ಕಷ್ಟವು ಅನಿವಾರ್ಯವಾಗಿತ್ತು. ಈಗಲಾದರೋ ಇಂಗ್ಲಿಷು ಭಾಷೆಯೊಳಗಿನ ತಿರುಳು ನಮ್ಮ ಭಾಷೆಯಲ್ಲಿಯೇ ದೊರೆಯುವಂತಾಗಿದೆ. ಐರೋಪ್ಯಭಾಷೆಗಳಲ್ಲಿಯ ಸಾರಭೂತವಾದ ವಿಷಯಗಳನ್ನೂ, ಶ್ರೇಷ್ಠ ಗ್ರಂಥಗಳನ್ನೂ ಕನ್ನಡದಲ್ಲಿ ರೂಪಾಂತರಗೊಳಿಸಿ ಕೊಡಲು ವಿದ್ವಾಂಸರು ಈಗ ಸಿದ್ಧರಾಗುತ್ತಲಿದ್ದಾರೆ. ಆಧುನಿಕ ವಿಜ್ಞಾನಶಾಸ್ತ್ರಗಳನ್ನೂ, ಸಮಾಜಶಾಸ್ತ್ರಗಳನ್ನೂ ಕನ್ನಡದಲ್ಲಿ ಪ್ರತಿಪಾದಿಸಿ ಹೇಳುವುದು ಈಗ ಸಾಧ್ಯವೆಂದು ಸಾಕ್ಷಾತ್ತಾಗಿ ತೋರುತ್ತಿದೆ. ನಮ್ಮ ವಿದ್ಯಾರ್ಥಿಗಳ ಮೇಲಿರುವ ಇಂಗ್ಲಿಷಿನ ಹೊರೆಯನ್ನು ಇಳಿಸಲು ಈಗ ಸಕಾಲವಾಗಿದೆ. ಇಂಗ್ಲಿಷೆಲ್ಲವನ್ನೂ ಒಂದೇ ಬಾರಿ ಸ್ಥಾನಭ್ರಷ್ಟಮಾಡಿ ತೊಲಗಿಸಬೇಕೆಂದು ನಾನು ಸೂಚಿಸತಕ್ಕವನಲ್ಲ. ಇಂಗ್ಲಿಷಿನಿಂದ ನಮಗೆ ಇನ್ನೂ ಆಗಬೇಕಾಗಿರುವ ಉಪಕಾರಗಳು ಅಪರಿಮಿತವಾಗಿವೆ. ಇಂಗ್ಲಿಷನ್ನು ನಮ್ಮ ವಿದ್ಯಾರ್ಥಿಗಳು

ಓದುವುದೂ—ಚೆನ್ನಾಗಿ ಓದುವುದೂ, ಹೆಚ್ಚು ಹೆಚ್ಚುಮಂದಿ ಓದುವುದೂ—ನಮ್ಮ ದೇಶದ ಏಳಿಗೆಗೂ, ಯಶಸ್ಸಿಗೂ, ಅವಶ್ಯವಾಗಿದೆ. ಹೀಗಿದ್ದರೂ ನಮ್ಮ ವಿದ್ಯಾಜೀವನದಲ್ಲಿ ಅಗ್ರ ಸ್ಥಾನವನ್ನು ಪಡೆಯಬೇಕಾದದ್ದು ಕನ್ನಡವೇ ಹೊರತು ಮತ್ತೊಂದು ಭಾಷೆಯಲ್ಲ. ಎಷ್ಟೆಷ್ಟು ವಿಷಯಗಳನ್ನು ನಾವು ಕನ್ನಡದಲ್ಲಿ ಬೋಧಿಸುತ್ತ ಹೋಗುವೆವೋ ಅಷ್ಟಷ್ಟು ವಿಧಗಳಲ್ಲಿ ನಮ್ಮ ಭಾಷೆಯು ಬೆಳೆಯುವುದು ; ಮತ್ತು ನಮ್ಮ ಭಾಷೆಯ ಉಪಯೋಗವು ಎಷ್ಟೆಷ್ಟು ಸ್ವತಂತ್ರವಾಗಿ ನಮ್ಮ ಜನರಲ್ಲಿ ಹರಡುವುದೋ ಜ್ಞಾನಪ್ರಕಾಶವು ಅವರಲ್ಲಿ ಅಷ್ಟಷ್ಟು ವಿಸ್ತಾರಪಡುವುದು. ನಮ್ಮ ಜನರು ಆಧುನಿಕ ಪ್ರಪಂಚದ ವಿಷಯಗಳನ್ನು ತಿಳಿದುಕೊಳ್ಳುವುದು ಸುಲಭವಾಗಿ ಅವರು ಅಭ್ಯುದಯಮಾರ್ಗದಲ್ಲಿ ಬೇಗಬೇಗನೆ ಹೆಜ್ಜೆಯಿಡುವಂತಾಗಬೇಕಾದರೆ ಅವರಿಗೆ ವಿಷಯ ಬೋಧನೆಮಾಡುವ ಭಾಷೆಯು ಅವರ ಸ್ವಂತ ಭಾಷೆಯೇ ಆಗಿರಬೇಕು. ಇದು ಸ್ವಯಂ ವ್ಯಕ್ತವಾಗಿರುವ ಸಿದ್ಧಾಂತ. ಹೀಗಿದ್ದರೂ ಇದನ್ನು ಅನುಸರಿಸಿ ನಮ್ಮ ವಿದ್ಯಾಭ್ಯಾಸಕ್ರಮವನ್ನು ಬದಲಾಯಿಸತಕ್ಕ ಯೋಚನೆ ಮಾತ್ರ ಏಕೋ ಕಷ್ಟಕರವಾಗಿ ಕಾಣುತ್ತಿದೆ. ಈ ಕಷ್ಟಕ್ಕೆ ಕನ್ನಡವು ಅಶಕ್ತಭಾಷೆಯೆಂಬ ಸಾಮಾನ್ಯ ಭ್ರಾಂತಿಯೆ ಮುಖ್ಯಕಾರಣವಾಗಿರಬಹುದೆಂದು ನಾನು ತಿಳಿದುಕೊಂಡಿದ್ದೇನೆ. ಈ ಭ್ರಾಂತಿಯನ್ನು ತೊರೆದು ಕನ್ನಡದಲ್ಲಿಯೂ ಜೀವಶಕ್ತಿಯು ಅಡಗಿದೆ; ಈ ಗೂಢವಾಗಿರುವ ಶಕ್ತಿಯನ್ನು ಪ್ರಕಾಶಪಡಿಸತಕ್ಕ ಜನರು ಸಿದ್ಧರಾಗಿದ್ದಾರೆ. ಎಂದು ನಂಬಲು ಈಗ ಕಾರಣಗಳು ಸಾಕ್ಷಾತ್ತಾಗಿವೆ. ನಮ್ಮ ಸರ್ಕಾರದವರೂ, ವಿಶ್ವವಿದ್ಯಾನಿಲಯದವರೂ, ವಿದ್ಯಾಪ್ರಚಾರದ ಇಲಾಖೆಯವರೂ ಮತ್ತು ಮಹಾಜನರೂ ಸಹ ಕನ್ನಡದ ಈಗಿನ ನವಶಕ್ತಿಯನ್ನು ಕಟಾಕ್ಷಿಸಿ ನೋಡಿ ಅದರಿಂದ ನಮ್ಮ ಜನರಿಗೆ ಉಂಟಾಗಬಹುದಾದ ಶುಭಪರಂಪರೆಗಳನ್ನು ಮನಸಾರ ಅಂಗೀಕರಿಸಿ ನಮ್ಮ ವಿದ್ಯಾಭ್ಯಾಸಕ್ರಮದಲ್ಲೂ, ಸಾರ್ವಜನಿಕ ವ್ಯವಹಾರಗಳಲ್ಲೂ ಇಂಗ್ಲೀಷಿನ ದಬ್ಬಾಳಿಕೆಯನ್ನು ಕಡಮೆಯಾಗಿಸಿ ಕನ್ನಡಕ್ಕೆ ಸಹಜವಾಗಿ ಸಲ್ಲಬೇಕಾದ ಗಣ ಗೌರವಗಳು ಅದಕ್ಕೆ ದೊರೆಯುವಂತೆ ಮಾಡಲು ಇದು ತಕ್ಕ ಕಾಲ.

## ಟಿಪ್ಪಣಿ

**ಕವಿ ಮತ್ತು ಕೃತಿ :**

ಈ ಭಾಗವನ್ನು ಶ್ರೀಮಾನ್ ಡಿ. ವಿ. ಜಿ. ಯವರ 'ಸಾಹಿತ್ಯ ಶಕ್ತಿ' ಎಂಬ ಪುಸ್ತಕದಿಂದ ಆಯ್ದುಕೊಂಡಿದೆ. ಕಳೆದ ಅರ್ಧ ಶತಮಾನಕ್ಕಿಂತಲೂ ಹೆಚ್ಚು ಕಾಲದಿಂದಲೂ ಆಧುನಿಕ ಕನ್ನಡ ಸಾಹಿತ್ಯ ನಿರ್ಮಾಣ ಕಾರ್ಯದಲ್ಲಿ ದುಡಿಯುತ್ತ ಬಂದಿರುವ ಶ್ರೀಮಾನ್ ಡಿ. ವಿ. ಗುಂಡಪ್ಪನವರು ಕ್ರಿ. ಶ. ೧೮೮೭ರಲ್ಲಿ ಜನಿಸಿದರು. ಕನ್ನಡದಷ್ಟೇ ಇಂಗ್ಲಿಷಿನಲ್ಲಿಯೂ ತಜ್ಞ ರಾಗಿರುವ ಶ್ರೀ ಡಿ. ವಿ. ಜಿ. ಯವರು ಸಾಹಿತ್ಯಜಗತ್ತಿನಷ್ಟೇ ರಾಜಕೀಯ ರಂಗದಲ್ಲಿಯೂ, ವೃತ್ತ ಪತ್ರಿಕಾ ಪ್ರಪಂಚದಲ್ಲಿಯೂ ಹೆಸರಾಂತವರು. 'ಕರ್ಣಾಟಕ' ಎಂಬ ಇಂಗ್ಲಿಷ್ ಮಾಸಪತ್ರಿಕೆಯನ್ನೂ 'ಅರ್ಥಸಾಧಕ ಪತ್ರಿಕೆ' ಎಂಬ ಕನ್ನಡ ನಿಯತಕಾಲಿಕವನ್ನೂ ಅವರು ಹಲವು ವರ

ಸುತ್ತಿದ್ದರು. ಇವರ 'ವಸಂತಕುಸುಮಾಂಜಲಿ', 'ನಿವೇದಿತ', 'ಉಮರನ ಒಸಗೆ' ...ದಿ ಕವನಗ್ರಂಥಗಳೂ; 'ದಿವಾನ್ ರಂಗಾಚಾರ್ಲು', 'ಗೋಪಾಲಕೃಷ್ಣಗೋಖಲೆ'; ...ದಾಭಾಯಿ ನವರೋಜಿ' ಮೊದಲಾದ ಜೀವನಚರಿತ್ರೆಗಳೂ; 'ಜೀವನಸೌಂದರ್ಯ ...ತ್ತು ಸಾಹಿತ್ಯ', 'ಶಕ್ತಿ'; ಮೊದಲಾದ ಕಾವ್ಯಮೀಮಾಂಸೆಯ ಗ್ರಂಥಗಳೂ; 'ವಿದ್ಯಾರಣ್ಯ ...ಜಯ', 'ಕನಕಾಲುಕ', 'ಮ್ಯಾಕ್‌ಬೆತ್' ಮೊದಲಾದ ನಾಟಕಗಳೂ; 'ವಿದ್ಯಾರಣ್ಯರ ...ಕಾಲೀನರು' ಮೊದಲಾದ ವೈಚಾರಿಕ ಗ್ರಂಥಗಳೂ, 'ವೃತ್ತಪತ್ರಿಕೆ', 'ರಾಜ್ಯಶಾಸ್ತ್ರ' ...ದಲಾದ ಶಾಸ್ತ್ರೀಯ ಗ್ರಂಥಗಳೂ ಇವರ ಬಹುಮುಖಪ್ರತಿಭೆಗೆ ಸಾಕ್ಷಿಯಾಗಿವೆ. ಇವರ ...ಂಕುತಿಮ್ಮನ ಕಗ್ಗ' ಎಂಬುದು ಅತ್ಯಮೂಲ್ಯವಾದ ಒಂದು ಗ್ರಂಥ. ಇವರು ಭಗವ ...ತೆಯ ಮೇಲೆ ಬರೆದಿರುವ ಮಹಾಗ್ರಂಥಕ್ಕೆ ಕೇಂದ್ರ ಅಕಡೆಮಿಯ ಬಹುಮಾನ ಬಂದಿದೆ. ...ರ್ನಾಟಕ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳು ಇವರಿಗೆ ಡಿಲಿಟ್. ಪದವಿಯನ್ನಿತ್ತು ...ನ್ಮಾನಿಸಿವೆ.

...ಡಿ. ವಿ. ಜಿ. ಯವರ ಬರೆಹ ಪ್ರೌಢವಾದುದು, ತುಂಬು ಗಂಭೀರವಾದುದು. ಅವರ ...ತಿಪಾದನಾರೀತಿ ಸುಸ್ಪಷ್ಟವಾದುದು. ಶಿಕ್ಷಣದಲ್ಲಿ ಕನ್ನಡಮಾಧ್ಯಮವನ್ನು ಕುರಿತು ಅವರು ...) ಹೇಳಿರುವ ಮಾತುಗಳು ನೇರವಾಗಿವೆ; ನಿಸ್ಸಂದಿಗ್ಧವಾಗಿವೆ.

...ಷ್ಟಪದಗಳ ಅರ್ಥ :

...ವಿದ್ಯಾ+ಅಭ್ಯಾಸ—ವಿದ್ಯಾಭ್ಯಾಸ (ಸ. ದೀ. ಸಂ.) ಪ್ರಾಧಾನ್ಯ—ಮುಖ್ಯ. ಅನಿವಾರ್ಯ— ...ಯಲಾಗದುದು, ನಿವಾರಿಸಲಾಗದುದು. ಐರೋಪ್ಯ ಭಾಷೆ—ಯೂರೋಪ್‌ದೇಶಗಳ ಭಾಷೆ. ...ನಭ್ರಷ್ಟಮಾಡಿ—ಸ್ಥಾನದಿಂದ ಹೊರಗೆ ಹಾಕಿ. ವ್ಯರ್ಥವ್ಯಯ—ಅನಾವಶ್ಯಕವಾದ ವೆಚ್ಚ. ...ನತೆ—ಹೊಸತನ. ಅಪರಿಮಿತ—ಬಹಳ. ಅಭ್ಯುದಯ—ಏಳಿಗೆ. ಸಿದ್ಧಾಂತ—ತೀರ್ಮಾನ; ...ಯ. ಕಟಾಕ್ಷಿಸಿ ನೋಡಿ—ಪ್ರೀತಿಯಿಂದ ನೋಡಿ.

...ಶ್ನೆಗಳು :

1. ನಮ್ಮ ದೇಶದ ಶಿಕ್ಷಣಕ್ರಮದಲ್ಲಿ ಇಂಗ್ಲಿಷ್ ಭಾಷಾ ಮಾಧ್ಯಮದಿಂದ ಆಗಿರುವ ...ಯೇನು ?
2. ನಮ್ಮ ಶಿಕ್ಷಣಕ್ರಮದಲ್ಲಿ ಇಂಗ್ಲಿಷಿನ ಸ್ಥಾನದ ಬಗ್ಗೆ ಲೇಖಕರ ಅಭಿಪ್ರಾಯವೇನು ? ...ತೃಭಾಷೆಯ ಮಹತ್ವವೇನು ?
... ಕನ್ನಡ ಭಾಷೆಯನ್ನು ಬೆಳೆಸಲು ಲೇಖಕರು ಕೊಟ್ಟಿರುವ ಸೂಚನೆಗಳೇನು ?
... 'ಕೊಬರಿಗೆ ಸಲ್ಲಬೇಕಾದ ಗಮನವನ್ನು ಕರಟಕ್ಕೆ ಸಲ್ಲಿಸಬೇಕಾಗಿದೆ'. ಈ ಮಾತಿನ ...ಪ್ರಾಯವೇನು ?

ವ್ಯಾಕರಣಾಂಶ :

ಅವ್ಯಯ :—ಲಿಂಗ. ವಚನ. ವಿಭಕ್ತಿಗಳಿಂದ ರೂಪಬದಲಾವಣೆಯನ್ನು ಹೊಂದ ಏಕರೂಪವಾಗಿರುವ ಶಬ್ದವು ಅವ್ಯಯವೆನಿಸುವುದು.

ಅವ್ಯಯಗಳಲ್ಲಿ ಐದು ವಿಧ :

(೧) ಸಾಮಾನ್ಯಾವ್ಯಯ—ಉದಾ :—ಸುಮ್ಮನೆ. ಮೆಲ್ಲನೆ. ನೆಟ್ಟನೆ, ಇತ್ಯಾದಿ.
(೨) ನಿಪಾತಾವ್ಯಯ—ಉದಾ :—ಅಯ್ಯೋ. ಓಹೋ. ಅಃ. ಚೀ. ಅಕಟ. ಇತ್ಯಾದಿ.
(೩) ಅನುಕರಣಾವ್ಯಯ—ಉದಾ :—ಘಟಘಟ. ಪಟಪಟ. ಫಳಫಳ. ಇತ್ಯಾದಿ.
(೪) ತದ್ಧಿತಾಂತಾವ್ಯಯ—ಉದಾ :—ಅಂತೆ. ವೊಲ್. ತನಕ. ವರೆಗೆ. ಇತ್ಯಾದಿ.
(೫) ಕೃದಂತಾವ್ಯಯ—ಉದಾ :—ಓಡಿ. ಕೇಳಲ್, ಬಂದೊಡೆ. ನೋಡಲ್. ಇತ್ಯಾದಿ

***

# ಭೂಮಿಯು ಇನ್ನು ಬಡವಾಯಿತು

—ಸಿ. ಕೆ. ವೆಂಕಟರಾಮಯ್ಯ

(ರಾವಣನ ಶಿಬಿರ: ರಾವಣನು ಮರಣಶಯ್ಯೆಯಲ್ಲಿ ಮಲಗಿರುವನು. ಪರಿವಾರದವರೆಲ್ಲರೂ ನಿಸ್ತೇಜರಾಗಿರುವರು. ಸಮಯ : ಸಂಧ್ಯಾಕಾಲಕ್ಕೆ ಸ್ವಲ್ಪ ಮುಂಚೆ.)

ರಾವಣ—ದುರಂತವಾದ ಹೃದಯಯಾತನೆಯೊಡನೆ ಜೀವನವು ಕೊನೆಗಾಣುವ ಸಮಯವು ಸನ್ನಿಹಿತವಾಯಿತು. ಸೀತಾದೇವಿ! ನೀನು ಜಗದ್ವಂದ್ಯಳು! ಲೋಕೈಕವೀರನಾದ ರಾಮಚಂದ್ರನನ್ನು ವರಿಸಿರುವ ನೀನೇ ಭಾಗ್ಯಶಾಲಿನಿ. ನನ್ನ ಅಪರಾಧವನ್ನು ಮನ್ನಿಸು......ಸಂಕಟ.......ಸಂಕಟ......ವತ್ಸ ವಿಭೀಷಣ! ನನ್ನ ಕೆಲಸವು ಪೂರೈಸಿತು. ನನ್ನ ಸತ್ಸಂಕಲ್ಪಗಳಿಗೆಲ್ಲ ಸಜೀವಸಮಾಧಿಯಾಯಿತು. ವತ್ಸ! ಇನ್ನು ಮುಂದೆ ನೀನೇ ಚಕ್ರವರ್ತಿ. ಪ್ರಜೆಗಳನ್ನು ಮಕ್ಕಳಂತೆ ಕಾಪಾಡುತ್ತ ಸುಖವಾಗಿ ಬಾಳು. ಮಂಡೋದರಿಯು ಇನ್ನೂ ಬರಲಿಲ್ಲವಲ್ಲಾ! ಎಷ್ಟು ಬಾಧೆಯಾಗಿದೆಯೋ ಅವಳಿಗೆ! ನನ್ನ ಭಂಡಾರದಲ್ಲಿರುವ ಸುವಸ್ತುಗಳಲ್ಲಿ ಕಾಲುಭಾಗವನ್ನು ಸೀತಾದೇವಿಗೆ ಬಳುವಳಿಯಾಗಿ ಕೊಟ್ಟಿರುವೆನು. ಉಳಿದವರಲ್ಲಿ ಅರ್ಧಭಾಗವನ್ನು ಪಾತ್ರವರಿತು ಪ್ರಜೆಗಳಿಗೆ ದಾನಮಾಡು. ಮಿಕ್ಕ ವಸ್ತುನಿಚಯವೆಲ್ಲಾ ನಿನ್ನದು.

(ನೇಪಥ್ಯದಲ್ಲಿ ಪ್ರಜೆಗಳೆಲ್ಲರೂ "ಲಂಕೆಯ ಲಕ್ಷ್ಮಿಯಾದ ಮಂಡೋದರೀದೇವಿ. ಅಯ್ಯೋ! ಅಯ್ಯೋ!" ಎಂದು ಕೂಗಿಕೊಳ್ಳುತ್ತಿರುವಲ್ಲಿ ಮಂಡೋದರಿಯು ಆಂಜನೇಯನ ಸಹಾಯದಿಂದ ಮೆಲ್ಲಗೆ ಹೆಜ್ಜೆಯನ್ನಿಡುತ್ತ ಪ್ರವೇಶಿಸುವಳು. ರಾವಣನನ್ನು ಕಂಡೊಡನೆಯೇ ಆವೇಶಗೊಂಡವಳಂತೆ ಅವನ ಬಳಿಗೆ ಹೋಗುವಳು.)

ಮಂಡೋದರಿ—(ರಾವಣನ ಪಾದದ ಮೇಲೆ ತಲೆಯನ್ನಿಟ್ಟು) ಪ್ರಾಣನಾಥ! ನನ್ನ ಕೊನೆಯ ಸೇವೆ.

ಆಂಜನೇಯ—ಸೀತಾಮಾತೆಗೆ ಸರಿದೂಗುವವಳು ಇವಳೊಬ್ಬಳೇ. ಎಂತಹ ಪತಿಪ್ರೇಮ! (ಕಂಬನಿದುಂಬಿ ಗದ್ಗದ ಸ್ವರದಿಂದ) ಅಯ್ಯೋ! ಅನರ್ಘ್ಯವಾದ ಜೀವರತ್ನವೊಂದು ಪುಡಿಯಾಯಿತು.

ಸೀತಾದೇವಿ—(ಪ್ರವೇಶಿಸಿ) ಆಂಜನೇಯ! ಸುಷೇಣನೂ ದೇವಿಯನ್ನು ಉಳಿಸಲಾರದೆ ಹೋದನೆ ? (ಮಂಡೋದರಿಯ ಬಳಿಗೆ ಹೋಗುವಳು)

ಆಂಜನೇಯ—(ಸೀತಾದೇವಿಗೆ ನಮಸ್ಕರಿಸಿ ಮೇಲಕ್ಕೆದ್ದು) ಮಂಡೋದರೀದೇವಿಯನ್ನು ಉಳಿಸಿದವರಿಗೆ ಅಯೋಧ್ಯೆಯ ರಾಜ್ಯವನ್ನು ಕೊಟ್ಟು ತಾನು ಸತೀಸಹೋದರರೊಡನೆ ವನವಾಸವನ್ನು ಕೈಕೊಳ್ಳುವುದಾಗಿ ಪ್ರಭು ರಾಮಚಂದ್ರನು ತಿಳಿಸಿದನು. ಯಾರ ಚಿಕಿತ್ಸೆ ಯಿಂದಲೂ ಫಲವಾಗಲಿಲ್ಲ. ಸ್ವಲ್ಪಕಾಲ ಮಾತ್ರ ತ್ರಾಣದಾಯಕವಾಗುವಂತೆ ಸುಷೇಣನು ಮೂಲಿಕಾ ಪ್ರಯೋಗ ಮಾಡಿದ್ದಾನೆ.

ರಾವಣ—(ಏಳಲು ಪ್ರಯತ್ನಿಸಿ ಮತ್ತೆ ಹಿಂದಕ್ಕೆ ಬಿದ್ದು) ಮಂಡೋದರಿ! ನನ್ನ ಮುದ್ದು ಗಿಳಿ! ನನ್ನ ಹೃದಯದಲ್ಲಿ ಈಗಿರುವುದು ನಿನ್ನ ಮೋಹನಮೂರ್ತಿಯೊಂದೇ. (ಸಂಕಟವನ್ನು ಸೂಚಿಸುವನು) ನೀನು ಮೊದಲೇ ರಣರಂಗಕ್ಕೆ ಬಂದಿದ್ದರೆ ನಾನೇ ಜಯಿಸು ತ್ತಿದ್ದೆನೋ ಏನೋ! ನಿನಗೂ ತೋರಲಿಲ್ಲ..................ನಾನೂ ಕೇಳಲಿಲ್ಲ........ ಮಾಯೆಯ ಕಾವಳ............ನಾನು ನಿನ್ನಲ್ಲಿಯೂ, ಸೀತೆಯಲ್ಲಿಯೂ ಎಷ್ಟು ಅಪರಾಧಿ! ಮಂಡೋದರಿ, ಮಂಡೋದರಿ.... ..............(ಸಂಕಟಪಡುವನು. ಪರಿಜನರು ಬಲವಾಗಿ ಗಾಳಿ ಹಾಕುವರು)

ಮಂಡೋದರಿ—(ಕಂಬನಿದುಂಬಿ) ಆರ್ಯಪುತ್ರನ ಅವಸ್ಥೆಯನ್ನು ನೋಡಲಾರೆ. ಆರ್ಯಪುತ್ರ! ನಿನ್ನ ಪ್ರೇಮಕ್ಕೆ ಪಾತ್ರಳಾದ ನಾನೇ ಧನ್ಯಳು. ನನ್ನ ಜೀವನದ ಚೈತನ್ಯವೆ ನೀನು! ನನ್ನ ಕಥೆಯು ಮುಗಿಯುತ್ತ ಬಂದಿತು. (ಸೀತಾದೇವಿಯು ಕಣ್ಣೀರನ್ನು ಸುರಿಸುತ್ತ ಅವಳನ್ನು ಆಲಿಂಗಿಸಿ ಹಿಡಿದುಕೊಳ್ಳುವಳು) ತಂಗಿ. ಸೀತಾದೇವಿ! ಆಲಿಂಗಿಸು ತಾಯಿ. ಈ ಸುಖವು ಪರಲೋಕದಲ್ಲೆಲ್ಲಿ ದೊರೆಯುವುದು! ನನ್ನನ್ನು ಬಿಗಿಯಾಗಿ ಅಪ್ಪು. ಆಂಜನೇಯ! ನಿನ್ನ ಸಹಾಯದಿಂದ ಪತಿಯನ್ನು ಕೊನೆಯಸಾರಿ ನೋಡುವ ಭಾಗ್ಯವನ್ನು ಪಡೆದೆನು. (ರಾವಣನ ಪದತಲದ ಬಳಿಯಲ್ಲಿ ಸೀತೆಯು ಅವಳನ್ನು ಒಂದು ಆಸನದಲ್ಲಿ ಕುಳ್ಳಿರಿಸುವಳು).

ಆಂಜನೇಯ—(ಕಂಬನಿಯನ್ನು ಸುರಿಸುತ್ತ ನಮಸ್ಕರಿಸಿ) ಮಾತೆ! ಮಾತೆ! ನನ್ನದು ನಿಜವಾಗಿಯೂ ವಜ್ರಹೃದಯ. ಆದಕ್ಕೇ ಈ ಹಾಳು ಹೃದಯವು ಇನ್ನೂ ಸೀಳಿಹೋಗಿಲ್ಲ.

ಮಂಡೋದರಿ—ಏಳು, ಏಳು, ಸ್ವಾಮಿಭಕ್ತಿಪರಾಯಣ, ಏಳು, ನಿನ್ನಂತಹ ಸ್ವಾಮಿನಿಷ್ಠರು ಜಗತ್ತಿಗೇ ಅಲಂಕಾರಪ್ರಾಯರು. ವಿಭೀಷಣ, ನಿನ್ನ ವಿಷಯದಲ್ಲಿ ನಾನು

ಬಿರುನುಡಿಗಳನ್ನು ಆಡಿರುವೆನು. ಕ್ಷಮಿಸು. ಆ ಕಾಲವು ಆಗಿ ಹೋಯಿತು. ಈಗ ನನ್ನ ಮನಸ್ಸಿನಲ್ಲಿರುವುದು ಪ್ರೀತಿಯೊಂದೇ.

ವಿಭೀಷಣ— (ಓಡಿಬಂದು ನಮಸ್ಕರಿಸಿ ಗದ್ಗದ ಸ್ವರದಿಂದ) ಬೇಡ ! ಮಾತೆ, ನನ್ನ ಹೃದಯವನ್ನು ಸೀಳಬೇಡ. ನೀನು ಸತ್ಯಲೋಕದ ದೇವಿ. ನಮಗೆಲ್ಲಿ ನಿನ್ನ ಸೇವಾಭಾಗ್ಯ ! ಪಾಪಿಷ್ಠರಿಗೆ ಅದು ಸಿಕ್ಕೀತೆ ? ಮಾತೆ ! ನೀನು ಸತ್ತು ಬದುಕುವವಳು. ನಾವು ಬದುಕಿ ಸತ್ತವರು.

ಮಂಡೋದರಿ—ವಿಭೀಷಣ ! ನನ್ನ ಅಂತರಾತ್ಮವು ಲಂಕೆಯನ್ನು ಬಿಟ್ಟು ಹೋಗಬಾರದು. ನನ್ನ ದೇಹವು ಬಿದ್ದುಹೋದರೂ ನನ್ನ ಆತ್ಮವು ಪತಿಪುತ್ರರ ಆತ್ಮಗಳೊಡನೆ ಲಂಕಾರಾಜ್ಯದ ಎಲ್ಲೆಡೆಗಳನ್ನೂ ವ್ಯಾಪಿಸುವಂತೆ ಸರ್ವಮಂಗಳೆಯು ಅನುಗ್ರಹಿಸಬಾರದೆ ! ವಿಭೀಷಣ ! ಸಮಸ್ತ ವಿಧಗಳಲ್ಲೂ ನೀನು ಲಂಕಾಮಾತೆಯನ್ನು ಸೇವಿಸು. ಸಚ್ಚರಿತ್ರನಾಗಿ ಬಾಳು. ವಿಭೀಷಣ ! ಪ್ರಜೆಗಳನ್ನು ಮಕ್ಕಳಂತೆ ಕಾಪಾಡು. ರಾವಣೇಶ್ವರ ಭೂಪಾಲನಿಗಿಂತ ಮಿಗಿಲೆನಿಸುವಂತೆ ಪ್ರಜಾಭ್ಯುದಯವನ್ನು ಸಾಧಿಸಿ ಧನ್ಯನಾಗು. ಆರ್ಯಪುತ್ರನು ಒಂದು ಕ್ಷಣವೂ ರಾಜಧರ್ಮವನ್ನು ಅಲಕ್ಷ್ಯಮಾಡಿಲ್ಲವೆಂಬುದನ್ನು ನೆನಪಿನಲ್ಲಿಡು. ನಾವಿಬ್ಬರೂ ಪ್ರಜೆಗಳನ್ನು ಬಿಡಲಾರದೆ ಬಿಟ್ಟು ಹೋಗುತ್ತಿದ್ದೇವೆ. ಅಯ್ಯೋ ! ಆರ್ಯಪುತ್ರನು ಎಷ್ಟು ಸಂಕಟಪಡುತ್ತಿದ್ದಾನೆ ! ಇಂತಹ ಸಮಯದಲ್ಲಿ ಅವನನ್ನು ಸೇವಿಸಲು ನನಗೆ ಶಕ್ತಿಯಿಲ್ಲವಲ್ಲಾ ! ಅಯ್ಯೋ ! ಹೇಗೆ ಸಹಿಸಲಿ ?

ವಿಭೀಷಣ—(ಅಳುತ್ತ ಅಳುತ್ತ ಬಂದು ಮಂಡೋದರಿಯ ಕಾಲುಗಳನ್ನು ಹಿಡಿದುಕೊಂಡು) ಸಾತ್ವಿಕಪ್ರೇಮವೇ ಸ್ತ್ರೀರೂಪವನ್ನು ಧರಿಸಿರಬೇಕು. ತಾಯಿ ! ನೀನು ಸರ್ವಮಂಗಳೆಯ ಅವತಾರ. ಲಂಕೆಯ ವೈಭವವು ಇಲ್ಲಿಗೆ ಮುಗಿಯಿತು.

ಮಂಡೋದರಿ—ವತ್ಸ ! ಪ್ರೀತಿಭರದಲ್ಲಿ ಅಳತೆಗೆಟ್ಟು ಮಾತನಾಡಬೇಡ. (ಅವನ ತಲೆಯ ಮೇಲೆ ಕೈಯಿಟ್ಟು) ಸುಖವಾಗಿ ಬಾಳು. ಶುದ್ಧಹೃದಯದಿಂದ ಲಂಕಾಮಾತೆಯನ್ನು ಸೇವಿಸಿ ಧನ್ಯನಾಗು. (ವಿಭೀಷಣನು ಮೇಲಕ್ಕೆದ್ದು ನಿಲ್ಲುವನು) ಮೂಲಿಕೆಯಿಂದ ಕೃತಕವಾಗಿ ದೊರೆತಿದ್ದ ಪ್ರಾಣವೂ ಹೋಯಿತು. ಸಂಕಟ, ಸಂಕಟ ..........

ಸೀತಾದೇವಿ—ಅಯ್ಯೋ ! ಇದನ್ನು ನೋಡಿ ಸೈರಿಸಲಾರೆ.

ಮಂಡೋದರಿ—ಎಲ್ಲವೂ ಸರ್ವಮಂಗಳೆಯ ಲೀಲೆ. ಸೀತಾದೇವಿ, ಲೋಕವಂದಿತೆಯಾದ ನನ್ನ ಸಹೋದರಿ ! ನನ್ನದೊಂದು ಯಾಚನೆಯುಂಟು.

ಸೀತಾದೇವಿ—ಅಕ್ಕ ! ಯಾಚನೆಯೆನ್ನಬೇಡ. ಅಯ್ಯೋ ! ಹಾಗೆನ್ನಬೇಡ, ಅದು ಅನುಗ್ರಹ. ಹೇಳು, ಹೇಳು, ನನ್ನ ಪ್ರಾಣವನ್ನು ಬೇಕಾದರೂ ಕೊಡಬಲ್ಲೆ.

ಮಂಡೋದರಿ—ತಂಗಿ ! ನಮ್ಮ ಸ್ನೇಹದ ಗುರುತಾಗಿ, ನಮ್ಮ ಪ್ರೀತಿಯ ನೆನಪಾಗಿ ಒಂದು ಕಾರ್ಯವನ್ನು ಮಾಡುವೆಯಾ ? ಸಂಕಟ ...

ಸೀತಾದೇವಿ—ಹೇಳು, ಹೇಳು, ಆಜ್ಞೆಯೆಂದು ಭಾವಿಸಿ ಆನಂದದಿಂದ ಮಾಡುವ
ಈ ದೇಹವನ್ನೇ ಬೇಕಾದರೂ ಅರ್ಪಿಸುವೆನು.

ಮಂಡೋದರಿ—ತಂಗಿ! ನನ್ನ ಅಂತಃಪುರದಲ್ಲಿರುವ ಸಮಸ್ತ ವಸ್ತುಗಳನ್ನೂ ಜ್ಞಾಪಕಾರ್ಥವಾಗಿ ನೀನು ಸ್ವೀಕರಿಸಿ ಅಯೋಧ್ಯೆಗೆ ತೆಗೆದುಕೊಂಡು ಹೋಗಬೇಕು. ನನ್ನ ಕೊನೆಯ ಕೋರಿಕೆ.

ಸೀತಾದೇವಿ—(ಬಿಕ್ಕಿ ಬಿಕ್ಕಿ ಅಳುತ್ತ ಮಂಡೋದರಿಯ ಕಂಠವನ್ನಾಲಿಂಗಿಸಿ) ಅಕ್ಕ! ಪ್ರೀತಿಮಯಿ. ವಿಶ್ವಪ್ರೇಮಿಯಾದ ದೇವಿ. ನಿನ್ನನ್ನು ಕಳೆದುಕೊಳ್ಳುವ ನಾವೆಲ್ಲ ಹತಭಾಗ್ಯರು, ಅಯ್ಯೋ!

ಮಂಡೋದರಿ—(ಪ್ರಯತ್ನಪೂರ್ವಕವಾಗಿ ರಾವಣನ ಹೆಜ್ಜೆಯ ಮೇಲೆ ತಲೆಯನ್ನಿಟ್ಟು ಮತ್ತೆ ಕಷ್ಟದಿಂದ ತಲೆಯನ್ನು ಮೇಲಕ್ಕೆತ್ತಿ) ಇದೇ ಈ ದಿವ್ಯಪಾದಕ್ಕೆ ಕೊನೆಯ ವಂ ಜನ್ಮಜನ್ಮಾಂತರಗಳಲ್ಲೂ ಆರ್ಯಪುತ್ರನೇ ನನಗೆ ಪತಿಯಾಗಲಿ! ಪುಣ್ಯವಿದ್ದರೆ ಲಂಕೆಯ ನಮಗೆ ಜನ್ಮವಾಗಲಿ! (ರಾವಣನ ಪಾದಗಳ ಮೇಲೆ ತಲೆಯನ್ನೂರಿ ಸಂಕಟಪಡುವಳು)

ರಾವಣ—ಹೃದಯೇಶ್ವರೀ! ನಾನೇ ನಿನಗೆ ಮೃತ್ಯುವಾದೆನೇ! ಮಂಡೋದ ಮಂಡೋದರೀ, ನೀನು ನನ್ನ ಜೀವದ ಗೆಳತಿಯಾಗಿದ್ದೆ. ನನ್ನ ಹೃದಯದ ಬೆಳಕಾಗಿ ಜಗತ್ತಿಗೇ ಜೀವರತ್ನವಾಗಿದ್ದೆ, ಪಾಪಿ ರಾವಣನಿಂದ....

ಮಂಡೋದರಿ—(ಅತಿ ಕಷ್ಟದಿಂದ ತಲೆಯನ್ನೆತ್ತಿ) ಆ...ರ್ಯ...ಪು ತ್ರ ಹಾಗೆನ್ನಬೇ ನೀನೇ ನನ್ನ ಸರ್ವಸೌಭಾಗ್ಯ. ನಿನ್ನ ಸೇವೆಯಿಂದ....ನಾನು....ಧನ್ಯಳು .. (ಬೀಳುವಳು)

ಸೀತಾದೇವಿ—(ಕಂಬನಿದುಂಬಿ ಮಂಡೋದರಿಯನ್ನಾಲಿಂಗಿಸಿ) ಅಕ್ಕಾ! ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವೆ?

ಮಂಡೋದರಿ—(ಮಾತನಾಡಲು ಯತ್ನಿಸಿ ಸಂಕಟದಿಂದ) ತಂಗಿ! (ಮುಂದೆ ಮಾ ನಾಡಲು ಪ್ರಬಲವಾಗಿ ಪ್ರಯತ್ನಿಸಿ, ಸಾಧ್ಯವಿಲ್ಲದೆ ಪ್ರಾಣವನ್ನು ತ್ಯಜಿಸುವಳು.)

ಸೀತಾದೇವಿ—(ಗದ್ಗದ ಸ್ವರದಿಂದ) ಲಂಕೆಯ ಅಮೃತಲತೆಯು ಒಣಗಿಹೋಯಿತು! ಭೂಮಿಯು ಇನ್ನು ಬಡವಾಯಿತು! ಅಯ್ಯೋ! ನನಗೆ ಏನನ್ನೋ ಹೇಳಬೇಕೆಂದಿದ್ದ ಮಂಡೋದರೀದೇವಿಯ ಸ್ಮರಣೆಯಿಂದ ಮಹಾಪಾತಕವೂ ನಾಶವಾಗುವುದು. ಸ್ತ್ರೀಜಾತಿಯ ಆದರ್ಶಕುಸುಮವು ಮಾಯವಾಯಿತು. ಸೂರ್ಯಚಂದ್ರರಿದ್ದು ಇನ್ನು ಕತ್ತಲೆಯೇ ಪ್ರಪಂಚದ ಬೆಳಕು ಮುಳುಗಿಹೋಯಿತು. ಅಯ್ಯೋ!

ರಾವಣ—(ಬಹು ಸಂಕಟದಿಂದ) ವತ್ಸ ! ವಿ ...ಭೀ....ಷ.. ಣ...ನಿನಗೆ....ಮಂ....ಗ....ಳ, (ಮುಂದೆ ಮಾತು ಹೊರಡದೆ ಸಂಕಟಪಡುವನು. ಮಂಡೋದರಿಯ ಕಡೆಗೆ ದೃಷ್ಟಿಸಿ ನೋಡುತ್ತ ಕಂಬನಿದುಂಬುವನು)

ವಿಭೀಷಣ—ಅಣ್ಣ ! ಅಣ್ಣಾ ! ಈ ಸಂಕಟವನ್ನು ಹೇಗೆ ನೋಡಲಿ ?

ರಾವಣ—ಧರ್ಮ ನಾನು ನಂ ...ಬ....ಲಿ...ಲ್ಲ... ನೀನು... ನಂ...ಬು...ಮಂ....ಗ...ಳ (ರಾವಣನು ಅಂತರಿಕ್ಷದ ಕಡೆಗೆ ಕೈಮುಗಿದು ತನ್ನ ಹಣೆಯನ್ನು ಎರಡು ಸಾರಿ ಮುಟ್ಟಿ ತೋರಿಸಿ ಸಂಕಟದಿಂದ ಮೃತಪಡುವನು)

(ತೆರೆಯು ಬೀಳುವುದು)

## ಟಿಪ್ಪಣಿ

ಈ ನಾಟಕ ಭಾಗವನ್ನು ಶ್ರೀ ಸಿ. ಕೆ. ವೆಂಕಟರಾಮಯ್ಯ ಅವರ “ ಮಂಡೋದರಿ ” ಎಂಬ ನಾಟಕದಿಂದ ಆಯ್ದುಕೊಳ್ಳಲಾಗಿದೆ.

ಶ್ರೀ ಸಿ. ಕೆ. ವೆಂಕಟರಾಮಯ್ಯನವರು ೧೮೯೬ರಲ್ಲಿ ಬೆಂಗಳೂರುಜಿಲ್ಲೆಯ ಚನ್ನಪಟ್ಟಣದಲ್ಲಿ ಹುಟ್ಟಿದರು. ಇವರು ಮೈಸೂರು ಸರ್ಕಾರದ ಪ್ರಧಾನ ಭಾಷಾಂತರಕಾರರಾಗಿದ್ದರು. ಈಗ ನಿವೃತ್ತರಾಗಿ ವಿಶ್ರಾಂತಜೀವನ ನಡೆಸುತ್ತಿದ್ದಾರೆ. ಇವರಿಗೆ ರಾಷ್ಟ್ರಪತಿಗಳಿಂದ “ ಪದ್ಮಶ್ರೀ ” ಪ್ರಶಸ್ತಿ ದೊರೆತಿದೆ. ಇವರು ನಾಟಕ, ಕಥೆ, ಜೀವನಚರಿತ್ರೆ, ವಿಮರ್ಶೆ—ಹೀಗೆ ಹಲವು ಕ್ಷೇತ್ರಗಳಲ್ಲಿ ಕೆಲಸ ಮಾಡಿ ಇಪ್ಪತ್ತಕ್ಕೂ ಹೆಚ್ಚು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ‘ ಮಂಡೋದರಿ ’, ‘ ನಚಿಕೇತ ’, ‘ ಬ್ರಹ್ಮವಾದಿನಿ ” “ ತೆನಾಲಿ ರಾಮಕೃಷ್ಣ ” ಮುಂತಾದುವು ಅವರ ನಾಟಕಗಳು ; " ಹಳ್ಳಿಯ ಕಥೆಗಳು ”. “ತುರಾಯಿ ” ಮುಂತಾದವು ಅವರ ಕಥಾಸಂಕಲನ ಗಳು ; ‘ ಬುದ್ಧ ’, ‘ ಹರ್ಷವರ್ಧನ ’, ‘ ಏಬ್ರಹಾಂ ಲಿಂಕನ್ ’, ‘ ಗುರುದೇವ ’, ‘ ಆಳಿದ ಮಹಾಸ್ವಾಮಿಯವರು ’—ಇವು ಅವರು ಬರೆದಿರುವ ಕೆಲವು ಜೀವನಚರಿತ್ರೆಗಳು, ‘ ಭಾಸ ಮಹಾಕವಿ ’—ಅವರ ವಿಮರ್ಶನ ಗ್ರಂಥ.

ರಾಮಾಯಣದಲ್ಲಿ ಬರುವ ಮಂಡೋದರಿಯ ಪಾತ್ರವನ್ನೇಪ್ರಧಾನವಾಗಿಟ್ಟುಕೊಂಡು ರಚಿಸಿದ ನಾಟಕ ‘ ಮಂಡೋದರಿ ’. ರಂಗಭೂಮಿಯ ದೃಷ್ಟಿಯಿಂದ ಇದೊಂದು ಯಶಸ್ವಿಯಾದ ನಾಟಕ. ರಾವಣ ಮತ್ತು ಮಂಡೋದರಿಯರ ಅಂತ್ಯದಲ್ಲಿ ಈ ನಾಟಕ ಮುಕ್ತಾಯವಾಗುತ್ತದೆ. ಆ ಒಂದು ದೃಶ್ಯವನ್ನು ಇಲ್ಲಿ ಚಿತ್ರಿಸಲಾಗಿದೆ. ರಾವಣನ ಮನಃಪರಿವರ್ತನೆ ಮಂಡೋದರಿಯ ಪತಿಪ್ರೇಮ—ಇವು ಇಲ್ಲಿ ಮನನೀಯವಾಗಿ ಉಲ್ಲೇಖಗೊಂಡಿವೆ. ದುರಂತಕತೆಯಲ್ಲಿ ಮುಗಿಯುವ ಈ ಚಿತ್ರ ಕರುಳನ್ನು ಮಿಡಿಯುವಂತಿದೆ. ಪರಸ್ಪರ ಅರಿವು, ಉದ್ದೇಶ, ಗುರಿಗಳ

ಕಡೆಗೆ ಪ್ರತಿಯೊಂದು ಪಾತ್ರವೂ ಮುಖಮಾಡುವುದನ್ನೂ, ರಾವಣ ತನ್ನ ತಪ್ಪನ್ನು ತಿದ್ದಿಕೊಳ್ಳುವುದನ್ನೂ, ಮಂಡೋದರಿಯ ವ್ಯಕ್ತಿತ್ವ ಎಲ್ಲ ಕಡೆಗೂ ತುಂಬಿಕೊಳ್ಳುವುದನ್ನೂ ಇಲ್ಲಿ ಕಾಣಬಹುದು.

ಕಠಿಣ ಪದಗಳ ಅರ್ಥ :

ನಿಸ್ತೇಜ—ಕಳೆಯಿಲ್ಲದ. ದುರಂತ—ದುಃಖದಲ್ಲಿ ಕೊನೆಗೊಳ್ಳುವ. ಯಾತನೆ—ನೋವು. ಸನ್ನಿಹಿತ—ಹತ್ತಿರ. ಸಂಕಲ್ಪ—ಪ್ರತಿಜ್ಞೆ. ವತ್ಸ—ಮಗು. ಬಳುವಳಿ—ಬಹುಮಾನ. ಪಾತ್ರವರಿತು—ಯೋಗ್ಯತೆ ತಿಳಿದು. ನಿಚಯ—ಸಮೂಹ. ನೇಪಥ್ಯ—ತೆರೆಯ ಹಿಂದಿನ ಭಾಗ. ಅನರ್ಘ್ಯ—ಶ್ರೇಷ್ಠ. ಮೂಲಿಕಾ—ಔಷಧಿಗೆ ಉಪಯೋಗಿಸುವ ಬೇರು. ಕಾವಳ—ಕತ್ತಲೆ. ಪರಿಜನ—ಪರಿವಾರ, ಸೇವಕವರ್ಗ. ಆಸನ—ಪೀಠ. ಬಿರುನುಡಿ—ಒರಟುಮಾತು. ಅಲಕ್ಷ್ಯ—ಉದಾಸೀನ.

ಇವುಗಳ ಸ್ವಾರಸ್ಯವನ್ನು ವಿವರಿಸಿ :

೧. 'ಸೀತಾಮಾತೆಗೆ ಸರಿದೂಗುವವಳು ಇವಳೊಬ್ಬಳೇ.'
೨. 'ನನ್ನ ಜೀವನದ ಚೈತನ್ಯವೇ ನೀನು.'
೩. 'ಭೂಮಿಯು ಇನ್ನು ಬಡವಾಯಿತು.'

ಪ್ರಶ್ನೆಗಳು :

೧. ಮಂಡೋದರಿಯ ಪತಿಪ್ರೇಮ ಇಲ್ಲಿ ಹೇಗೆ ವ್ಯಕ್ತವಾಗಿದೆ ?
೨. ರಾವಣನ ಪಾತ್ರವನ್ನು ಕುರಿತು ಬರೆಯಿರಿ.

***

# ಯೇತಿ

—ತೇನ್‌ಸಿಂಗ್

ಯೇತಿಯು ಅಥವಾ ಅಸಹ್ಯ ಹಿಮಮಾನವನ ವಿಚಾರವಾಗಿ ನನಗೆ ತಿಳಿದಿರುವುದನ್ನು ಈಗ ಹೇಳುತ್ತೇನೆ. ಹಿಮಾಲಯದಲ್ಲಿ ಬಹುಕಾಲದಿಂದ ವಾಸವಾಗಿರುವ ಅನೇಕರಿಗೆ ತಿಳಿದಿರುವುದಕ್ಕಿಂತ ಹೆಚ್ಚಿನದೇನೂ ನನಗೆ ತಿಳಿಯದು ; ಪ್ರಾಯಶಃ ಕೆಲವರಿಗಿಂತ ಕಡಿಮೆಯೇ ಗೊತ್ತಿರಬಹುದು. ಇದೇ ಮೊದಲಬಾರಿ, ೧೯೪೭ರಲ್ಲಿ, ಜೆಮ್ಮು ಹಿಮಪ್ರಪಾತದ ಮೇಲೆ ಅದರ ಹೆಜ್ಜೆ ಗುರುತುಗಳನ್ನು ನಾನು ಕಂಡದ್ದು. ೧೯೫೨ರಲ್ಲಿ, ಮತ್ತೆ ಒಂದೇ ಒಂದು ಬಾರಿ, ನಾನು ಸ್ವಿಸ್ ತಂಡದವರೊಡನೆ ಹೋದಾಗ, ಎವರೆಸ್ಟಿನ ಪಾದದ ಬಳಿಯಲ್ಲಿ ಅವುಗಳನ್ನು ಕಂಡೆನು. ನಾನು ಹಿಂದೆಯೇ ಹೇಳಿರುವಂತೆ, ನಾನು ಹುಡುಗನಾಗಿದ್ದಾಗ ಸೋಲೊ ಖುಂಬುವಿನಲ್ಲಿ ಅನೇಕವೇಳೆ ನೀರ್ಗಲ್ಲ ನದಿಗಳ ಮೇಲೂ, ಎತ್ತರವಾದ ಬೆಟ್ಟಗಳ ಸಾನುಪ್ರದೇಶಗಳಲ್ಲಿಯೂ ಪ್ರಾಣಿಯೊಂದರ ತೊಪ್ಪೆಯನ್ನು ಕಂಡಿದ್ದೆನು ; ಮತ್ತು ಅದು ಯೇತಿಯದೇ ಇರಬೇಕೆಂದು ನಿಶ್ಚಯಿಸಿದ್ದೆನು. ಅಲ್ಲದೆ ಯೇತಿಯ ಬಗ್ಗೆ ನಮ್ಮ ತಂದೆಯಿಂದಲೂ, ಬೇರೆಯವರಿಂದಲೂ ಅನೇಕ ಕಥೆಗಳನ್ನಂತೂ ಕೇಳಿದ್ದೆನು.

ನಮ್ಮ ತಂದೆಯ ಕಥೆಗಳು ಇಗೋ ಇಲ್ಲಿವೆ :

ಈ ವಿಚಿತ್ರವಾದ ಪ್ರಾಣಿಯನ್ನು ನಮ್ಮ ತಂದೆ ಮೊದಲ ಬಾರಿಗೆ, ಮಕಾಲು ಪರ್ವತದ ಹತ್ತಿರವಿರುವ ಬಾರುನ್ ಹಿಮಪ್ರಪಾತದ ಮೇಲೆ ಎದುರುಗೊಂಡರು. ಆ ಪ್ರಪಾತ ನನ್ನ ಜನ್ಮಸ್ಥಳವಾದ ತ್ಸು–ಚುಗೂ ಸಮೀಪದಲ್ಲಿದೆ. ಆ ಪ್ರಾಣಿಯನ್ನವರು ಆಕಸ್ಮಾತ್ತಾಗಿ ಸಂಧಿಸಿದರು. ಅದು ಬಹು ಸಮೀಪದಲ್ಲಿದ್ದುದರಿಂದ ಅದನ್ನು ಸ್ಪಷ್ಟವಾಗಿ ನೋಡಿದರಂತೆ. ಅದು ದೊಡ್ಡ ಮಂಗನಂತೆ ಅಥವಾ ವಾನರನಂತೆ ಕಾಣಿಸುತ್ತಿತ್ತಂತೆ. ಆದರೆ ಅದರ ಕಣ್ಣುಗಳು ಆಳವಾಗಿ ಗುಳಿಬಿದ್ದಿದ್ದುವು, ಅದರ ತಲೆ ಚೂಪಾಗಿ ಮೇಲೆ ಎದ್ದಿತ್ತು. ಅದರ ಬಣ್ಣ ಸ್ವಲ್ಪ ಬೂದು. ಇನ್ನೊಂದು ವಿಶೇಷ ಸಂಗತಿಯೆಂದರೆ, ಅದರ ಮೈಮೇಲಿನ

ಕೂದಲು ಎರಡು ದಿಕ್ಕುಗಳಲ್ಲಿ—ಸೊಂಟದ ಮೇಲುಭಾಗದ್ದು ಮೇಲ್ಮೊಗವಾಗಿಯೂ, ಕೆಳಭಾಗದ್ದು ಕೀಳ್ಮೊಗವಾಗಿಯೂ ಬೆಳೆದಿತ್ತು. ಅದು ಸುಮಾರು ನಾಲ್ಕು ಅಡಿ ಎತ್ತರವಿತ್ತು. ಅದು ಹೆಣ್ಣು ಯೇತಿ. ಅದರ ಮೊಲೆಗಳು ದೀರ್ಘವಾಗಿದ್ದು ಇಳಿಯಬಿದ್ದಿದ್ದವು. ಅದು ಓಡುವಾಗ ಕೈಗಳಲ್ಲಿ ಮೊಲೆಗಳನ್ನೆತ್ತಿಕೊಂಡು ಎರಡು ಕಾಲುಗಳಲ್ಲೇ ಚಲಿಸುತ್ತಿತ್ತು. ನಮ್ಮ ತಂದೆಯವರೇನೋ ಹೆದರಿದರು, ಆದರೆ ಯೇತಿಯೂ ಅಷ್ಟೆ. ಅದು ತಕ್ಷಣವೇ ತಿರುಗಿ ಕಡಿದಾದ ಪರ್ವತದ ಇಳುಕಲನ್ನು ಏರತೊಡಗಿತು ; ಜೋರಾಗಿ, ಕರ್ಕಶವಾಗಿ ಸಿಳ್ಳು ಹಾಕಿ ಕೂಡಲೇ ಮಾಯವಾಯಿತು. ಆಮೇಲೆ, ನಮ್ಮ ತಂದೆಯವರು ತಮಗೇನಾಗುತ್ತದೆಯೋ ಏನೋ ಎಂದು ತುಂಬಾ ಚಿಂತೆಯಲ್ಲಿದ್ದರು. ಯಾಕೆಂದರೆ, ಯೇತಿಯನ್ನು ನೋಡಿದ ಮನುಷ್ಯ ಖಂಡಿತವಾಗಿ ಸಾಯುತ್ತಾನೆಂದು ಅನೇಕರ ನಂಬಿಕೆ. ನಮ್ಮ ತಂದೆ ಪುಣ್ಯವಂತರು, ಸಾವಿಗೊಳಗಾಗಲಿಲ್ಲ. ಆದರೆ, ಅಂದಿನಿಂದವರು ಸುಮಾರು ಒಂದು ವರುಷ ಕಾಲ, ತಾವು ಅಸ್ವಸ್ಥರಾಗಿದ್ದೆವೆಂದು ನನ್ನೊಡನೆ ಹೇಳಿದರು.

ಮತ್ತೂ ಒಂದು ಸಾರಿ ಅವರು ಯೇತಿಯನ್ನು ನೋಡಿದ್ದುಂಟು. ಇದು ೧೯೩೮ರಲ್ಲಿ, ನಾನು ನನ್ನ ಮೊದಲನೆಯ ಎವರೆಸ್ಟ್ ಯಾತ್ರೆಯಲ್ಲಿದ್ದಾಗ. ಅವರು ನನ್ನನ್ನು ನೋಡುವುದಕ್ಕಾಗಿ ನಂಗ್ಪಾಲಾವನ್ನು ಹಾದು ರೋಂಗ್‌ಬುಕ್ಕಿಗೆ ಬಂದ ಮೇಲೆ, ಒಂದು ರಾತ್ರಿ ಒಬ್ಬರೆ ನೀಗ್ಸ... ನದಿಯ ಮೇಲಿನ ಒಂದನೇ ಶಿಬಿರದಲ್ಲಿ ನಿಂತರು. ಆಗ ನಮ್ಮಲ್ಲಿ ಕೆಲವರು ಕೆಳಗಿನ ಮೂಲ ಶಿಬಿರದಲ್ಲೂ, ಉಳಿದವರು ಮೇಲಿನ ಶಿಬಿರಗಳಲ್ಲೂ ಇದ್ದರು. ಬೆಳಕು ಹರಿಯುವ ನಸುಕಿನಲ್ಲಿ ಗುಡಾರದ ಹೊರಗೆ ಸಿಳ್ಳಿನ ದನಿಯೊಂದು ಅವರಿಗೆ ಕೇಳಿಸಿತು. ಡೇರೆಯ ಬಟ್ಟೆಯನ್ನು ಸರಿಸಿ ಹೊರಗೆ ನೋಡಿದರೆ ಸ್ವಲ್ಪ ದೂರದಲ್ಲೊಂದು ಪ್ರಾಣಿ ಹಿಮಪ್ರಪಾತದಿಂದ ಕೆಳಗಿಳಿಯುತ್ತ ದಕ್ಷಿಣದಿಂದ ಉತ್ತರಾಭಿಮುಖವಾಗಿ ಬರುತ್ತಿದ್ದುದನ್ನು ಕಂಡರು. ಈ ಸಲವೂ ನಮ್ಮ ತಂದೆಯವರಿಗೆ ಭಯವಾಯಿತು. ಯೇತಿಯನ್ನು ನೋಡಲು ಅವರಿಗಿಷ್ಟವಿರಲಿಲ್ಲ. ಅದರೆ ಡೇರೆಯಲ್ಲಿ ಅವಿತು ಕೂರುವುದಕ್ಕೂ ಮನಸ್ಸಿರಲಿಲ್ಲ. ಆಗ ಅದು ಹತ್ತಿರ ಬಂದರೆ ಅಥವಾ ಡೇರೆಯೊಳಕ್ಕೆ ನುಗ್ಗಿದರೆ ? ಆದ್ದರಿಂದ ಅವರು, ಅದು ಹಿಮಪ್ರಪಾತದಿಂದ ಕೆಳಗಿಳಿದುಹೋಗಿ ಅಗೋಚರವಾಗುವವರೆಗೂ ಇದ್ದಲ್ಲಿಯೇ ಇದ್ದರು. ಆಮೇಲೆ ಆದಷ್ಟು ವೇಗವಾಗಿ ಎರಡನೆಯ ಶಿಬಿರಕ್ಕೆ ಹತ್ತಿಬಂದರು. ಆಗ ನಾನಲ್ಲಿದ್ದೆ. ಶಿಬಿರಕ್ಕೆ ಬಂದೊಡನೆಯೆ ನನ್ನನ್ನು ಅಪ್ಪಿಕೊಂಡು 'ಮಗನನ್ನು ನೋಡೋಣವೆಂದು ಇಷ್ಟು ದೂರ ಬಂದರೆ, ಯೇತಿಯನ್ನು ನೋಡಿದೆನಲ್ಲಾ' ಎಂದು ಉಸುರಿದರು. ಆದರೆ ಈ ಬಾರಿ ಅದನ್ನು ಹಿಂದಿನಂತೆ ಹತ್ತಿರದಲ್ಲಿ ನೋಡಿರಲಿಲ್ಲ. ಆಮೇಲೆ ಕಾಯಿಲೆ ಬೀಳಲೂ ಇಲ್ಲ.

ಹಿಮಾಲಯ ಪ್ರದೇಶದಲ್ಲೆಲ್ಲ, ಗುಡ್ಡಗಾಡಿನ ಎಲ್ಲ ಜನರಲ್ಲೂ ಯೇತಿಯ ವಿಚಾರವಾದ ಕಥೆಗಳು ಬಳಕೆಯಲ್ಲಿವೆ. ಅವುಗಳಲ್ಲಿ ನಿಜವಾದವು ಯಾವುವು, ಕಲ್ಪನೆಯಿಂದ ಅಥವಾ ಮೂಢ ನಂಬಿಕೆಯಿಂದ ಹುಟ್ಟಿದವು ಯಾವುವು ಎಂದು ಹೇಳುವುದು ಕಠಿಣ. ಸೋಲೊಖುಂಬುವಿನ...

ಒಂದು ಕಥೆ ಪ್ರಚಾರದಲ್ಲಿದೆ : ಬಹು ವರ್ಷಗಳ ಹಿಂದೆ ತಾರ್ಗ್ನ ಎಂಬ ಗ್ರಾಮದ ಸಮೀಪದಲ್ಲಿ ಅನೇಕ ಯೇತಿಗಳು ಬಂದು ಸುತ್ತಲೂ ಬೀಡುಬಿಟ್ಟವಂತೆ. ಷರ್ಪಾಗಳು ಮನೆಗಳನ್ನು ಕಟ್ಟಿಕೊಳ್ಳುವರು, ತಮ್ಮ ಹೊಲಗಳನ್ನು ಉತ್ತಿ ಬಿತ್ತುವರು. ಆದರೆ ರಾತ್ರಿ ವೇಳೆಯಲ್ಲಿ, ಅಥವಾ ಜನರಿಲ್ಲದ ಕಾಲದಲ್ಲಿ, ಯೇತಿಗಳು ಬಂದು ಬಹು ತೊಂದರೆ ಕೊಡುತ್ತಿದ್ದವಂತೆ. ಆದರಿಂದ ಪುನಃ ಮನೆಗಳನ್ನು ಕಟ್ಟಬೇಕಾಗುತ್ತಿತ್ತು, ಸಸಿಗಳನ್ನು ನೆಡಬೇಕಾಗುತ್ತಿತ್ತು. ಅದರಲ್ಲಿ ಒಂದು ವಿಚಿತ್ರವೇನೆಂದರೆ, ಯೇತಿಗಳು ಪದಾರ್ಥಗಳಾವುವನ್ನೂ ನಾಶಮಾಡುತ್ತಿರಲಿಲ್ಲ. ಎಲ್ಲವನ್ನೂ ಹದಗೆಡಿಸಿದ ಮೇಲೆ ಅವು ತಮಗೆ ತೋರಿದ ರೀತಿಯಲ್ಲಿ ಕಟ್ಟಡಗಳನ್ನೆಬ್ಬಿಸುತ್ತಿದ್ದವು, ಸಸಿಗಳನ್ನು ಹಾಕುತ್ತಿದ್ದವು. ಆದರೆ ಅವು ಯಾವುದನ್ನೂ ಸರಿಯಾದ ರೀತಿಯಲ್ಲಿ ಮಾಡುತ್ತಿರಲಿಲ್ಲ. ಗ್ರಾಮಸ್ಥರು ಹತಾಶರಾದರು. ಅವುಗಳನ್ನು ಹುಡುಕಲು ಹೊರಟರೆ ಅವು ಕಣ್ಣಿಗೇ ಬೀಳುತ್ತಿರಲಿಲ್ಲ. ಆಗ, ಕಪಟದಿಂದ ಅವುಗಳನ್ನು ನಾಶಮಾಡಬೇಕೆಂದು ನಿರ್ಧರಿಸಿದರು. ಹೆಚ್ಚಾಗಿ ತೊಪ್ಪೆ ಬಿದ್ದಿದ್ದ ಸ್ಥಳವನ್ನು ನೋಡಿ ಅಲ್ಲಿಯೇ ಯೇತಿಗಳು ಸೇರುತ್ತವೆಂಬುದನ್ನು ತಿಳಿದು, ಒಂದು ದಿನ ಅಲ್ಲಿಗೆ ಹೋಗಿ, ಅನೇಕ ಗಡಿಗೆಗಳ ತುಂಬ ಚಾಂಗನ್ನೂ (ಖಡಕ್ಕಾದ ಷರ್ಪಾ ಮದ್ಯ), ಅನೇಕ ಕುಕ್ರಿ (ಬಾಗಿದ ನೇಪಾಳೀ ಚೂರಿ) ಗಳನ್ನೂ ಅಲ್ಲಿ ಬಿಟ್ಟುಬಂದರು. ಅವರು ಎಣಿಸಿದಂತೆ, ರಾತ್ರಿಯಾಗುತ್ತಲೆ ಯೇತಿಗಳು ಬಂದು, ಚಾಂಗನ್ನು ಕಂಡು ಕುಡಿದವು. ಕುಡಿದು ಅಮಲೇರಿದಾಗ ಕುಕ್ರಿಗಳನ್ನು ಎತ್ತಿಕೊಂಡು ಕಾದಾಡಲಾರಂಭಿಸಿದವು. ಕಥೆಯ ಪ್ರಕಾರ, ಮರುದಿನ ಬೆಳಗ್ಗೆ, ಅವುಗಳೆಲ್ಲ ಅಲ್ಲಿ ಸತ್ತು ಬಿದ್ದಿದ್ದವು. ಅಂದಿನಿಂದ ತಾರ್ಗ್ನದ ಜನರು ಪುನಃ ಸಮಾಧಾನದಿಂದ ತಂತಮ್ಮ ಕೆಲಸಗಳಲ್ಲಿ ತೊಡಗಿದರು.

ಯೇತಿಗಳಲ್ಲಿ ಎರಡು ಬಗೆಯೆಂದು ಷರ್ಪಾ ಜನರ ನಂಬಿಕೆ : "ಮೈತ್ರಿ" ಎಂಬುದು ನರಭಕ್ಷಕ, "ಚುತ್ರಿ" ಎಂಬುದು ಪ್ರಾಣಿಗಳನ್ನು ಮಾತ್ರ ತಿನ್ನುತ್ತದೆ. ಇವೆರಡರಲ್ಲಿ ಚುತ್ರಿಯೆ ದೊಡ್ಡದಂತೆ. ಅದು ದೊಡ್ಡ ಕಂದುಬಣ್ಣದ ಕರಡಿಯಂತೆ ಇರುತ್ತದೆ. ಎಲ್ಲ ಯೇತಿಗಳ ಹಾಗೆ ಅದರ ಪಾದವೂ ಹಿಮ್ಮೊಗವಾಗಿರುತ್ತದಂತೆ. ಕೆಲವರು ಪಾಶ್ಚಾತ್ಯರೂ, ವಿಜ್ಞಾನಿಗಳೂ ಯೇತಿಯೆಂದರೆ ಒಂದು ಬಗೆಯ ಕರಡಿ, ಬೇರೇನೂ ಅಲ್ಲವೆಂದು ಊಹಿಸಿದ್ದಾರೆ. ಪ್ರಸಿದ್ಧ ವಿಜ್ಞಾನಿಯಾದ ಜೂಲಿಯನ್ ಹಕ್ಸ್ಲಿಯು ಒಮ್ಮೆ ಡಾರ್ಜೀಲಿಂಗಿಗೆ ಬಂದಿದ್ದಾಗ, ನಾನವನನ್ನು ಭೇಟಿಮಾಡಿ ಕೇಳಿದಾಗ, ಮೇಲಿನಂತೆ ಅಭಿಪ್ರಾಯಪಟ್ಟನು. ಅದು ದೊಡ್ಡ ಕೋತಿಯನ್ನು ಅಥವಾ ವಾನರನನ್ನು ಹೋಲುತ್ತದೆ ಎಂದು ಹೇಳುವವರೂ ಅನೇಕರಿದ್ದಾರೆ. ನಮ್ಮ ತಂದೆ ಅದನ್ನು ಆದೇ ರೀತಿ ವರ್ಣಿಸಿದ್ದರಷ್ಟೆ.

ಎಲ್ಲೋ ಕೆಲವರು ಮಾತ್ರ ಯೇತಿಯನ್ನು ನಿಜವಾಗಿಯೂ ನೋಡಿದ್ದೇವೆಂದು ಹೇಳುತ್ತಾರೆ. ಅದನ್ನು ನೋಡಿದರೆ ಅನಿಷ್ಟ ಸಂಭವಿಸುತ್ತದೆಯೆಂಬ ನಂಬಿಕೆ ಎಲ್ಲೆಲ್ಲೂ ಇರುವುದರಿಂದ ಸ್ಥಳದ ಪರ್ವತನಿವಾಸಿಗಳು ಅದನ್ನು ನೋಡಬಯಸುವುದಿಲ್ಲ. ನಾನಂತೂ

ಒಂದನ್ನೂ ನೋಡಿರುವುದಿಲ್ಲ. ಕುಡಿದ ಯೇತಿಯನ್ನಾಗಲಿ, ಕುಡಿಯದಿರುವುದನ್ನಾಗಲಿ ಮುಂದಕ್ಕೆ ನಡೆಯುವುದನ್ನಾಗಲಿ, ಹಿಂದಕ್ಕೆ ನಡೆಯುವುದನ್ನಾಗಲಿ ನೋಡಿಲ್ಲ. ನನಗೆ ಮೂ ನಂಬಿಕೆಯಲ್ಲಿ ವಿಶ್ವಾಸವಿಲ್ಲ, ಅದೊಂದು ಭೂತದಂಥ ಅದ್ಭುತವಸ್ತುವೆಂದು ನಾ ನಂಬುವುದಿಲ್ಲ, ಅವುಗಳ ವಿಚಾರವಾಗಿ ಕೇಳಿರುವ ನಾನಾ ಮರುಳ್ಗತೆಗಳನ್ನು ನಾನು ನಂಬುವುದಿ ನಮ್ಮ ತಂದೆ ಸುಳ್ಳು ಹೇಳಿದರೆಂದಾಗಲಿ, ತಮ್ಮ ಆ ಕಥೆಗಳನ್ನು ಕಲ್ಪಿಸಿ ಹೇಳಿದರೆಂದಾ ನಾನು ತಿಳಿಯಲಾರೆ. ೧೯೪೭ರಲ್ಲಿ ಜಮ್ಮು ಹಿಮಪ್ರಪಾತದ ಮೇಲೂ, ೧೯೫೨ರಲ್ಲಿ ಎವರೆ ಸಮೀಪದಲ್ಲಿಯೂ ನಾನು ಕಂಡ ಹೆಜ್ಜೆ ಗುರುತುಗಳು ನಿಜಕ್ಕೂ, ಪರಿಚಯವಿರುವ ಯಾ ಪ್ರಾಣಿಯದರಂತೆಯೂ ತೋರಲಿಲ್ಲ. ಸಿದ್ಧಪಡಿಸುವುದು ಕಷ್ಟವಾದರೂ ಅಂಥದೊಂ ಪ್ರಾಣಿಯಿದೆಯೆಂದು ನನ್ನ ಮನಸ್ಸಿಗೆ ಖಂಡಿತವಾಗಿದೆ. ನನಗೆ ತೋರುವುದೇನೆಂದ ಅದೊಂದು ಪ್ರಾಣಿಯೇ ಹೊರತು ಮನುಷ್ಯನಲ್ಲ. ಅದು ಬಹುಮಟ್ಟಿಗೆ ರಾತ್ರಿಯ ವೇಳೆಯ ಸಂಚಾರಮಾಡುತ್ತದೆ: ಅತ್ಯುನ್ನತ ಪರ್ವತ ಪ್ರದೇಶದ ಕಾವಲುಗಳಲ್ಲಿರುವ ಗಿಡಗೆಂಟೆಗಳನ್ನ ಸಣ್ಣ ಪುಟ್ಟ ಪ್ರಾಣಿಗಳನ್ನೂ ತಿಂದು ಜೀವಿಸುತ್ತದೆ; ಪ್ರಾಯಶಃ ಅದು ನಮಗಿನ್ನೂ ತಿಳಿ ದಿರುವಂಥ ಒಂದು ಬಗೆಯ ವಾನರನಾಗಿರಬೇಕು.

೧೯೫೪ರಲ್ಲಿ ಬ್ರಿಟಿಷರನ್ನೂ, ಭಾರತೀಯರನ್ನೂ ಒಳಗೊಂಡ ಯಾತ್ರಾ ತಂಡವೊಂ ಯೇತಿಯನ್ನು ಹುಡುಕುವುದಕ್ಕಾಗಿಯೇ ಎವರೆಸ್ಟ್ ಪ್ರದೇಶಕ್ಕೆ ಹೊರಟಿತ್ತು. ನನ ಹೋಗಬೇಕೆಂಬ ಇಚ್ಛೆಯಿತ್ತು. ಆದರೆ ಸಾಧ್ಯವಾಗಲಿಲ್ಲ. ಇತರ ಎಷ್ಟೋ ತಂಡದವ ಇವರೂ ಹೆಜ್ಜೆಗುರುತುಗಳನ್ನೂ, ಇತರ ಕುರುಹುಗಳನ್ನೂ ಕಂಡರು, ಯೇತಿಯನ್ನು ಮ ಕಾಣಲಿಲ್ಲ. ಅದು ನಿರಾಶಾದಾಯಕವಾದರೂ ಒಂದಕ್ಕೆ ಒಳ್ಳೆಯದೇ. ನಾವು ಎಷ್ಟ ಸ್ಥಳಗಳಿಗೆ ಹೋಗುತ್ತೇವೆ, ಎಷ್ಟೋ ಕೆಲಸಗಳನ್ನು ಮಾಡುತ್ತೇವೆ, ಎಷ್ಟೋ ವಿಷಯಗಳ ಕಂಡುಹಿಡಿಯುತ್ತೇವೆ. ಆದರೆ ನಮಗೆ ತಿಳಿಯದಂಥ ಕೆಲವು ವಿಷಯಗಳು ಇರುವು ಒಳ್ಳೆಯದೆ.

## ಟಿಪ್ಪಣಿ

### ಕವಿ ಮತ್ತು ಕೃತಿ :

ಈ ಪಠ್ಯಭಾಗವನ್ನು ತೇನ್‌ಸಿಂಗನು ಬರೆದ 'ಎವರೆಸ್ಟ್ ವೀರ' ಎಂಬ ಪುಸ್ತಕದಿ ಆರಿಸಲಾಗಿದೆ. ಹಿಮಾಲಯ ಪರ್ವತದ ಅತ್ಯುನ್ನತ ಶಿಖರವಾದ 'ಗೌರೀಶಂಕರ' ಶಿಖರವ ಮೊಟ್ಟಮೊದಲು ಏರಿದ ಮಹಾಸಾಹಸಿಗಳಲ್ಲಿ ಈತನೂ ಒಬ್ಬ. ಈತನು ಪರ್ವತಾರೋಹ ತನ್ನ ಅನುಭವಗಳನ್ನು ಅತ್ಯಂತ ಹೃದಯಂಗಮವಾಗಿ ಚಿತ್ರಿಸಿದ್ದಾನೆ. ಇಂಗ್ಲಿಷ್‌ನಲ್ಲಿ ಇದನ್ನು ಶ್ರೀ ಕೂಡಲಿ ಚಿದಂಬರಂ ಮತ್ತು ಶ್ರೀ ಜನಾರ್ದನ ಗುರ್ಕಾರ್ ಅವರು ಕನ್ನ ಭಾಷಾಂತರಿಸಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಶ್ರೀ ಜನಾರ್ದನ ಗುರ್ಕಾರ್ ಅ 'ಪರಾವಲಂಬಿ', 'ಬಾವಿ ನೋಡಿದವರು', 'ಕಾಂತೆಯರ ಕನಸು', 'ರಾಯರ ಚಾಲ

'ಗಂಗಾವತಾರ' ಮೊದಲಾದ ಕಾದಂಬರಿಗಳನ್ನೂ : 'ಕಂಬದ ಹುಚ್ಚು' ಎಂಬ ಒಂದು ಕಥಾ ಸಂಕಲನವನ್ನೂ ಬರೆದಿದ್ದಾರೆ. ಶ್ರೀ ಕೂಡಲಿ ಚಿದಂಬರಂ ಅವರು 'ಕಾವ್ಯಾಲಯ'ವೆಂಬ ಸುಪ್ರಸಿದ್ಧ ಗ್ರಂಥಪ್ರಕಾಶನದ ಮಾಲೀಕರು ; ಅಲ್ಲದೆ ಶ್ರೇಷ್ಠ ಬರಹಗಾರರೂ ಆಗಿದ್ದಾರೆ. ಅವರು ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರಿಸಿರುವ ಗ್ರಂಥಗಳಲ್ಲಿ 'ಮಹದೇವ ಗೋವಿಂದ ರಾನಡೆ,' 'ಗೋಖಲೆ,' 'ನನ್ನ ರಾಜಕೀಯಗುರು,' 'ಗೀತೆಯ ಸಂದೇಶ,' 'ಈಸೋಪನ ನೀತಿ ಕತೆಗಳು' ಇವು ಕೆಲವು.

ಹಿಮಾಲಯ ಪರ್ವತದ ಆರೋಹಕರು 'ಯೇತಿ' ಎಂಬ ಒಂದು ಪ್ರಾಣಿಯನ್ನು ಕಂಡುದಾಗಿ ಆಗಾಗ ಹೇಳುವುದುಂಟು. ಅದು ಮಂಗನಿಗೂ, ಮಾನವನಿಗೂ ಮಧ್ಯದ ಒಂದು ಕೊಂಡಿ ಇರಬಹುದೆಂಬ ಸಂದೇಹಕ್ಕೂ, ಅಪಾರವಾದ ಕುತೂಹಲಕ್ಕೂ ಎಡೆ ಮಾಡಿಕೊಟ್ಟಿದೆ. ಸುಪ್ರಸಿದ್ಧ ಪರ್ವತಾರೋಹಿಯಾದ ತೇನ್‌ಸಿಂಗನು ಈ ವಿಚಾರದಲ್ಲಿ ತಾನು ಕಂಡು ಕೇಳಿದ ವಿಷಯಗಳನ್ನು ಮನೋಜ್ಞವಾಗಿ ಬರೆದಿಟ್ಟಿದ್ದಾನೆ.

ಕಠಿಣ ಪದಗಳ ಅರ್ಥ :

ಪ್ರಪಾತ—ಬೆಟ್ಟದ ಕಡಿದಾದ ಮತ್ತು ಆಳವಾದ ಮಗ್ಗಲು ಪ್ರದೇಶ. ಸಾನುಪ್ರದೇಶ—ಪರ್ವತದ ತಪ್ಪಲು. ತೊಪ್ಪೆ—ಸಗಣಿ. ಇಳುಕಲು—ಇಳಿಜಾರು. ಅಸ್ವಸ್ಥ—ಅನಾರೋಗ್ಯ. ನಸುಕು—ಮುಂಜಾವಿನ ಅರೆಗತ್ತಲೆ. ಅಗೋಚರ—ಕಣ್ಣಿಗೆ ಕಾಣಿಸದಿರುವುದು. ಹತಾಶ—ನಿರಾಶೆಗೊಂಡ. ಮರುಳ್ಗತೆ—ಹುಚ್ಚುಕತೆ. ತಂಡ—ಗುಂಪು. ಕುರುಹು—ಗುರುತು.

ಪ್ರಶ್ನೆಗಳು :

೧. ಯೇತಿಗಳಲ್ಲಿ ಎಷ್ಟು ವಿಧ ? ಅವುಗಳ ಸ್ವರೂಪವೇನು ?

೨. ಮೊದಲನೆಯ ಎವರೆಸ್ಟ್ ಯಾತ್ರೆಯಲ್ಲಿದ್ದಾಗ ತೇನ್‌ಸಿಂಗನಿಗೆ ಯೇತಿಯ ಬಗ್ಗೆ ಆದ ಅನುಭವವೇನು ? ವಿವರಿಸಿ.

೩. ಯೇತಿಗಳು ಷರ್ಪಾಗಳಿಗೆ ಕೊಡುತ್ತಿದ್ದ ತೊಂದರೆಗಳೇನು ?

೪. ಗ್ರಾಮಸ್ಥರು ಯೇತಿಗಳನ್ನು ನಾಶಮಾಡಲು ಮಾಡಿದ ಉಪಾಯವೇನು ? ಅದರಿಂದಾದ ಪರಿಣಾಮವೇನು ?

೫. ಯೇತಿಗಳ ವಿಷಯದಲ್ಲಿ ಷರ್ಪಾಗಳಿಗಿರುವ ನಂಬಿಕೆ ಏನು ?

ಇವುಗಳನ್ನು ಸಂದರ್ಭಸಹಿತ ವಿವರಿಸಿ :

೧. 'ನಮ್ಮ ತಂದೆ ಪುಣ್ಯವಂತರು. ಸಾವಿಗೊಳಗಾಗಲಿಲ್ಲ.'

೨. "ಮಗನನ್ನು ನೋಡೋಣವೆಂದು ಇಷ್ಟು ದೂರ ಬಂದರೆ ಯೇತಿಯನ್ನು ನೋಡಿದನಲ್ಲ."

ಇವುಗಳ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ :

ಇಷ್ಟ ; ಅಗೋಚರ ; ಕಠಿಣ ; ವಿಶ್ವಾಸ ; ಆಶಾದಾಯಕ.

****

# ಬಾಲ್ಯದ ನೆನಪುಗಳು

—ರವೀಂದ್ರನಾಥ ಠಾಕೂರ

ಆಗಿನ ಕಾಲವನ್ನು ಈಗಿನ ಕಾಲದ ಜೊತೆಗೆ ತುಲನೆ ಮಾಡಿದರೆ ಎಷ್ಟು ಬದಲಾವಣೆಯಾಗಿರುವುದೆಂದು ಹೊಳೆಯುತ್ತದೆ. ಇಂದಿನ ಕಾಲದ ಉಪ್ಪರಿಗೆ ಮನೆಗಳ ಮೇಲಂತಸ್ತಿನಲ್ಲಿ ಮನುಷ್ಯರಾಗಲಿ, ಭೂತಪ್ರೇತಗಳಾಗಲಿ ಯಾರೂ ವಾಸಮಾಡದಿರುವುದನ್ನು ಕಂಡಾಗ ನನಗೆ ಇದು ಹೊಳೆಯುತ್ತದೆ. ಮೊದಲೇ ತಿಳಿಸಿದ್ದೇನೆ, ಈಗಿನ ಕಾಲದ ವಿಪರೀತ ವಿದ್ಯಾಭ್ಯಾಸದ ಹೊಡತಕ್ಕೆ ತಾಳಲಾರದೆ ಬ್ರಹ್ಮದೈತ್ಯನೂ ಓಡಿ ಹೋಗಿದ್ದಾನೆಂದು. ಯಾವ ಜಾಲಂಧರದಲ್ಲಿ ಆ ದೈತ್ಯನು ಕಾಲಿಟ್ಟಿದ್ದನೆಂದು ಪ್ರತೀತಿಯಿತ್ತೋ ಅಲ್ಲಿ ಈಗ ಕಾಗೆಗಳು ಮಾವಿನ ಓಟೆಗಾಗಿ ಕಿತ್ತಾಡುತ್ತ ಗಲಭೆ ಮಾಡುತ್ತವೆ. ಈಗಿನ ಕಾಲದ ಜನಗಳೂ ಕೂಡ ಕೆಳಗಡೆಯ ಪೆಟ್ಟಿಗೆಗಳಂತಿರುವ ಕೊಠಡಿಗಳಲ್ಲಿ ಕಾಲಕಳೆಯುವರು.

ನಾಲ್ಕು ಕಡೆ ಬಾಲ್ಕೊನಿಯಿಂದ ಆವೃತವಾಗಿದ್ದ ನಮ್ಮ ಮನೆಯ ಮೇಲ್ಮಹಡಿಯು ಜ್ಞಾಪಕಕ್ಕೆ ಬರುತ್ತದೆ. ಸಾಯಂಕಾಲ ನಮ್ಮಮ್ಮ ಚಾಪೆ ಹಾಸಿಕೊಂಡು ಕೂತಿದ್ದಾಳೆ, ಸುತ್ತ ನೆರೆದಿದ್ದಾರೆ ಆ ಮಾತು ಈ ಮಾತು ಆಡುತ್ತ ಇತರ ಹೆಂಗಸರು. ಅವರ ಹರಟೆಗೆ ನಿರ್ದಿಷ್ಟವಾದ ಖಂಡಿತವಾದ ವಿಷಯವಾವುದೂ ಬೇಕಾಗಿರಲಿಲ್ಲ. ಹೇಗೋ ಹೊತ್ತು ಕಳೆದರೆ ಸಾಕು ಆಗೇನು. ದಿನ ಕಳೆಯಬೇಕಾದರೆ ಇಂದಿನಂತೆ ನಾನಾ ಬೆಲೆಯ, ನಾನಾ ಮಸಾಲೆಯ ಮಾಲುಗಳನ್ನು ಒದಗಿಸುವ ಅವಕಾಶವಿರಲಿಲ್ಲ. ಈಗಿನಂತೆ ಆಗ ದಿನವೆಂದರೆ ಒತ್ತಾಗಿ ಹೆಣೆದ ಕಸೂತಿಯಾಗಿರಲಿಲ್ಲ. ಸಡಿಲವಾಗಿ ಹೋಲೆದು ರಂಧ್ರಗಳು ಬೇಕಾದಷ್ಟಿರುವಂತಹ ಚೌಕವಾಗಿದ್ದುವು. ಗಂಡಸರ ತಂಡದಲ್ಲಾಗಲಿ, ಹೆಂಗಸರ ಗುಂಪಿನಲ್ಲಾಗಲಿ ಮಾತುಕಥೆಗಳು ನಗುಹಾಸ್ಯಗಳು ಬಹಳ ಲಘುತರದ್ದಾಗಿದ್ದವು.

ಅಮ್ಮನ ಸ್ನೇಹಿತೆಯರಲ್ಲಿ ಅತಿ ಮುಖ್ಯಳಾಗಿದ್ದವಳೆಂದರೆ ಬ್ರಜ ಆಚಾರ್ಯರ ತಂಗಿ. ಆಕೆಯನ್ನು ಆಚಾರ್ಯಿಣಿ ಎಂದು ಕೂಗುತ್ತಿದ್ದರು. ಈಕೆಯದೇ ಆ ಮಹಿಳೆಯರ ಸಭೆ

ನಿತ್ಯವೂ ಸುದ್ದಿ ಸಮಾಚಾರಗಳನ್ನು ಸರಬರಾಯಿಮಾಡುವ ಕೆಲಸ. ಈಕೆ ನಿತ್ಯವೂ, ಅವರಿವರಿಂದ ಕೇಳಿಯೋ, ಇಲ್ಲವೆ ತಾನ ಸ್ವತಃ ಸೃಷ್ಟಿಸಿಯೋ ಅನೇಕ ಕೆಟ್ಟ ಶಕುನದ ಸುದ್ದಿಗಳನ್ನೂ ತರುತ್ತಿದ್ದಳು. ಇದರಿಂದ ಮನೆಯಲ್ಲಿ ಆಗುತ್ತಿದ್ದ ಗೃಹಶಾಂತಿ, ಪುಣ್ಯಾಹಗಳ ಬಾಬತು ಖರ್ಚು ಹೆಚ್ಚಾಗುತ್ತಿತ್ತು.

ಈ ಮಹಿಳೆಯರ ಸಭೆಗೆ ನಾನು ಆಗಾಗ ಬಂದು ಹೊಸದಾಗಿ ಕಲಿತಿದ್ದ ಪುಸ್ತಕಗಳ ಜ್ಞಾನವನ್ನು 'ಆಮದು' ಮಾಡುತ್ತಿದ್ದೆ. ಸೂರ್ಯ ಒಂಬತ್ತು ಕೋಟಿ ಮೈಲಿಗಳ ದೂರ ಇರುವನೆಂದು ನಾನೇ ಅವರಿಗೆ ಹೇಳಿದುದು. 'ಋಜುಪಾಠದ'ದ ದ್ವಿತೀಯ ಭಾಗದಿಂದ ಸ್ವಯಂ ವಾಲ್ಮೀಕಿವಿರಚಿತ ರಾಮಾಯಣದ ಭಾಗಗಳನ್ನು ಅನುಸ್ವಾರ-ವಿಸರ್ಗ ಶುದ್ಧವಾಗಿ ಅವರ ಮುಂದೆ ಹೇಳಿದ್ದೇನೆ. ತನ್ನ ಮಗನ ಸಂಸ್ಕೃತ ಉಚ್ಚಾರಣೆಯ ಬಗ್ಗೆ ತೀರ್ಮಾನ ಕೊಡಲು ಅಮ್ಮನಿಗೆ ತಿಳಿಯದಾದರೂ ಸೂರ್ಯನಿರುವ ಒಂಬತ್ತು ಕೋಟಿ ಮೈಲಿ ದೂರದಷ್ಟು, ಅದನ್ನು ಅತಿಕ್ರಮಿಸಿ ಹೋಗಿರುವ ಮಗನ ವಿದ್ಯೆಯು ಅವಳನ್ನು ಅಪ್ರತಿಭಳನ್ನಾಗಿ ಮಾಡುವುದು. ಅಲ್ಲ ! ಇದೆಲ್ಲಾ ಶ್ಲೋಕಗಳನ್ನು ಸ್ವಯಂ ನಾರದಮುನಿಯಲ್ಲದೆ ಬೇರೆ ಯಾರಾದರೂ ಹೇಳಬಲ್ಲರೆಂದು ಯಾರಿಗಾದರೂ ಗೊತ್ತೇ ? ಮೇಲ್ಮಹಡಿಯ ಕೋಣೆ ಕೇವಲ ಹೆಂಗಸರ ಪ್ರಾಂತ. ಅದು ಉಗ್ರಾಣದ ಪಕ್ಕದಲ್ಲಿಯೇ ಇತ್ತು. ಅಲ್ಲಿ ಬಿಸಿಲು ಚೆನ್ನಾಗಿ ಬೀಳುತ್ತಿತ್ತು. ನಿಂಬೇಹಣ್ಣಿನ ಉಪ್ಪಿನಕಾಯಿ ತಯಾರುಮಾಡಲು ಅನುಕೂಲವಾಗಿತ್ತು. ಇಲ್ಲಿ ಹೆಂಗಸರು ಕಲಾಯಿ ಮಾಡಿದ ಹಿತ್ತಾಳೆಯ ಡಬರಿಗಳ ತುಂಬ ರುಬ್ಬಿದ ಕಾರವನ್ನಿಟ್ಟು ಕೊಡು ಕೊಡುತ್ತಿದ್ದರು. ತಲೆಕೂದಲನ್ನು ಒಣಗಿಸಿಕೊಳ್ಳುತ್ತ ಹಾಗೆಯೇ ವಿಚಕ್ಷಣತೆಯಿಂದ ಖಾರವನ್ನು ಉಂಡೆಗಳಾಗಿ ಕಟ್ಟುತ್ತಿದ್ದರು. ದಾಸಿಯರು ಮನೆಯ ಬಟ್ಟೆಗಳನ್ನು ಒಗೆದು ಒಣಗಿಹಾಕಲು ಇಲ್ಲಿ ಬರುತ್ತಿದ್ದರು. ಆಗ ಬಟ್ಟೆಗಳನ್ನು ಧೋಬಿಗೆ ಹೆಚ್ಚಾಗಿ ಹಾಕುತ್ತಿರಲಿಲ್ಲ. ಎಳೆಯ ಮಾವಿನಕಾಯಿಗಳನ್ನು ಕುಯಿದು ಹೋಳುಗಳನ್ನು ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಚಿಕ್ಕ ದೊಡ್ಡ, ನಾನಾ ಗಾತ್ರದ ಕರಿಯ ಕಲ್ಲಿನ ಅಚ್ಚುಗಳಲ್ಲಿ ಮಾವಿನಕಾಯಿಯ ರಸವನ್ನು ಪದರ ಪದರವಾಗಿ ಸುರಿಯುತ್ತಿದ್ದರು. ಎಳೆಯ ಹಲಸಿನಕಾಯಿಯ ಉಪ್ಪಿನಕಾಯಿ ಬಿಸಿಲಲ್ಲಿ ಕಾದ ಸಾಸುವೆ ಎಣ್ಣೆಯಲ್ಲಿ ನೆನೆಯಿಸಲ್ಪಡಲು ಕಾದಿತ್ತು. ತಾಂಬೂಲದ ಜೊತೆಗೆ ಹಾಕಿಕೊಳ್ಳುವ ಕಾಚನ್ನು ಸಾವಧಾನವಾಗಿ ತಯಾರುಮಾಡುತ್ತಿದ್ದರು. ಇದನ್ನು ಜ್ಞಾಪಕದಲ್ಲಿಡಲು ನನಗೆ ವಿಶೇಷವಾದ ಕಾರಣವೊಂದಿದೆ. ನಮ್ಮ ಶಾಲೆಯ ಮಾಸ್ತರು ನಮ್ಮ ಮನೆಯ ಕಾಚು ಪ್ರಸಿದ್ಧವಾದುದೆಂದು ನನ್ನೊಡನೆ ಹೇಳಿದಾಗ ನಾನು ಅವರ ಸೂಕ್ಷ್ಮವನ್ನು ತಿಳಿದುಕೊಂಡು, ನಮ್ಮ ಮನೆಯ ಹೆಸರನ್ನು ಉಳಿಸಬೇಕೆಂಬ ಉದ್ದೇಶದಿಂದ, ಒಂದು ದಿನ ಕಳ್ಳತನದಲ್ಲಿ ಕಾಚನ್ನಿಡುತ್ತಿದ್ದ ಕೋಣೆಯ ಅಟ್ಟಕ್ಕೆ ಹತ್ತಿ, ಒಂದಿಷ್ಟು ಕಾಚನ್ನು—ಏನೆಂದು ಹೇಳಲಿ ? ಕಳ್ಳತನ ಮಾಡಿದ ಎನ್ನುವ ಬದಲು 'ಅಪಹರಣ ಮಾಡಿದೆ' ಎನ್ನುವುದೇ ಸರಿ. ಏಕೆಂದರೆ ರಾಜ ಮಹಾರಾಜರೂ ಆವಶ್ಯಕವಾದಾಗ, ಆಗದಿದ್ದಾಗ ಕೂಡ, ಅಪಹರಣ ಮಾಡುತ್ತಾರೆ, ಮತ್ತು ಕಳ್ಳತನ ಮಾಡುವವನನ್ನು ಜೈಲಿಗೆ ಹಾಕುತ್ತಾರೆ, ಶೂಲಕ್ಕೆ ಹಾಕುತ್ತಾರೆ.

ಚಳಿಗಾಲದಲ್ಲಿ ಮಧ್ಯಾಹ್ನ ಸುಖವಾಗಿ ಬಿಸಿಲು ಕಾಯಿಸುತ್ತಾ, ಮೇಲ್ಮಹಡಿಯಲ್ಲಿ ಕೂತು ಹರಟೆ ಒಡೆಯುತ್ತಾ, ಕಾಗೆಗಳನ್ನು ಓಡಿಸುತ್ತಾ ಕಾಲಕಳೆಯುವುದು ಅಂದಿನ ಕಾಲದ ಹೆಂಗಸ ರೂಢಿ. ನಮ್ಮ ಅತ್ತಿಗೆಗೆ ವಯಸ್ಸಿನಲ್ಲಿ ಚಿಕ್ಕವನಾದ ಮೈದುನನೆಂದರೆ ಆ ಮನೆಯಲ್ಲಿ ನಾನೊಬ್ಬನೇ. ಅತ್ತಿಗೆಯು ತಯಾರುಮಾಡಿದ ಮಾವಿನಕಾಯಿ ಮುರಬ್ಬವನ್ನು ಬಿಸಿಲ್ಗೆ ಹಾಕಿ ಪಹರೆ ಕೊಡಬೇಕಾದರೆ ನನಗೇ ಆ ಕೆಲಸ. ಇದಲ್ಲದೆ ನಾಲ್ಕೈದು ಸಣ್ಣ ವಿಷಯ ಗಳಲ್ಲೂ ಆಕೆಯ ಸಂಗಾತಿ ಮತ್ತು ಸ್ನೇಹಿತನಾಗಿದ್ದೆ ನಾನು. ಆಕೆಗೆ ' ವಂಗಾಧಿಪಪರಾಜಯ 'ವ್ನ ಓದಿ ಹೇಳುತ್ತಿದ್ದೆ. ಎಷ್ಟೋಸಲ ಅಡಕೆ ಕತ್ತರಿಸುವ ಕೆಲಸ ನನ್ನ ಮೇಲೆ ಬೀಳುತ್ತಿತ್ತು. ಅಡಕೆ ಕತ್ತರಿಸುವುದು ನನಗೆ ಚೆನ್ನಾಗಿ ಬರುತ್ತಿತ್ತು. ನನಗೆ ಬೇರೆ ಯಾವ ಯೋಗ್ಯತೆಯಿ ವುದೆಂದೂ ಆಕೆ ನಂಬುತ್ತಿರಲಿಲ್ಲ. ನನ್ನ ಸ್ವರೂಪವನ್ನು ಕೂಡ ಹೀಗೇಕೆ ಮಾಡಿದ ಎಂ ವಿಧಾತನನ್ನು ದೂರುತ್ತಿದ್ದಳು, ನನ್ನ ಅತ್ತಿಗೆ. ಆದರೆ ನಾನು ಅಡಕೆ ಕತ್ತರಿಸುವ ಚಮತ್ಕಾರವನ್ನು ಮಾತ್ರ ಉತ್ಪ್ರೇಕ್ಷೆಮಾಡಲು ಹಿಂಜರಿಯುತ್ತಿರಲಿಲ್ಲ. ಇದರಿಂದ ಅಡಕೆ ಕತ್ತರಿಸು ಕೆಲಸ ನನ್ನ ಕೈಯಿಂದ ಬಹಳ ವೇಗವಾಗಿ ಹೋಗುತ್ತಿತ್ತು. ಆದರೆ ಬಹಳ ದಿನಗಳು ಸರಿಯಾದ ಉತ್ತೇಜನವಿಲ್ಲದೆ ಅಡಕೆ ಅಷ್ಟು ಚೆನ್ನಾಗಿ ಕತ್ತರಿಸುತ್ತಿದ್ದ ಕೈ ಈಗ ಬೇರೆ ಯಾ ಯಾವುದೋ ನಾಜೂಕಿನ ಕೆಲಸಗಳನ್ನು ಮಾಡಲಾರಂಭಿಸಿದೆ.

ಹೀಗೆ ಹರಟೆ ಕೊಚ್ಚುವ ವಿಧವಿಧವಾದ ಮನೆಗೆಲಸಗಳಲ್ಲಿ ನಿರತರಾಗಿರುವ ಮಹಿಳೆಯರ ಸಭೆ ಮೇಲ್ಮಹಡಿಯಲ್ಲಿ ನೆರೆಯುವುದರಲ್ಲಿ ಗ್ರಾಮಜೀವನದ ಒಂದು ಬಗೆಯ ಸ್ವಾದವಿತ್ತು. ಮನೆಗಳಲ್ಲಿಯೇ ಬತ್ತ ಕುಟ್ಟುತ್ತಿದ್ದಾಗ, ಆಗಾಗ ಬೆಲ್ಲದ ಪಾಕವಿಟ್ಟು ವಿಧ ವಿಧವಾ ಉಂಡೆಗಳನ್ನು ಕಟ್ಟುತ್ತಿದ್ದಾಗ, ದಾಸಿಯರು ತೊಡೆಗಳ ಮೇಲೆ ದೀಪದ ಬತ್ತಿಗಳನ್ನು ಹೊಸೆಯು ತ್ತಿದ್ದಾಗ, ನೆರೆಹೊರೆಯವರ ಮನೆಗಳಿಂದ ಶಿಶು ಜನನವಾದ ಎಂಟನೆಯ ದಿವಸ ಮನೆ ಹೆಂಗಸರಿಗೆ ಆರತಿ, ಅರಿಶಿನ ಕುಂಕುಮದ ಸಿಮಂತ್ರಣದ ಕರೆ ಬರುತ್ತಿದ್ದಾಗ ಈ ಬಗೆಯ ಸ ವ್ಯವಹಾರ ನಡೆಯುತ್ತಿತ್ತು. ಆ ಸೊಗಸಾದ ದಿನಗಳು ಇನ್ನೆಲ್ಲಿ ? ಈಗಂತೂ ಮಕ್ಕಳ ಆಡುಗೂಲಜ್ಜಿ ಕಥೆಗಳನ್ನು ತಮ್ಮ ತಾಯಿಯರ ಬಾಯಿಂದ ಕೇಳುವುದಿಲ್ಲ ; ಸ್ವತಃ ಅಚ್ಚಾ ಪುಸ್ತಕಗಳಲ್ಲಿ ಓದಿಕೊಳ್ಳುತ್ತಾರೆ. ಉಪ್ಪಿನಕಾಯಿ, ಸಾರಿನ ಪುಡಿ, ಮುರಬ್ಬಾಗಳನ್ನು ಮನೆಯ ತಯಾರು ಮಾಡುವುದಿಲ್ಲ ; ಮಾರ್ಕೆಟ್ಟಿನಿಂದ ಕಾರ್ಕಿನಿಂದ ಮುಚ್ಚಿ ಮುಂಚ್ಚಿ ಅರಗಿನಿಂದ 'ಸೀಲ್' ಮಾಡಿದ ಸೀಸೆಗಳನ್ನು ಸುಲಭವಾಗಿ ತಂದುಕೊಳ್ಳುತ್ತಾರೆ.

ಗತಿಸಿಹೋದ ಗ್ರಾಮಜೀವನದ ಮತ್ತೊಂದು ಛಾಯೆಯೇನೆಂದರೆ ಮನೆಯ ಹ ವರಾಂಡದ ಚಂಡೀಮಂಡಪ. ಅಲ್ಲಿ ನಮ್ಮ ಶಾಲೆ ನಡೆಯುತ್ತಿತ್ತು. ಅಲ್ಲಿಯೇ ನಮ್ಮ ಮನೆಯ ಹುಡುಗರೇ ಅಲ್ಲದೆ ಅಕ್ಕಪಕ್ಕದ ಮನೆಗಳ ಹುಡುಗರೂ ಬಂದು ಹಳೆಯ ತಾಳೆಗರಿ ಗ್ರಂಥಗಳಲ್ಲಿನ ಅಕ್ಷರಗಳನ್ನು ಕಲಿಯುವ ಪ್ರಯತ್ನ ಮಾಡುತ್ತಿದ್ದರು. ಬಹುಶಃ ನಾನೂ ನ ಮೊದಲನೆಯ ಅಕ್ಷರಾಭ್ಯಾಸದ ಶ್ರಮವನ್ನು ಇದೇ ವರಾಂಡದಲ್ಲಿಯೇ ಮಾಡಿದೆನೇನೋ; ಆದ

ಸೌರವ್ಯೂಹದ ಗ್ರಹದಂತೆ ದೂರವಿರುವ ಆ 'ಶಿಶು 'ಮೂರ್ತಿಯನ್ನು ಎಷ್ಟು ಸೂಕ್ಷ್ಮವಾದ ದುರ್ಬೀನಿನ ಸಹಾಯದಿಂದಲೂ ಕಾಣಲಾರೆ. ಮೊದಲನೆಯ ಪುಸ್ತಕ ಓದಿದ್ದು, ಮಾತು ಜ್ಞಾಪಕವಿದೆ. ಅದರಲ್ಲಿ ಮೊದಲು ಚಂಡಮಾರ್ಕಮುನಿಯ ಆಶ್ರಮದ ಶಾಲೆಯಲ್ಲಿ ನಡೆದ ವಿಷಮಘಟನೆ ಮತ್ತು ಆದಾದ ಮೇಲೆ ಹಿರಣ್ಯಕಶಿಪುವಿನ ಹೊಟ್ಟೆ ಬಗೆದ ನರಸಿಂಹಾವತಾರದ ಕಥೆಯಿತ್ತು. ಅದರ ಚಿತ್ರವನ್ನು ಕೂಡ ಆ ಪುಸ್ತಕದಲ್ಲಿ ನೋಡಿದಂತೆ ಜ್ಞಾಪಕ. ಇದಲ್ಲದೆ ಚಾಣಕ್ಯನ ಕೆಲವು ಶ್ಲೋಕಗಳನ್ನು ಓದಿದ ಜ್ಞಾಪಕವಿದೆ.

ಹೊರಮನೆಯ ಮಹಡಿಯ ಮೇಲಿನ ಮಾಳಿಗೆಯ ಬಯಲೇ ನನ್ನ ರಜೆಯ ದಿನಗಳ ಮುಖ್ಯ ವಿಹಾರಸ್ಥಳವಾಗಿತ್ತು. ನನ್ನ ಅತಿ ಚಿಕ್ಕ ವಯಸ್ಸಿನಿಂದ ದೊಡ್ಡವನಾಗುವವರೆಗೂ ಎಷ್ಟೋ ದಿನಗಳನ್ನು ಈ ಬಿಸಿಲು ಮಾಳಿಗೆಯಲ್ಲಿಯೇ ನಾನಾ ಭಾವಗಳಲ್ಲಿ ಕಳೆದಿದ್ದೇನೆ. ನಮ್ಮ ತಂದೆ ಮನೆಯಲ್ಲಿಯೇ ಇದ್ದಾಗ ಎರಡನೆಯ ಅಂತಸ್ತಿನಲ್ಲಿ ಅವರ ಕೊಠಡಿ. ಮಹಡಿಯ ಮೇಲು ಮೆಟ್ಟಲಿನ ಮೇಲೆ ನಿಂತು ದೂರದಿಂದ ಗುಟ್ಟಾಗಿ ಎಷ್ಟೋಸಲ ಅವರನ್ನು ತವಕದಿಂದ ನೋಡುತ್ತಿದ್ದೆನು! ಸೂರ್ಯ ಇನ್ನೂ ಹುಟ್ಟಿರುತ್ತಿರಲಿಲ್ಲ; ಅವರು ಆಗಲೇ ಅಮೃತಶಿಲೆಯ ಪ್ರತಿಮೆಯಂತೆ ನಿಸ್ತಬ್ಧರಾಗಿ ಕೈಗಳನ್ನು ಜೋಡಿಸಿ ಕೂತಿರುತ್ತಿದ್ದರು. ಆಗಾಗ ಇದ್ದಕ್ಕಿದ್ದ ಹಾಗೆ ದೂರದ ಪರ್ವತಪ್ರದೇಶಗಳಿಗೆ ಹೊರಟುಬಿಡುತ್ತಿದ್ದರು. ಆಗ ಬಿಸಿಲು ಮಾಳಿಗೆಯ ಮೇಲೆ ಹೋಗುವುದೆಂದರೆ ನನಗೆ ಸಪ್ತಸಮುದ್ರಗಳನ್ನು ದಾಟುವಷ್ಟು ಆನಂದ. ಹಿಂದೆ ಮೊದಲನೆಯ ಅಂತಸ್ತಿನ ವರಾಂಡದಲ್ಲಿ ಯಾವಾಗಲೂ ಕೂತು ದಾರಿಯಲ್ಲಿ ಹೋಗಿಬರುವ ಜನಗಳನ್ನು ಕಟಕಟೆಗಳ ಸಂದಿನಿಂದ ನೋಡುತ್ತಿದ್ದೆ. ಆದರೆ ಕಟ್ಟಕಡೆಯ ಅಂತಸ್ತಿನ ಮಹಡಿಯನ್ನೇರುವುದು ನನಗೆ ಈ ಜನಜಂಗುಳಿಯ ಲೋಕವನ್ನು ಪಾರಾಗಿಹೋಗುವ ಅನುಭವವಾಗಿತ್ತು. ಅಲ್ಲಿಗೆ ಹೋಗಿ ಕುಳಿತು ನನ್ನ ಮನಸ್ಸು ವಿಶಾಲವಾದ ಕಲಕತ್ತೆ ಷಹರಿನ ಶಿರಸ್ಸಿನ ಮೇಲೆ ಹೆಜ್ಜೆಹಾಕುತ್ತ ದೂರದ ದಿಗಂತದವರೆಗೆ ಎಲ್ಲಿ ಆಕಾಶದ ಕೊನೆಯ ಸ್ನಿಗ್ಧ ನೀಲವು ಪೃಥಿವಿಯ ಅಂತಿಮ ಹಸುರಿನೊಂದಿಗೆ ಸೇರುತ್ತದೋ ಅಲ್ಲಿಗೆ ಹೋಗುತ್ತದೆ. ಷಹರಿನ ನಾನಾ ಗಾತ್ರದ, ನಾನಾ ಆಕಾರದ ಅಸಂಖ್ಯ ಅಂತಸ್ತುಗಳ ಮೇಲ್ಮಹಡಿಗಳು ಕಣ್ಣಿಗೆ ಬೀಳುತ್ತವೆ. ಮಧ್ಯೆ ಮಧ್ಯೆ ಮರಗಳ ಮೊರಡು ತಲೆಗಳೂ ಕಾಣಬರುತ್ತವೆ.

ಸಾಧಾರಣವಾಗಿ ಮಧ್ಯಾಹ್ನದಲ್ಲಿಯೇ ನಾನು ಈ ಮಾಳಿಗೆಯ ಮೇಲೆ ರಹಸ್ಯವಾಗಿ ಹೋಗುತ್ತಿದ್ದುದು. ಯಾವಾಗಲೂ ಈ ಮಧ್ಯಾಹ್ನದ ವೇಳೆಯೇ ನನಗೆ ಅತ್ಯಂತ ಮೆಚ್ಚಿನದು. ಅದು ಹಗಲಿನ ಮಧ್ಯದ ರಾತ್ರಿಯಂತೆ ತೋರುತ್ತದೆ. ಆಗಲೇ ಬಾಲಕ 'ಸನ್ಯಾಸಿ 'ಗಳು ವೈರಾಗ್ಯಹೊಂದುವ ಸಮಯ.

ನಾನು ಮೇಲೇರಿ ಕಟಕಟೆಯ ಸಂದಿನಲ್ಲಿ ಕೈಹಾಕಿ ಬಾಗಿಲಿನ ಅಗುಳಿ ತೆಗೆಯುತ್ತಿದ್ದೆ. ಬಾಗಿಲಿಗೆ ಎದುರಾಗಿಯೇ ಸೋಫಾ ಒಂದಿರುತ್ತಿತ್ತು. ನಾನು ಹೋಗಿ ಅಲ್ಲಿ ಅತ್ಯಂತ ಏಕಾಂತವಾಗಿ ಕೂಡುತ್ತಿದ್ದೆ. ನನ್ನ ಮೇಲೆ ಉಸ್ತುವಾರಿಯಿದ್ದ ಸೇವಕರು ಹೊಟ್ಟೆತುಂಬ

ತಿಂದು ತೂಕಡಿಕೆಯಿಂದ ಆಕಳಿಸುತ್ತಾ, ಮೈಕೈ ಮುರಿಯುತ್ತಾ ಚಾಪೆಯೆಳೆದುಕೊಂಡು ಇಷ್ಟಬಂದ ಕಡೆ ಮಲಗಲು ಹೋಗುತ್ತಿದ್ದರು. ಬಿಸಿಲು ಕ್ರಮೇಣ ಬಂಗಾರದ ಬಣ್ಣಕ್ಕೆ ತಿರುಗುತ್ತಿದೆ. ಪಾರಿವಾಳವು ಚಿಲಿಪಿಲಿಗುಟ್ಟುತ್ತಾ ಆಕಾಶದ ಮೇಲಕ್ಕೆ ಹಾರಿಹೋಗುತ್ತದೆ. ಎದುರುಗಡೆಯ ಓಣಿಯಿಂದ ಬಳೆಗಾರನು ಕೂಗುವ ಶಬ್ದ ಕೇಳಿ ಬರುತ್ತಿದೆ. ಹಠಾತ್ತಾಗಿ ಅವನ ಕೂಗು ತಲೆದಿಂಬಿನ ಮೇಲೆ ಹಾಯಾಗಿ ಮಲಗಿರುವ ಮನೆಯ ಗೃಹಿಣಿಯ ಕಿವಿಗೆ ಬಿದ್ದು ಎಚ್ಚರಿಸುತ್ತದೆ. ದಾಸಿಯು ಹೋಗಿ ಅವನನ್ನು ಒಳಗೆ ಕರೆತರುತ್ತಾಳೆ. ವೃದ್ಧನಾದ ಬಳೆಗಾರನು ಕೋಮಲವಾದ ಕೈಗಳನ್ನು ಮೃದುವಾಗಿ ಒತ್ತುತ್ತಾ ಮನಸ್ಸಿಗೆ ಮೆಚ್ಚಿದ ಬಳೆಗಳನ್ನು ನಿಧಾನವಾಗಿ ತೊಡಿಸುತ್ತಾನೆ.

ಆಗಿನ ಕಾಲದ ನಿಶ್ಶಬ್ದವಾದ ಮಧ್ಯಾಹ್ನ ಈಗೆಲ್ಲಿ? ಆ ಕಾಲದ ಮೌನವನ್ನು ಭೇದಿಸಿ ಕೊಂಡು ಕೂಗುವ ಬೀದಿಯ ಮಾರಾಟಗಾರರು ಎಲ್ಲಿ? ಮದುವೆಯಾಗಿ ಗೃಹಿಣಿಯ ಅಂತಸ್ತನ್ನು ಪಡೆಯುತ್ತಿದ್ದ ಅಂದಿನ ಯುವತಿ ಇಂದು ಇನ್ನೂ ಆ ಪದವಿಯನ್ನು ಪಡೆದಿಲ್ಲ; ಎರಡನೆಯ ತರಗತಿಯಲ್ಲಿ ಪುಸ್ತಕ ಹಿಡಿದು ಬಾಯಿಪಾಠ ಮಾಡಿಕೊಂಡು ಕೂತಿದ್ದಾಳೆ ಮತ್ತು ಬಹುಶಃ ಅದೇ ಬಳೆಗಾರನೀಗ ಅದೇ ಓಣಿಯಲ್ಲಿ ರಿಕ್ಷಾಗಾಡಿಯನ್ನು ಎಳೆದು ಜೀವನ ಮಾಡುತ್ತಾನೆ.

ಈ ಬಿಸಿಲುಮಾಳಿಗೆ ನನ್ನ ಕಲ್ಪನೆಯಲ್ಲಿ ನಾನು ಭೂಗೋಳದಲ್ಲಿ ಓದಿದ ವಿಶಾಲವಾದ ಮರುಭೂಮಿ. ನಾಲ್ಕು ದಿಕ್ಕುಗಳಿಂದ 'ಭೂ ಭೂ' ಎಂದು ಬಿಸಿಗಾಳಿ ಬೀಸುತ್ತದೆ. ಧೂಳನ್ನು ಚಿಮುಕುತ್ತದೆ. ಆಕಾಶದ ನೀಲಿಯ ರಂಗನ್ನು ಮಸುಕುಮಾಡುತ್ತದೆ. ಈ ಮಾಳಿಗೆಯ ಮರುಭೂಮಿಗೆ ಆಗೊಂದು ಚಿಕ್ಕ 'ಓಯೆಸೀಸ್' (ನೀರಾವರಿ ಪ್ರದೇಶ) ಕೂಡ ಇತ್ತು. ಈಗಿನ ಕಾಲದಲ್ಲಿ ಮೇಲಂತಸ್ತಿನ ಮಹಡಿಗಳಿಗೆ ಕೊಳಾಯಿನೀರು ಬರುವುದಿಲ್ಲ. ಆಗ ಮೂರನೆ ಮಹಡಿಯವರಿಗೂ "ಪೈಪ್" ಇರುತ್ತಿತ್ತು. ಎಲ್ಲೋ ಗೂಢವಾಗಿ ಕಟ್ಟಲ್ಪಟ್ಟಿದ್ದ ಸ್ನಾನದ ಮನೆ ಎರಡನೆ ಮಹಡಿಯಲ್ಲಿತ್ತು. ಅದನ್ನು ವಂಗದೇಶದ ಶಿಶುಸಂಶೋಧಕ 'ಲಿವಿಂಗ್‌ಸ್ಟನ್' ಆದ ನಾನು ಹೇಗೋ ಕಂಡುಹಿಡಿದುಬಿಟ್ಟೆ. ಕೊಳಾಯಿ ತಿರುಗಿಸಿದ ತತ್‌ಕ್ಷಣ ಮೈಮೇಲೆ ಜಲಪಾತದಂತೆ ಧಾರಾಜಲ ಸುರಿಯಿತು. ಹಾಸಿಗೆ ಹಾಸಿದ ದುಪಟಿಯೊಂದನ್ನು ತೆಗೆದು ಚೆನ್ನಾಗಿ ಮೈ ಒರೆಸಿಕೊಂಡು ಪುನಃ ಸಹಜ ಮನುಷ್ಯನಾಗಿ ಕೂಡುತ್ತಿದ್ದೆ.

ರಜದ ದಿನ ಬರುತ್ತ ಬರುತ್ತ ಮುಗಿಯುತ್ತ ಬಂತು. ದೊಡ್ಡ ಬಾಗಿಲ ಗಡಿಯಾರ ನಾಲ್ಕು ಹೊಡೆಯಿತು. ಭಾನುವಾರದ ಸಂಜೆಯ ಆಕಾಶ ಯಾವಾಗಲೂ ಅಸಮಾಧಾನ ಕರವಾಗಿತ್ತು. ಬರುವ ಸೋಮವಾರದ ಕಾಳಛಾಯೆಯು ಅದರ ಮೇಲೆ ಆವರಿಸಿ ಗ್ರಹಣದ ನೆರಳಿನಂತೆ ನುಂಗಿಹಾಕುತ್ತಿದೆ. ಕೆಳಗಡೆ ಈಗಾಗಲೇ ನನ್ನ ಮೇಲೆ ಉಸ್ತುವಾರಿಯಿದ್ದ ಚಾಕರರು ತಪ್ಪಿಸಿಕೊಂಡು ಹೋದ ಹುಡುಗನನ್ನು ಹುಡುಕಲು ತೊಡಗಿದ್ದಾರೆ. ಈಗ

ಸಾಯಂಕಾಲದ ಫಲಾಹಾರ ಸಮಯ. ಇದೇ ನಮ್ಮ ಬ್ರಜೇಶ್ವರನ ಅತ್ಯಂತ ಪ್ರೀತಿಕರವಾದ ಸಮಯ. ಅವನದೇ ಅಲ್ಲವೆ ನಮ್ಮ ಫಲಾಹಾರದ ವಸ್ತುಗಳನ್ನು ಕೊಳ್ಳುವ ಜವಾಬುದಾರಿ ಆಗಿನ ಕಾಲದಲ್ಲಿ ದಿನಸಿ ಅಂಗಡಿಯವರು ತುಪ್ಪದ ಮಾರಾಟದಲ್ಲಿ ಶೇಕಡ ಮೂವತ್ತು-ನಲವತ್ತರಷ್ಟು ಲಾಭಕ್ಕೆ ಆಸೆ ಪಡುತ್ತಿರಲಿಲ್ಲ. ನಮ್ಮ ಫಲಾಹಾರಕ್ಕೆ ಹಾಕಿದ್ದ ತುಪ್ಪ ಘಮ್ಮೆಂತಲೇ ಇರುತ್ತಿತ್ತು. ಅದೃಷ್ಟವಶಾತ್ ಸಿಕ್ಕಿದಾಗ ಕಚೋರಿ, ಕಡುಬು, ಅಲೂಗಡ್ಡೆಯ ಬೋಂಡ ಇವುಗಳನ್ನು ಗಬಗಬ ತಿನ್ನಲು ಹೆಚ್ಚು ವಿಳಂಬವೇ ಮಾಡುತ್ತಿರಲಿಲ್ಲ ನಾವು.

ಆದರೆ ಎಷ್ಟೋಸಲ ಆ ಸಮಯಕ್ಕೆ ಬ್ರಜೇಶ್ವರನು ಒಂದು ತನ್ನ ಕತ್ತನ್ನು ಕೊಂಕಿಸಿ "ನೋಡೀ, ಬಾಬು, ಇವತ್ತು ಏನು ತಂದಿದ್ದೇನೋ ನೋಡಿ" ಎನ್ನುತ್ತ ಕಾಗದದ ಪೊಟ್ಟಣದಲ್ಲಿ ಸುತ್ತಿರುವುದನ್ನು ತೋರಿಸುವನು. ಅಲ್ಲಿರುವುದೇನು ? ಹುರಿದ ನೆಲಗಡಲೆ ಬೀಜಗಳು ಅಷ್ಟೆ. ಅವುಗಳು ನಮಗೆ ರುಚಿಯಿಲ್ಲದೆ ಇಲ್ಲ ಆದರೆ ಬ್ರಜೇಶ್ವರನಿಗೆ ಅದರ ಬೆಲೆಯಲ್ಲಿತ್ತು. ಆದರ............

ಯಾವಾಗಲೂ ನಾನು ಆಕ್ಷೇಪಣೆಯೇನೂ ಮಾಡದೆ ಅದನ್ನು ತಿನ್ನುತ್ತಿದ್ದೆ. ಒಂದೊಂದು ಸಲ ಬಾಳೆಎಲೆಯ ಪೊಟ್ಟಣದಲ್ಲಿ ಬರೀ ಎಳ್ಳಿನ ಕಜ್ಜಾಯವಿದ್ದರೂ 'ಊ, ಹೂಂ' ಎನ್ನದೆ ತಿನ್ನುತ್ತಿದ್ದೆ.

ಹಗಲಿನ ಬೆಳಕು ಕ್ರಮೇಣ ಮಸಕಾಗುತ್ತದೆ. ಮನಸ್ಸು ಕೆಟ್ಟು ಮತ್ತೆ ಒಂದು ಸಲ ಮೇಲ್ಮಾಳಿಗೆಯನ್ನು ಸುತ್ತುಹಾಕುತ್ತೇನೆ. ಕೆಳಗಡೆ ದೃಷ್ಟಿಯನ್ನು ಹಾಯಿಸುತ್ತೇನೆ. ಪುಷ್ಕರಿಣಿಯೊಳಗಿಂದ ಬಾತುಗಳ ಗುಂಪು ಮೆಟ್ಟಲುಗಳ ಮೇಲಕ್ಕೇಳುತ್ತಿದೆ. ಜನಗಳು ಸ್ನಾನ ಘಟ್ಟದ ಮೇಲೆ ಹೋಗಿ ಬರುತ್ತಿದ್ದಾರೆ. ಆ ಬದಿಯಲ್ಲಿದ್ದ ಆಲದಮರದ ನೆರಳು ಅರ್ಧ ಕೊಳದ ಮೇಲೆಲ್ಲಾ ಹರಡಿದೆ. ಬೀದಿಯಲ್ಲಿ ಜೋಡುಕುದುರೆಗಾಡಿ ಹೊಡೆಯುವವನು ದಾರಿಹೋಕರನ್ನು ಎಚ್ಚರಿಸುವ ಕೂಗು ಕೇಳಿಬರುತ್ತಿದೆ.

## ಟಿಪ್ಪಣಿ

**ಕವಿ ಮತ್ತು ಕೃತಿ :**

ಈ ಪಠ್ಯಭಾಗವನ್ನು 'ನನ್ನ ಬಾಲ್ಯದ ದಿನಗಳು' ಎಂಬ ಗ್ರಂಥದಿಂದ ಎತ್ತಿಕೊಳ್ಳಲಾಗಿದೆ. ಈ ಗ್ರಂಥದ ಮೂಲ ಲೇಖಕರು ವಿಶ್ವಕವಿ ರವೀಂದ್ರನಾಥ ಠಾಕೂರರು. ಬಂಗಾಳಿಯಲ್ಲಿರುವ ಈ ಮೂಲಗ್ರಂಥವನ್ನು ಕನ್ನಡಕ್ಕೆ ಭಾಷಾಂತರಿಸಿದವರು ಶ್ರೀ ಅಹೋಬಲ ಶಂಕರರು.

ರವೀಂದ್ರನಾಥ ಠಾಕೂರರು ಆಧುನಿಕ ಭರತಖಂಡದ ಕಾರಣಪುರುಷರಲ್ಲಿ ಒಬ್ಬರು. ಭರತಖಂಡಕ್ಕೆ ಮಾತ್ರವೇ ಅಲ್ಲ, ಇಡೀ ಜಗತ್ತಿಗೇ ಅಲಂಕಾರಪ್ರಾಯರಾಗಿ ಆದರ್ಶಪುರುಷರಾದ ಈ ಮಹನೀಯರು ಕ್ರಿ.ಶ. ೧೮೬೧ನೆ ಇಸವಿಯಲ್ಲಿ ಬಂಗಾಳದಲ್ಲಿ ಜನಿಸಿದರು. ಇವರು ತಮ್ಮ ಕಾವ್ಯಗಳಿಂದಲೂ, ರಾಷ್ಟ್ರಪ್ರೇಮದಿಂದಲೂ ಅಖಂಡ ಭರತಖಂಡದ ಆದರ ಗೌರವಗಳಿಗೆ

ಪಾತ್ರರಾಗಿದ್ದಾರೆ. ಕ್ರಿ.ಶ. ೧೯೧೩ ರಲ್ಲಿ ಜಗದ್ವಿಖ್ಯಾತವಾದ ನೋಬೆಲ್ ಪಾರಿತೋಷಕವನ್ನು ಪಡೆದು ವಿಶ್ವವಿಖ್ಯಾತರಾದರು. ಜಗತ್ತಿನ ದೇಶದೇಶಗಳಿಂದಲೂ ಆಹ್ವಾನಿತರಾ ಇವರು ವಿಶ್ವಪರ್ಯಟನೆಯನ್ನು ಮಾಡಿ, ಭರತಖಂಡದ ಸಂಸ್ಕೃತಿಯನ್ನು ಜಗದ್ವಿಖ್ಯಾತವ ಮಾಡಿದರು. ಪ್ರಾಚ್ಯ ಪಾಶ್ಚಾತ್ಯಗಳ ಧರ್ಮ, ಸಂಸ್ಕೃತಿ, ನಾಗರೀಕತೆಗಳ ಸಾರವ ಸಮನ್ವಯಗೊಳಿಸಿ ಜಗತ್ತಿನ ಜನರನ್ನು ಉದ್ಧಾರದ ಹೆದ್ದಾರಿಯಲ್ಲಿ ಕೊಂಡೊಯ್ಯಬೇಕೆಂಬು ಅವರ ಹಿರಿಯ ಗುರಿಯಾಗಿತ್ತು. ವಿಶ್ವದ ಹಿತವನ್ನು ಚಿಂತನೆ ಮಾಡುತ್ತಿದ್ದ ಆ ಮಹಾ ಪುರುಷರು 'ವಿಶ್ವಭಾರತಿ' ಎಂಬ ಹೆಸರಿನಿಂದ ವಿಶ್ವವಿದ್ಯಾನಿಲಯವೊಂದನ್ನು ಶಾಂತಿನಿಕೇತನವ ಸ್ಥಾಪಿಸಿ ವಿಶ್ವಧರ್ಮವನ್ನು ಪ್ರಸಾರಮಾಡಲು ಪ್ರಯತ್ನಿಸಿದರು. ಇವರಿಂದ ಭರತಖಂಡ ಕೀರ್ತಿ ಬೆಳೆಯಿತು. ಅವರು ಆಧುನಿಕ ಯುಗಪುರುಷರೆನಿಸಿದರು.

ರವೀಂದ್ರರ ಸಾಹಿತ್ಯಸೃಷ್ಟಿ ಸರ್ವತೋಮುಖವಾದುದು. ಕಥೆ, ಕಾದಂಬರಿ, ಪ್ರಬಂ ನಾಟಕ, ವಿಮರ್ಶೆ—ಇತ್ಯಾದಿ ಸಾಹಿತ್ಯದ ಎಲ್ಲ ಮುಖಗಳಲ್ಲಿಯೂ ಅವರು ಕಾವ್ಯರಚ ಮಾಡಿದ್ದಾರೆ. ಅವರ ಸೃಷ್ಟಿ ಬೃಹತ್ತು ಮಹತ್ತುಗಳೆರಡರಲ್ಲೂ ಅದ್ವಿತೀಯವಾಗಿ ಸಾಹಿತ್ಯಜಗತ್ತಿನಂತೆ ಸಂಗೀತ, ಚಿತ್ರ, ನಾಟಕ ಇತ್ಯಾದಿ ಕಲಾಪ್ರಪಂಚದಲ್ಲಿಯೂ ಅವ ಅಸಾಧಾರಣವಾದ ಪ್ರತಿಭೆಯನ್ನು ಮೆರೆದಿದ್ದಾರೆ. ಅವರ ರಾಷ್ಟ್ರಪ್ರೇಮವೂ ಅನ್ಯಾದೃ ವಾದುದು. ನಾವು ಇಂದು ಹಾಡುವ ರಾಷ್ಟ್ರಗೀತೆ 'ಜನಗಣಮನ' ಅವರ ರಚನೆಯೇ.

'ನನ್ನ ಬಾಲ್ಯದ ದಿನಗಳು' ರವೀಂದ್ರರ ಬಾಲ್ಯದ ಸವಿನೆನಪುಗಳ ಸುಂದರ ಚಿತ್ರಣವನ್ನು ಒಳಗೊಂಡ ಒಂದು ಸ್ವರ್ಣಸ್ವಪ್ನದಂತೆ ರಮ್ಯವಾಗಿದೆ. ಅದರಲ್ಲಿನ ಒಂದು ಸಣ್ಣ ಭಾಗವನ್ನು ಇಲ್ಲಿ ಎತ್ತಿ ಕೊಟ್ಟಿದೆ.

ಇದನ್ನು ಭಾಷಾಂತರಿಸಿರುವ ಶ್ರೀ ಅಹೋಬಲ ಶಂಕರರು ಕನ್ನಡದಷ್ಟೇ ಬಂಗಾ ಯಲ್ಲಿಯೂ ಆಳವಾದ ಪಾಂಡಿತ್ಯವುಳ್ಳವರು. ರವೀಂದ್ರರ ಸಾಹಿತ್ಯವನ್ನೆಲ್ಲ ಕನ್ನಡ ತಂದುಕೊಳ್ಳ ಹೊರಟು, ಅದರಲ್ಲಿ ಬಹುಮಟ್ಟಿಗೆ ಕೃತಕೃತ್ಯರಾಗಿದ್ದಾರೆ.

## ಕಠಿಣ ಪದಗಳ ಅರ್ಥ :

ತುಲನೆ—ತುಲನಾ, (ಸಂ.) ಹೋಲಿಕೆ. ಬ್ರಹ್ಮದೈತ್ಯ—ಬ್ರಹ್ಮರಾಕ್ಷಸ. ಜಾಲಂಧರ—ಸಣ್ಣಕಂಬಿಯ ಬಲೆಯಿಂದ ಕೂಡಿದ ಕಿಟಕಿ. ಪ್ರತೀತಿ—ಹೇಳಿಕೆ ; ಸುದ್ದಿ. ಬಾಲ್ಕೊನಿ—ಬಿಸಿಲುಮಚ್ಚು ; ಉಪ್ಪರಿಗೆಯ ಮೊಗಸಾಲೆ. ಆವೃತ—ಸುತ್ತುವರೆದ. ನೆರೆ—ಒಟ್ಟಿ ಸೇರು. ನಿರ್ದಿಷ್ಟ—ಗೊತ್ತಾದ. ಲಘು—ಸಣ್ಣ ; ಚಿಕ್ಕ. ಸರಬರಾಯಿಮಾಡುವ—ಒದಗಿಸುವ. ಪುಣ್ಯಾಹ—ಶುದ್ಧಿಕರ್ಮ. ಆಮದು—ಹೊರಗಿನಿಂದ ತರಿಸುವುದು. ಅತಿಕ್ರಮ—ಮೀರುವುದು. ಅಪ್ರತಿಭೆ—ಬೆರಗು. ಪ್ರಾಂತ—ಪ್ರದೇಶ. ಉಗ್ರಾಣ—

ಸಾಮಗ್ರಿಗಳನ್ನು ತುಂಬಿಡುವ ಕೋಣೆ ಕಾಚು—ಮರದ ಸತ್ವದಿಂದ ಮಾಡಿದ ಒಗರು ಪದಾರ್ಥ; ತಾಂಬೂಲ ಹಾಕುವವರು ಇದನ್ನು ಉಪಯೋಗಿಸುತ್ತಾರೆ. ಪಹರೆ—ಕಾವಲು. ನಾಲ್ಕು + ಐದು—ನಾಲ್ಕೈದು (ಗ. ಸ.). ವಿಧಾತ—ಬ್ರಹ್ಮ. ಚಮತ್ಕಾರ—ಚತುರತನ.

ನಿರಂತರ—ಬಿಡುವಿಲ್ಲದ. ನಿಮಂತ್ರಣ—ಕರೆ. ಆಹ್ವಾನ. ಅಡುಗೂಲಜ್ಜಿ—ಹಳೆಯ ಕಾಲದ ಮುದುಕಿ, ದಾರಿಹೋಕರಿಗೆ ಊಟ ಹಾಕಿ ತನ್ನ ಜೀವನ ನಡೆಸುವವಳು. ಕಾರ್ಕು—ಬಿರಡೆ.

ಗತಿಸಿಹೋದ—ಕಳೆದುಹೋದ. ಛಾಯೆ—ನೆರಳು. ಸೌರವ್ಯೂಹ—ಸೂರ್ಯನ ಸುತ್ತಲೂ ಇರುವ ಗ್ರಹರಚನೆ. ದುರ್ಬೀನು—ದೂರದರ್ಶಕಯಂತ್ರ. ವಿಷಮ—ಕೆಟ್ಟ. ವಿಹಾರಸ್ಥಳ—ಹಾಯಾಗಿ ತಿರುಗಾಡುವ ಜಾಗ. ತವಕ—ಆತುರ. ಅಮೃತಶಿಲೆ—ಬಿಳುಪಾದ ಹೊಳಪಿನಿಂದ ಕೂಡಿದ ಒಂದು ಜಾತಿಯ ಕಲ್ಲು (ಆಗ್ರದಲ್ಲಿ ತಾಜಮಹಲ್ ಕಟ್ಟಿರುವುದು ಈ ಕಲ್ಲಿನಿಂದಲೆ). ಸಪ್ತಸಮುದ್ರ—ಏಳು ಸಮುದ್ರಗಳು. (ಉಪ್ಪು. ಕಬ್ಬಿನ ಹಾಲು, ಹೆಂಡ, ತುಪ್ಪ, ಮೊಸರು, ಹಾಲು. ಸಿಹಿನೀರು).

ಜನಜಂಗುಳಿ—ಜನರ ಗುಂಪು. ಪಾರಾಗು—ದಾಟು. ಷಹರು—ಪಟ್ಟಣ. ಶಿರ—ತಲೆ. ದಿಗಂತ—ದಿಕ್ಕಿನ ಕೊನೆ. ಸ್ನಿಗ್ಧ—ನುಣುಪು. ಪೃಥಿವಿ—ಭೂಮಿ. ಅಂತಿಮ—ಕೊನೆ.

ಉಸ್ತುವಾರಿ- ಕಾವಲು. ಹಠಾತ್ತಾಗಿ—ಇದ್ದಕ್ಕಿದ್ದ ಹಾಗೆ; ಒಮ್ಮಿಂದೊಮ್ಮೆಲೆ. ಕೋಮಲ—ಮೃದು. ರಂಗು—ಬಣ್ಣ. ಮರುಭೂಮಿ—ಮರಳುಗಾಡು. ಓಯಸಿಸ್—ಮರಳುಗಾಡಿನಲ್ಲಿ ನೀರಿನ ಆಸರೆ ಇರುವ ಪ್ರದೇಶ. ಗೂಢವಾಗಿ—ಕಾಣದ ಹಾಗೆ. ತತ್‌ಕ್ಷಣ-ಕೂಡಲೆ. ಜಲಪಾತ—ನದಿಯ ನೀರು ಆಳವಾದ ಪ್ರದೇಶಕ್ಕೆ ಬಿದ್ದು ಹರಿಯುವುದು. ಧಾರಾಜಲ—ದಾನ ಮಾಡುವ ಕಾಲದಲ್ಲಿ ಬಿಡುವ ನೀರು. ಕಾಳ—ಕಪ್ಪು. ಫಲ + ಆಹಾರ— ಫಲಾಹಾರ (ಸ. ದೀ. ಸಂ.) ಗಬಗಬ (ಅನುಕರಣಾವ್ಯಯ)

ನಾರದಮುನಿ—ದೇವಲೋಕದ ಋಷಿ. ಮೂರು ಲೋಕಗಳಲ್ಲಿಯೂ ಸಂಚಾರ ಮಾಡಬಲ್ಲವನು. ಆಪತ್ತಿಗೆ ಗುರಿಯಾದವರಿಗೆ ತಕ್ಕ ಪ್ರತೀಕಾರವನ್ನು ತೋರಿ, ಸಹಾಯಮಾಡುವುದರ ಮೂಲಕ ಲೋಕಕ್ಕೆ ಮಂಗಳವನ್ನುಂಟುಮಾಡುವುದೇ ಈತನ ಜನ್ಮವ್ರತ.

ಮುರಬ್ಬ—ಕೆಲವು ಕಾಯಿಪಲ್ಲೆಗಳನ್ನು ಸಕ್ಕರೆಯ ಪಾಕದಲ್ಲಿ ನೆನೆಸಿಟ್ಟು ಸೂರ್ಯನ ಶಾಖ ಇಲ್ಲದ ನೆರಳಿನಲ್ಲಿ ಪಕ್ವಗೊಳಿಸುತ್ತಾರೆ. ಹೀಗೆ ಸಕ್ಕರೆ ಪಾಕದಿಂದ ಪಕ್ವವಾಗಿ ಒಣಗಿದ

ಫಲಗಳನ್ನು ಮುರಬ್ಬ ಎಂದು ಕರೆಯುತ್ತಾರೆ. ನೆಲ್ಲಿಕಾಯಿ ಮುರಬ್ಬ, ತುಂಡಿ ಮುರಬ್ಬ, ಗಜರಿ ಮುರಬ್ಬ ಇತ್ಯಾದಿ ಬಗೆಬಗೆಯ ಮುರಬ್ಬಗಳಿವೆ.

ತಾಳೆಗರಿ ಗ್ರಂಥ—ಹಿಂದಿನ ಕಾಲದಲ್ಲಿ ಕಾಗದಗಳ ಬಳಕೆಯಿರಲಿಲ್ಲ. ಆಗ ವಿದ್ವಾಂಸರು ತಾಳೆಗರಿಗಳ ಮೇಲೆ ಕಂಠದಿಂದ ಬರೆದಿಡುತ್ತಿದ್ದರು. ಈ ರೀತಿ ಬರೆದ ಓಲೆಗರಿ ಕಟ್ಟುಗಳನ್ನು ತಾಳೆಗರಿ ಗ್ರಂಥ, ತಾಡವಾಲೆ ಎಂದು ಕರೆಯುತ್ತಾರೆ.

ಹಿರಣ್ಯಕಶಿಪು—ಇವನು ಒಬ್ಬ ರಾಕ್ಷಸ, ಶಿವಭಕ್ತ. ಇವನ ಮಗ ಪ್ರಹ್ಲಾದ, ಇವನು ವಿಷ್ಣುಭಕ್ತ. ತಾನು ವಿಷ್ಣುದ್ವೇಷಿಯಾದುದರಿಂದ ತನ್ನ ಮಗನನ್ನು ಕೊಲ್ಲಬೇಕೆಂದು ಪ್ರಯತ್ನ ಪಟ್ಟು ಅನೇಕ ಹಿಂಸೆಗಳನ್ನು ಕೊಡುತ್ತಾನೆ, ಹಿರಣ್ಯಕಶಿಪು. ವಿಷ್ಣುವಿನ ಪ್ರಭಾವದಿಂದ ಪ್ರಹ್ಲಾದನು ಎಲ್ಲ ಹಿಂಸೆಗಳಿಂದಲೂ ಪಾರಾಗುತ್ತಾನೆ. ಕೊನೆಗೆ ಹಿರಣ್ಯಕಶಿಪು ತಾನೇ ಕತ್ತಿ ಹಿಡಿದು ಕೊಲ್ಲಲು ಹೋಗುತ್ತಾನೆ; ವಿಷ್ಣುವು ನರಸಿಂಹರೂಪವನ್ನು ಧರಿಸಿ ಹಿರಣ್ಯಕಶಿಪುವನ್ನು ಕೊಂದು ಭಕ್ತ ಪ್ರಹ್ಲಾದನನ್ನು ಕಾಪಾಡುತ್ತಾನೆ.

ಚಾಣಕ್ಯ—ಈತನೊಬ್ಬ ಅರ್ಥಶಾಸ್ತ್ರಪ್ರವೀಣ. ಅನಾಥನಾಗಿದ್ದ ಚಂದ್ರಗುಪ್ತನಿಗೆ ಆಶ್ರಯವನ್ನು ಕೊಟ್ಟು ದ್ರೋಹಿಗಳಾದ ನವನಂದರನ್ನು ಸಂಹರಿಸಿ, ಚಂದ್ರಗುಪ್ತನನ್ನು ಪಾಟಲೀಪುರದ ದೊರೆಯನ್ನಾಗಿ ಮಾಡಿ, ಕೆಲವು ದಿನ ಆತನ ಮಂತ್ರಿಯಾಗಿದ್ದು, ಕೊನೆಯಲ್ಲಿ ಅಮಾತ್ಯ ರಾಕ್ಷಸನನ್ನು ಮಂತ್ರಿಯನ್ನಾಗಿ ಮಾಡುತ್ತಾನೆ. ಕೌಟಿಲ್ಯ ಎನ್ನುವುದು ಈತನ ಮತ್ತೊಂದು ಹೆಸರು.

ಪ್ರಶ್ನೆಗಳು :

೧. ಠಾಕೂರರು ತಮ್ಮ ತಾಯಿಯ ಗೆಳತಿಯರನ್ನು ಕುರಿತು ಏನು ಹೇಳಿದ್ದಾರೆ?

೨. ತಮ್ಮನ್ನು ನೋಡಿಕೊಳ್ಳುತ್ತಿದ್ದ ಸೇವಕರ ಬಗೆಗೆ ಠಾಕೂರರು ಏನು ಹೇಳಿದ್ದಾರೆ?

೩. ತಮ್ಮ ಬಾಲ್ಯದ ವಿದ್ಯಾಭ್ಯಾಸವನ್ನು ಕುರಿತು ರವೀಂದ್ರರು ಏನು ಹೇಳುತ್ತಾರೆ?

೪. ತಮ್ಮ ಅತ್ತಿಗೆಯೊಡನೆ ತಮಗಿದ್ದ ಬಾಂಧವ್ಯವನ್ನು ಲೇಖಕರು ಹೇಗೆ ವರ್ಣಿಸಿದ್ದಾರೆ?

೫. ಬಿಸಿಲು ಮಾಳಿಗೆಯೊಡನೆ ರವೀಂದ್ರರ ಬಾಲ್ಯಜೀವನಕ್ಕೆ ಇದ್ದ ಬಾಂಧವ್ಯವನ್ನು ವಿವರಿಸಿ.

೬. ಠಾಕೂರರ ಬಾಲ್ಯಜೀವನದಲ್ಲಿ ನಿಮಗೆ ಮೆಚ್ಚುಕೆಯಾದ ಎರಡು ಸ್ವಾರಸ್ಯ ಪ್ರಸಂಗಗಳನ್ನು ತಿಳಿಸಿ.

೭. ನಿಮ್ಮ ಬಾಲ್ಯದ ನೆನಪುಗಳನ್ನು ಸಂಗ್ರಹಿಸಿ ಬರೆಯಿರಿ.

ಈ ವಾಕ್ಯಗಳ ಸ್ವಾರಸ್ಯವನ್ನು ವಿವರಿಸಿ :

೧. 'ಈಗಿನಂತೆ ಆಗ ದಿನವೆಂದರೆ ಒತ್ತಾಗಿ ಹೆಣೆದ ಕಸೂತಿಯಾಗಿರಲಿಲ್ಲ'.

೨. 'ಕಳ್ಳತನ ಮಾಡಿದೆ ಎನ್ನುವ ಬದಲು ಅಪಹರಣ ಮಾಡಿದೆ ಎನ್ನುವುದೇ ಸರಿ.'

೩. 'ಸೌರವ್ಯೂಹದ ಗ್ರಹದಂತೆ ದೂರವಿರುವ ಆ ಶಿಶುಮೂರ್ತಿಯನ್ನು ಎಷ್ಟು ಸೂಕ್ಷ್ಮವಾದ ದುರ್ಬೀನಿನ ಸಹಾಯದಿಂದಲೂ ಕಾಣಲಾರೆ.'

೪. 'ಅದೇ ಬಳೆಗಾರನೀಗ ಅದೇ ಓಣಿಯಲ್ಲಿ ರಿಕ್ಷಾಗಾಡಿಯನ್ನು ಎಳೆದು ಜೀವನ ಮಾಡುತ್ತಾನೆ.'

ಕೆಳಗಣ ವಾಕ್ಯದಲ್ಲಿನ ಪದಗಳ ರೂಪನಿಷ್ಪತ್ತಿಯನ್ನು ತಿಳಿಸಿ :

ವೃದ್ಧನಾದ ಬಳೆಗಾರನು ಕೋಮಲವಾದ ಕೈಗಳನ್ನು ಮೃದುವಾಗಿ ಒತ್ತುತ್ತಾ ಮನಸ್ಸಿಗೆ ಮೆಚ್ಚಿದ ಬಳೆಗಳನ್ನು ನಿಧಾನವಾಗಿ ತೊಡಿಸುತ್ತಾನೆ.

****

# ಕುವರ ವಿಷ್ಣುವಿನ ಕನಸು

—ಕೆ. ವಿ. ಅಯ್ಯರ್.

ಕನಸೆಂದೆನೆ! ಕನಸಲ್ಲ ಅಕ್ಕ ಅದು, ನಾನು ಕಣ್ಣು ತೆರೆದುಕೊಂಡೇ ಇದ್ದೆ…ಹೊಯಿಸಳೇಶ್ವರ, ಶಾಂತಲೇಶ್ವರ ದೇವಾಲಯಗಳನ್ನು ಕಟ್ಟಿ ಮುಗಿಸಿದ್ದರು. ಎರಡು ಆಲಯಗಳ ಪೂರ್ವ ಮುಖದಲ್ಲಿರುವ ದೊಡ್ಡ ದೊಡ್ಡ ನಂದಿಮಂಟಪಗಳನ್ನೂ ಕಟ್ಟಿ ಆಗಿತ್ತು. ನಂದಿಗಳು ಮಾತ್ರ ಸಿದ್ಧವಾಗಿರಲಿಲ್ಲ. ಅದಕ್ಕೆ ತಕ್ಕ ಘನ ಶಿಲೆಗಳು ಸಿಗದಿದ್ದುದೇ ಕಾರಣ. ಆಗ ಅಪ್ಪಾಜಿಯವರು 'ಯಾರೇ ಆಗಲಿ, ಇಷ್ಟು ದೊಡ್ಡಪ್ರಮಾಣದ ಮೆತು ಶಿಲೆಗಳನ್ನು ಸುತ್ತಮುತ್ತ ಪ್ರದೇಶಗಳಲ್ಲಿ ಎರಡು ಮೂರು ಹರಿದಾರಿಗಳ ದೂರದೊಳಗೆ ಎಲ್ಲಿ ಹುಡುಕಿ ಕೊಟ್ಟರೂ, ಅವರಿಗೆ ಹತ್ತು ಹತ್ತು ಹೊನ್ನ ಗದ್ಯಾಣಗಳ ಬಹುಮಾನ ಕೊಡುವೆ'ವೆಂದು ಸಾರಿದರಲ್ಲವೇ? ಅದನ್ನು ನೀನೂ ಬಲ್ಲೆ. ಜನರು ಅಂತಹ ಶಿಲೆಗಳನ್ನು ಕೊನೆಗೆ ಹುಡುಕಿ ತೆಗೆದು, ಬಹುಮಾನಗಳನ್ನು ಪಡೆದರಲ್ಲ.

ಆಗ ಭಾದ್ರಪದ ಹುಣ್ಣಿಮೆಗೆ ಇನ್ನು ಇದ್ದುದು ಎರಡೇ ತಿಂಗಳು. ಅಷ್ಟರಲ್ಲಿ ನಂದಿಗಳೆರಡೂ ಸಿದ್ಧವಾಗಬೇಕಾಯಿತು. ಅಪ್ಪಾಜಿಯವರು ಆ ಕೆಲಸಕ್ಕೆ ನೂರು ರೂವಾರಿಗಳನ್ನು ನೇಮಿಸಿ, ಒಂದೂವರೆ ತಿಂಗಳೊಳಗಾಗಿ ನಂದಿಗಳು ಸಿದ್ಧವಾಗಬೇಕೆಂದು ಕಟ್ಟಾಜ್ಞೆ ಮಾಡಿದರು. ರೂವಾರಿಗಳು ಕಾಡಿನಲ್ಲೆ ಬಿಡಾರ ಮಾಡಿಕೊಂಡು ಆ ಬೃಹದಾಕಾರದ ನಂದಿಗಳನ್ನು ಮಹಾದೇವನ ಪ್ರತಿಷ್ಠಾಪನೆಗೆ ಇನ್ನೂ ಇಪ್ಪತ್ತು ದಿನಗಳಿರುವಾಗಲೆ ಸಿದ್ಧಮಾಡಿದರಲ್ಲವೆ? ಇದನ್ನೂ ನೀನು ಬಲ್ಲೆ.

ಬೃಹದಾಕಾರವಾದರೂ ಬಹು ಸುಂದರವಾದ ನಂದಿಗಳು ಅವು. ಪ್ರಕಾಂಡ ದೇಹ, ಆಕಾರಕ್ಕೆ ಸರಿಯಾದ ಅಂಗಸೌಷ್ಠವ. ಅಲಂಕಾರಗಳು. ಸರಪಳಿಗಳು, ಕಿರುಗೆಜ್ಜೆ, ಬಿರುಗೆಜ್ಜೆ, ಸರಗಳು, ಕಿರುಗಂಟೆ, ಬಿರುಗಂಟೆ, ಗಳಗಂಟೆ ಸರಗಳು, ಮೈತುಂಬ ಒಡವೆಗಳು. ಮಹಾದೇವನಿಗೆ ಒಪ್ಪುವಂತಹ ವಾಹನಗಳವು. ನಾವೆಲ್ಲ ಹೋಗಿ ನೋಡಿ ಬಂದೆವು. ನೀನು ಆ ದಿನ

ನಿಮ್ಮೂರಿನ ಧರ್ಮೇಶ್ವರನಿಗೆ ಸೇವೆ ಸಲ್ಲಿಸಲು ಹೋಗಿದ್ದೆ. ಆ ನಂದಿಗಳಿರುವ ಸ್ಥಳಕ್ಕೂ, ನಮ್ಮ ರಾಜಧಾನಿಗೂ ಸುಮಾರು ನಾಲ್ಕು ಹರಿದಾರಿಗಳ, ಹತ್ತಿರ ಹತ್ತಿರ ಒಂದು ಗಾವುದದಷ್ಟು ದೂರ ಇತ್ತು.

ಅನಂತರ ಬಂದುದು ಕಷ್ಟ. ಆ ಮಹಾನಂದಿಗಳನ್ನು ಇಲ್ಲಿಗೆ ಸಾಗಿಸಿಕೊಂಡು ಬರುವುದು ಅಸಾಧ್ಯವಾಯಿತು. ಎಂಟೆಂಟು ಚಕ್ರಗಳುಳ್ಳ ಎರಡು ಮಹಾ ಶಕಟಗಳನ್ನು ಆಗಲೆ ನಿರ್ಮಿಸಿ ಆಗಿತ್ತು. ಆ ನಂದಿಗಳೆರಡನ್ನೂ ಯಾವ ಭಿನ್ನವೂ ಇಲ್ಲದೆ ಶಕಟಗಳಿಗೆ ಸಾಗಿಸಲು ಮಹಾ ಪ್ರಯಾಸವಾಯಿತು. ಆ ನಂದಿಗಳನ್ನು ಅಲುಗಾಡದಂತೆ ಆನೆಸೊಂಡಿಲ ಗಾತ್ರದ ಹಗ್ಗಗಳಿಂದ ಆ ಶಕಟಕ್ಕೆ ಬಿಗಿದು ಕಟ್ಟಿಯಾಯಿತು. ನಾಲ್ಕು ನಾಲ್ಕು ಆನೆಗಳನ್ನು ಕಟ್ಟಿ ಎಳೆಸಿದರು. ಇದಕ್ಕಾಗಿ ರಾಜಧಾನಿಯವರೆಗೆ ಒಂದು ಮಾರ್ಗವೆ ನಿರ್ಮಾಣವಾಯಿತು. ಶಕಟಗಳು ಸ್ವಲ್ಪ ದೂರ ಬಂದ ಮೇಲೆ ಮಳೆಯಿಂದ ನೆನೆದಿದ್ದ ಕಡೆಯ ಭೂಮಿಯಲ್ಲಿ ಶಕಟದ ಚಕ್ರಗಳು ನಂದಿಗಳ ಭಾರಕ್ಕೆ ಹೂತುಹೋದುವು. ಹೆಚ್ಚು ಆನೆಗಳನ್ನು ಕಟ್ಟಿ ಎಳೆಸಿದರು. ಎಳೆದಷ್ಟೂ ಚಕ್ರಗಳು ಇನ್ನೂ ಇನ್ನೂ ಆಳಕ್ಕೆ ಹೂತವು. ಆನೆಗಳ ಎಳೆತಕ್ಕೆ ಶಕಟದ ಮರದ ದೂಲಗಳು ಕಿತ್ತು ಬಂದುವು. ಚಕ್ರಗಳು ಮಾತ್ರ ಮೇಲಕ್ಕೆ ಏಳಲೇ ಇಲ್ಲ. ವಿಶ್ವಪ್ರಯತ್ನಪಟ್ಟಾಯಿತು. ಚಕ್ರಗಳು ಅಲ್ಲೆ ಭೂಸಮಾಧಿಯಾದವು.

ಹೀಗಾದುದನ್ನು ಕೇಳಿ ಅಪ್ಪಾಜಿಯವರಿಗೂ ನನಗೂ ದಿಕ್ಕೇ ತೋರದಾಯಿತು. ಜನರೆಂದರು : 'ವರ್ಷಾಕಾಲ ಮುಗಿಯುವತನಕ ಈ ನಂದಿಗಳನ್ನು ಅಲ್ಲಿಂದ ತರಲು ಸಾಧ್ಯವಿಲ್ಲ' ಎಂದು. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ. ಅಕ್ಕ, ಇನ್ನು ಉಳಿದುದು ಐದೇ ದಿನ. ನಂದಿಗಳು ನಾಲ್ಕು ಹರಿದಾರಿ ದೂರದಲ್ಲೆ ಉಳಿದುವು. ಎಲ್ಲರ ಮುಖಗಳಲ್ಲಿಯೂ ನಿರಾಶಾಭಾವ ಕಂಡುಬಂದಿತು. ಅಪ್ಪಾಜಿಯವರಿಗೂ, ನನಗೂ ಮಹಾವ್ಯಥೆಯುಂಟಾಯಿತು. ಕೇತಮಲ್ಲ ನಾಯಕರು 'ಇಷ್ಟೆಲ್ಲವನ್ನೂ ನಡೆಸಿಕೊಟ್ಟ ದೇವರು ಈಗ ಕೈಬಿಟ್ಟನೇಕೆ ?' ಎಂದು ಬಹು ಸಂಕಟಪಟ್ಟರು. ಅಪ್ಪಾಜಿಯವರಿಗಂತೂ ಮಹಾದೇವನ ಪ್ರತಿಷ್ಠೋತ್ಸವವನ್ನು ಪೂರ್ಣಗೊಳಿಸಿಯೆ ಚಾಲುಕ್ಯರಮೇಲೆ ದಿಗ್ವಿಜಯಕ್ಕೆ ಹೋಗಬೇಕೆಂಬ ಆಸೆಯಿತ್ತು. 'ಮಹಾದೇವ, ನಿನ್ನ ಆಶೀರ್ವಾದವಿಲ್ಲದಿದ್ದರೆ, ನಾನು ದಿಗ್ವಿಜಯ ಹೊರಡುವವನಲ್ಲ' ಎಂದು ಕುಳಿತುಬಿಟ್ಟರು.

ಅಪ್ಪಾಜಿಯವರೂ, ನೀನೂ ವ್ರತವಿದ್ದು ಮಹಾದೇವನನ್ನು ಮನಸಾರೆ ಪೂಜಿಸಿ 'ಮಹಾದೇವ, ಈಗ ನೀನೇ ದಾರಿ ತೋರಬೇಕು' ಎಂದು ಬೇಡಿದಿರಿ. ಅಕ್ಕ, ಆ ರಾತ್ರಿ ನನಗೊಂದು ಸ್ವಪ್ನವಾಯಿತು : 'ನಿಮ್ಮ ಸಿದ್ಧತೆಗಳನ್ನು ನೀವು ಮಾಡಿಕೊಳ್ಳಿ, ನನ್ನ ನಂದಿಗಳನ್ನು ನಾನು ಕರಸಿಕೊಳ್ಳುತ್ತೇನೆ' ಎಂದು ಮಹಾದೇವನೆ ನನ್ನ ಕನಸಿನಲ್ಲಿ ಬಂದು ಹೇಳಿದ. ಈ ಮಾತು ನಂಬಲಾಗದಷ್ಟು ಆಶ್ಚರ್ಯವಾಗಿ ಕಂಡಿತು ನನಗೆ. ಅಪ್ಪಾಜಿಯವರೂ ಅದೇ ರಾತ್ರಿ ಅದೇ ಕನಸನ್ನು ಕಂಡರು : 'ನಿಮ್ಮ ಸಿದ್ಧತೆಗಳನ್ನು ನೀವು ಮಾಡಿಕೊಳ್ಳಿ, ನನ್ನ ನಂದಿಗಳನ್ನು

ನಾನೆ ಕರಸಿಕೊಳ್ಳುತ್ತೇನೆ 'ಎಂದು. 'ಇದು ಹೇಗೆ! ಹೇಗೆ ಸಾಧ್ಯ ? ನಂಬುವದೆಂತು ! ಇಬ್ಬ
ಒಂದೇ ರೀತಿಯ ಭರವಸೆ ಬಂದಿರುವುದಲ್ಲ ! ಮಹಾದೇವ, ಈಗ ನಾವು ಕರ್ತವ್ಯ
ರಾಗುವುದೇ ? ಅಥವಾ ಸುಮ್ಮನಿರುವುದೆ ?' ಎಂಬ ಶಂಕೆ ನಿಮ್ಮಿಬ್ಬರಲ್ಲಿ ಹುಟ್ಟಿತು
'ನಮ್ಮ ನಂಬುಗೆಯನ್ನು ಪರೀಕ್ಷಿಸುವುದಕ್ಕಾಗಿಯೇ ಪರಶಿವನು ಹೀಗೆಂದಿರಬೇಕು. ನ
ಇಡದಿದ್ದರೆ ದೈವದ್ರೋಹಿಗಳಾಗುವೆವು. ದೈವವನ್ನು ಪರೀಕ್ಷಿಸುವುದು ತಗದು. ಭಗವಂತನು
ನಂದಿಗಳನ್ನು ಸಮಯಕ್ಕೆ ಕರಸಿಕೊಳ್ಳುತ್ತಾನೆ. ಇಲ್ಲದಿದ್ದರೆ ಇಬ್ಬರಿಗೂ ಒಂದೇ
ಒಂದೇ ಹೊತ್ತಿನಲ್ಲಿ, ಒಂದೇ ರೀತಿಯ ಸ್ವಪ್ನವಾಗುತ್ತಿರಲಿಲ್ಲ. ಇದನ್ನು ನಾವು ದೃಢ
ನಂಬಬೇಕು' ಎಂದು ನೀನು ಅಪ್ಪಾಜಿಯವರಿಗೆ ಹೇಳಿದೆ.

ನೀನೆಂದ ಮಾತಿನಲ್ಲಿ, ರೀತಿಯಲ್ಲಿ, ಅಪ್ಪಾಜಿಯವರಿಗೆ ವಿಶ್ವಾಸ ಉಂಟಾಯಿತು. 'ಸ
ತಂತ್ರ ಸ್ವತಂತ್ರನು ತನ್ನ ನಂದಿಗಳನ್ನು ಹೇಗೋ ಕರಸಿಕೊಳ್ಳುವನು, ನಮ್ಮ ಎಲ್ಲ ಸ
ಗಳನ್ನು ನಾವು ಮಾಡಿಕೊಳ್ಳೋಣ' ಎಂದು ಅಪ್ಪಾಜಿಯವರೂ ಒಪ್ಪಿದರು.

'ಸತ್ಯಯುಗಗಳಲ್ಲಿ' ಧರ್ಮಯುಗಗಳಲ್ಲಿ ಇಂತಹ ದೈವಲೀಲೆಗಳನ್ನು ಆಗಿನ ಜ
ಕಂಡದ್ದುಂಟು. ಈ ಕಲಿಯುಗದಲ್ಲೂ ಇಂತಹ ಪವಾಡ ಒಂದಾದರೂ ಆದರೆ ಜ
ಧರ್ಮಿಗಳಾದಾರು ; ಅಧರ್ಮಿಗಳೂ, ನಾಸ್ತಿಕರೂ ಬಣ್ಣಗೆಟ್ಟಾರು. ನಮ್ಮ ವಿಷ್ಣುವ
ಶಾಂತಲದೇವಿಯರ ಕಾಲ ಸತ್ಯಯುಗ. ಇದು ಅವರ ಧರ್ಮ ತಪಸ್ಸುಗಳ ಫಲ. ಇ
ಪ್ರಭುಗಳ ಪೋಷಣೆಯಲ್ಲಿರುವ ನಾವು ಧನ್ಯರು. ಈ ದೈವಲೀಲೆಯನ್ನು ನೋಡುವ ಸ
ನಮ್ಮದು' ಎಂದು ಪ್ರಜೆಗಳೆಲ್ಲ ಆನಂದಪಟ್ಟರು.

'ರೂವಾರಿಗಳೂ' ಇತರ ಕೆಲಸಗಾರರೂ ನಂದಿಗಳು ಎಲ್ಲಿರುವವು ಅಲ್ಲಿಯೆ ಬ
ಬರತಕ್ಕದ್ದು. ಅಲ್ಲಿಂದ ರಾಜಧಾನಿಗೆ ಮಾಡಿರುವ ಮಾರ್ಗದಲ್ಲಿರುವ ಅರಣ್ಯವಾಸಿ ಜನ
ಆ ಮಾರ್ಗದಿಂದ ಎರಡು ಹರಿದಾರಿ ದೂರದಲ್ಲಿ ಹೋಗಿ ನೆಲಸತಕ್ಕದ್ದು. ದೇವಾಲ
ಸಮಸ್ತ ಕಾರ್ಯಗಳನ್ನು ಪ್ರತಿಷ್ಠಾಪನಾ ದಿನಕ್ಕೆ ಒಂದು ದಿನ ಮೊದಲೆ ಪೂರ್ಣ ಮಾಡತಕ್ಕ
ಎಂದು ರಾಜಾಜ್ಞೆ ಹೊರಟಿತು.

ದಿನಗಳು ಕಳೆದುಹೋದುವು. ಭಾದ್ರಪದ ಶುದ್ಧ ಏಕಾದಶಿಯ ವೇಳೆಗೆ ಶಿ
ಮಾತು ಸರ್ವವ್ಯಾಪಿಯಾಯಿತು. ಸುತ್ತಮುತ್ತ ಇದ್ದ ಜನರೆಲ್ಲ ರಾಜಧಾನಿಗೆ ಬ
ಉಪಕ್ರಮವಾಯಿತು. ಅಪ್ಪಾಜಿಯವರೂ, ನೀನೂ ಮೂರು ದಿನಗಳಿಂದ ನಿಯಮ
ಗಳಲ್ಲಿರುತ್ತ, ಅಹರ್ನಿಶಿ ಶಿವಪೂಜೆ ಧ್ಯಾನಾದಿಗಳಲ್ಲಿ ಮಗ್ನರಾಗಿದ್ದಿರಿ. ಹೊಯಿಸಳ
ಶಾಂತಲೇಶ್ವರ ದೇವಾಲಯಗಳಲ್ಲಿ ಸಾವಿರಾರು ಕೆಲಸದವರು ಕೆಲಸ ಮಾಡಿ ಮ
ದೇವಾಲಯದ ಸಮಸ್ತ ಭಾಗಗಳನ್ನು ಶುಚಿಮಾಡಿಟ್ಟರು. ಇನ್ನು ಉಳಿದುದು ಎರಡೇ
ನಂದಿಗಳು ಕಾಡಿನೆಡೆಯಲ್ಲಿ ನಾಲ್ಕು ಹರಿದಾರಿಗಳ ದೂರದಲ್ಲೇ ಇದ್ದವು. ಆದರ

ಅಪ್ಪಾಜಿಯವರ ನಂಬುಗೆಗೆ ಎಳ್ಳಷ್ಟೂ ಲೋಪ ಬರಲಿಲ್ಲ. ದ್ವಾದಶಿ ತ್ರಯೋದಶಿಗಳು ಮುಗಿದಾಗ ದೇವಾಲಯುಗಳ ಸಕಲ ಕಾರ್ಯಗಳೂ ಮುಗಿದು ಆಲಯ ಚೊಕ್ಕಟವಾಯಿತು. ಪ್ರತಿಷ್ಠಾಪನೆಗೆ ಮಹಾಲಿಂಗಗಳನ್ನು ತಂದು ಪಾಣಿವಟ್ಟಗಳಲ್ಲಿ ಇಟ್ಟೂ ಆಯಿತು. ದೇವಾಲಯುಗಳೆರಡನ್ನೂ ತಳಿರುತೋರಣಗಳಿಂದ ಸುಂದರವಾಗಿ ಅಲಂಕರಿಸಿಯೂ ಆಯಿತು.

ಯಾರೋ ಕೇಳಿದರು ?...ಯಾರೋ ಏನು ? ಹೇಮಾದ್ರಿಗಳೇ ಕೇಳಿದರು, 'ಕೇತಮಲ್ಲನಾಯಕರೇ, ದೇವಾಲಯುಗಳೆರಡರ ನವರಂಗಗಳನ್ನು ಹೀಗೇಕೆ ಒಂದೇ ಮಾರ್ಗದಿಂದ ಒಟ್ಟುಗೂಡಿಸಿದಿರಿ ?' ಎಂದು. ಕೇತಮಲ್ಲರೆಂದರು, 'ಹೇಮಾದ್ರಿಗಳೆ, ನಮ್ಮ ಪ್ರಭುಗಳೂ ಮಹಾರಾಣಿಯವರೂ ಆಕಾರಗಳಿಂದ ಬೇರೆಬೇರೆಯಾದರೂ ಇಬ್ಬರ ಆತ್ಮಗಳೂ ಒಂದೇ ಅಲ್ಲವೆ ?' ಎಂದು.

ಚತುರ್ದಶಿ ಸೂರ್ಯೋದಯವಾಯಿತು. ನಂದಿಗಳು ಇನ್ನೂ ಅಲ್ಲಿಯೆ ಇವೆ—ಎಂಬ ಸುದ್ದಿ ರಾಜಧಾನಿಯಲ್ಲೆಲ್ಲ ಹರಡಿತು. ಈ ಸುದ್ದಿ ನಿನ್ನ ಕಿವಿಗೂ ಬಿತ್ತು. ಆದರಿಂದ ಅಕ್ಕ, ನೀನು ಧೈರ್ಯಗೆಡಲಿಲ್ಲ. ನಿನ್ನ ಮನಸ್ಸಿನ ಸ್ಥೈರ್ಯವನ್ನು ಕಂಡು ಅಪ್ಪಾಜಿಯವರೂ ಧೈರ್ಯಗೊಂಡರು. 'ನಂದಿಗಳಿರುವ ಎಡೆಗೆ, ಆ ದಾರಿಯಲ್ಲಿ ಪಟ್ಟಣಿಗರೇ ಆಗಲಿ, ಇತರರೇ ಆಗಲಿ, ಯಾರೂ ಹೋಗಕೂಡದು' ಎಂದು ಅಪ್ಪಾಜಿಯವರು ಕಟ್ಟಾಜ್ಞೆ ವಿಧಿಸಿದರು. ಅಂದು ನೀವಿಬ್ಬರೂ ನಿರಶನವ್ರತ ಕೈಗೊಂಡು ಮಹಾದೇವನ ಧ್ಯಾನದಲ್ಲೆ ದಿನವೆಲ್ಲ ಕಳೆದಿರಿ.

ಸಂಜೆ ಚತುರ್ದಶಿ ಚಂದ್ರಮನ ಉದಯವಾಯಿತು. ಎಲ್ಲ ಪೌರರ ಮನೆಗಳಲ್ಲೂ ಅಂದು ಮಹಾದೇವನಿಗೆ ವಿಶೇಷ ಪೂಜೆಗಳು ನಡೆಯುತ್ತಿವೆ. ಹೊಯಿಸಳೇಶ್ವರ ಶಾಂತಲೇಶ್ವರ ದೇವಾಲಯುಗಳನ್ನು ಲಕ್ಷದೀಪಗಳು ಬೆಳಗುತ್ತಿವೆ. ದೇವಾಲಯದ ನಾಲ್ಕು ಮೂಲೆಗಳಲ್ಲೂ, ಮಹಾದ್ವಾರಗಳ ಮೇಲೂ ಪ್ರಕಾಶಮಾನವಾದ ಮಹಾದೀಪಗಳಿವೆ. ರಾಜಧಾನಿಯ ಎಲ್ಲರ ಮನೆಗಳಲ್ಲೂ ದೀಪೋತ್ಸವಗಳು ನಡೆದಿವೆ. ಎಲ್ಲರ ಮುಖಗಳಲ್ಲಿ ಮನಗಳಲ್ಲಿ ಉತ್ಸಾಹ, ಭಕ್ತಿ ಉಕ್ಕುತ್ತಿವೆ.

ಮರುದಿನ ಸೂರ್ಯೋದಯ ಮುಹೂರ್ತದಲ್ಲಿಯೆ ಪ್ರತಿಷ್ಠಾಪನೋತ್ಸವ ಮುಹೂರ್ತ ನಿಶ್ಚಿತವಾಗಿತ್ತು. ದೇವಾಲಯುದಲ್ಲಿ ಸಕಲ ಸಾಮಗ್ರಿಗಳೂ ರಾತ್ರಿಯೆ ಸಿದ್ಧವಾಗಿದ್ದುವು. ಚತುರ್ದಶಿರಾತ್ರಿ ಎಲ್ಲರಿಗಿಂತ ಮೊದಲು ನಾನೇ ದೇವಾಲಯುದ ಆವರಣದೊಳಕ್ಕೆ ಹೋದೆ. ಮಧುರಚಂದ್ರಿಕೆ ದೇವಾಲಯುದ ಗೋಡೆಗಳ ಹೊರಭಾಗದ ಶಿಲ್ಪಕೌಶಲಗಳ ಮೇಲೆ ಪಸರಿಸಿ ಅತಿಶಯ ಶೋಭೆಯನ್ನುಂಟುಮಾಡಿತ್ತು. ಆಗ ಚಂದ್ರಿಕೆ ಹೆಚ್ಚು ಹೆಚ್ಚುತ್ತ ಬಂದಿತು. ಇದೇಕೆ ? ಎಂದು ನಾನು ಅಂತರಿಕ್ಷದ ಕಡೆಗೆ ನೋಡಿದೆ. ಚಂದ್ರಬಿಂಬವೇ ವೇಗದಿಂದ ಭೂಮಿಯ ಕಡೆಗೆ ಬರುತ್ತಿದ್ದುದನ್ನು ಕಂಡೆ. ಚಂದ್ರಿಕೆಯಲ್ಲಿ ನಕ್ಷತ್ರಗಳ ಬೆಳಕು ಕುಂದುವುದಾದರೂ ಆಗ ಅವು ಸಹ ಅಂತರಿಕ್ಷದಿಂದ ತೂಗಿಬಿಟ್ಟ ಮುತ್ತಿನ ಗೊಂಚಲುಗಳಂತೆ ಕಂಡವು. ಪ್ರಕಾಶಮಾನವಾದ ಆ ಗೊಂಚಲುಗಳು ಒಂದರ ಸುತ್ತ ಇನ್ನೊಂದು ವರ್ತುಲಾಕಾರದಲ್ಲಿ

ಗಿರ್ರನೆ ಸುತ್ತುತ್ತಿದ್ದವು. ಚಂದ್ರಬಿಂಬ ಆಗ ಒಂದಕ್ಕೆ ನಾಲ್ಕರಷ್ಟು ದೊಡ್ಡದಾಯಿತು. ಆ ಬೆಳಕಿನಲ್ಲಿ ದೇವಾಲಯ ಅಪೂರ್ವ ತೇಜಸ್ಸಿನಿಂದ ಶೋಭಿಸಿತು. ನಾನು ಕಣ್ಣು ರೆಪ್ಪೆ ಬಡಿಯದೆ ನೋಡುತ್ತಿದ್ದೆ. ಸರೋವರದ ತಿಳಿಯಾದ ನೀರಿನಲ್ಲಿ ಪ್ರತಿಬಿಂಬಿಸಿದುದನ್ನು ಗಾಳಿ ಬಂದು ಕಲಕಿದಾಗ, ಆ ಪ್ರತಿಬಿಂಬ ನೀರಿನ ತೆರೆಗಳಲ್ಲಿ ಕಲಕಿ ಹೋದ ಹಾಗಾಗಿ, ಕ್ರಮೇಣ ಸ್ಥಿರ ಆಕಾರವನ್ನು ಮತ್ತೆ ತಾಳುವುದಲ್ಲವೆ: ಹಾಗೆಯೆ ಆಯಿತು. ನನ್ನ ಕಣ್ಣುಗಳಿಗೆ ಆ ದೇವಾಲಯದ ಆಕಾರ. ಆದರೆ, ಅಕ್ಕ, ಈಗ ದೇವಾಲಯ ಒಂದಕ್ಕೆ ನಾಲ್ಕರಷ್ಟು ದೊಡ್ಡದಾಗಿ ಬೆಳೆದು ನಿಂತಿತ್ತು. ಮತ್ತೊಮ್ಮೆ ದೇವಾಲಯದ ಆಕಾರ ಕದಡಿ ಹೋದಂತಾಯಿತು. ಪುನಃ ಸಮಸ್ಥಿತಿಗೆ ಬಂದಾಗ ದೇವಾಲಯ ಇನ್ನೂ ದೊಡ್ಡದಾಗಿ ಬೆಳೆದಿತ್ತು. ಬಿಂಬ ಮತ್ತೊಮ್ಮೆ ಕದಡಿ ಹೋಯಿತು. ಈ ಸಲ ಸಮಸ್ಥಿತಿಗೆ ಬಂದಾಗ ಅದರ ವೈಶಾಲ್ಯ, ಔನ್ನತ್ಯಗಳು ಕಣ್ಣಿಗೆ ನಿಲುಕದಾದುವು. ಆಗ ನನಗೆ ಬಹುದೂರದಲ್ಲಿ ನಾನು ನಿಂತು ನೋಡುತ್ತಿದ್ದಂತೆ ಅನುಭವವಾಯಿತು. ನನ್ನ ದೃಷ್ಟಿಯಲ್ಲೇ ಒಂದು ವೈಪರೀತ್ಯ ಉಂಟಾಗಿತ್ತು. ಅಷ್ಟು ದೂರದಲ್ಲಿ ನಿಂತು ನೋಡುತ್ತಿದ್ದರೂ ನನ್ನ ಕಣ್ಣುಗಳಿಗೆ ಮಾತ್ರ ಕೈಮುಂದೆಯೆ ಎಲ್ಲವೂ ನಡೆಯುತ್ತಿರುವಂತೆ ಕಾಣಬಂದುವು.

ದೇವಾಲಯದ ಹೊರಗಡೆಯ ಭಿತ್ತಿಯ ಪ್ರತಿಕಟ್ಟಿನಲ್ಲಿಯೂ ಇದ್ದ ಎಲ್ಲ ಶಿಲ್ಪಗಳೂ—ಯಕ್ಷ, ರಾಕ್ಷಸ, ಗರುಡ, ಗಂಧರ್ವ, ಕಿನ್ನರ, ಕಿಂಪುರುಷ, ಉರಗರೂ, ಸಕಲ ಮೃಗಪಕ್ಷಿ ಸಂಕುಲಗಳೂ, ಪುರಾಣಯುಗಗಳ ರಾಮಾಯಣ, ಮಹಾಭಾರತ ಕಾಲಗಳ ರಾಜರುಗಳೂ, ಅತಿರಥ ಮಹಾರಥರೂ, ಮುನಿವರರೂ, ಸಕಲ ಲೋಕಗಳಲ್ಲಿನ ದೇವರುಗಳೂ, ದಿಕ್ಪಾಲಕರೂ, ಮಾನವರೂ, ಲತಾವೃಕ್ಷಾದಿಗಳೂ, ಸಕಲವೂ ತಮ್ಮ ತಮ್ಮ ನೈಜವಾದ ಆಕೃತಿ ಪರಿಮಾಣಗಳಿಗೆ ಬೆಳೆದು ನಿಂತಿರುವುದನ್ನು ಕಂಡೆ. ನನಗೆ ಆಶ್ಚರ್ಯವಾಯಿತು. ಭಯವೂ ಆಯಿತು.

ದೇವಾಲಯದ ಗೋಪುರ ಚಂದ್ರಮಂಡಲವನ್ನು ತಾಗಿ ನಿಂತಿತ್ತು. ಆಗ ಚಂದ್ರಮಂಡಲದಿಂದ ತಪ್ತಕಾಂಚನದ ಕಾಂತಿಯಿದ್ದ ಅಮೃತರಸ ಪ್ರವಾಹವೊಂದು ದೇವಾಲಯದ ಗೋಪುರದ ತುದಿಯಿಂದ ಮೆಲ್ಲನೆ ಶಿಲಾರಸದಂತೆ ಮಂದಗತಿಯಿಂದ ಹರಿದು ಬಂದಿತು. ಆ ತಪ್ತಕಾಂಚನಪ್ರವಾಹ ಮೇಲಿನಿಂದ ಹರಿದು ಬರುತ್ತಾ ಆವಾವುದನ್ನು ಆಚ್ಛಾದಿಸಿತೊ ಅವೆಲ್ಲ ಸುವರ್ಣಮಯವಾದುವು. ಸಜೀವವಾದುವು. ಗೋಪುರದಲ್ಲಿನ ಮುನಿವರರೂ, ಸಿದ್ಧರೂ, ನಾಗರೂ, ಯಕ್ಷರೂ, ಗಣಗಳೂ, ನಂದಿಭೃಂಗಿಗಳೂ ಎಲ್ಲರೂ ಜೀವಂತರಾದರು. ಅನಂತರ ಆ ತಪ್ತಕಾಂಚನರಸ ದೇವಾಲಯದ ಹೊರಗೋಡೆಗಳ ಮೇಲಿನ ಶಿಲ್ಪಗಳ ಒಂದೊಂದು ಕಟ್ಟಿನ ಮೇಲೆಯೂ ಹರಿದು ಬರಲು ಉಪಕ್ರಮವಾಯಿತು.

ಮೊದಲು ಮೇಲ್ಕಟ್ಟಿನ ಮದನನ ಕೈಗೊಂಬೆಗಳಂತೆ ಇರುವ ವಿಲಾಸಸುಂದರಿಯರೆಲ್ಲ ಭವ್ಯ ಮಾನವಾಕಾರದ ಸುರಸುಂದರಿಯರಾದರು. ಅವರು ತಮ್ಮ ಉಡುಪು, ತೊಡವುಗಳನ್ನು ತಿದ್ದಿಕೊಳ್ಳುತ್ತ, ಕೈ-ಮೈಗಳನ್ನು ವಿವಿಧ ಭಂಗಿಗಳಲ್ಲಿ ರೂಪಿಸುತ್ತ, ವಾದ್ಯ ಬಾರಿಸುತ್ತಿರುವವ

ತಾಳಕ್ಕೆ, ಮೇಳಕ್ಕೆ. ಕೈತೂಗಿ. ಮೈತೂಗಿ, ತಲೆತೂಗಿ, ಕುಣಿಯಲು ಮೊದಲಿಟ್ಟರು. ಈಗ ಮೇಲಿಂದ ಎರಡನೆಯ ಕಟ್ಟಿಗೆ ಜೀವ ಬಂದಿತು. ದೇವಾದಿದೇವ ಮಹದೇವರುಗಳೂ. ಇಂದ್ರಾದಿ ಅಷ್ಟದಿಕ್ಪಾಲಕರೂ. ತಮ್ಮ ತಮ್ಮ ಲೋಕಗಳಲ್ಲಿದ್ದುಕೊಂಡು. ಸಭೆಗಳನ್ನು ನಡೆಸುತ್ತ ಓಲಗದಲ್ಲಿ ಮಹೋನ್ನತಾಸೀನರಾಗಿದ್ದರು. ಮೇಲಿನಿಂದ ಮೂರನೆಯ ಕಟ್ಟು ಜೀವಂತವಾಯಿತು. ಹಂಸಗಳು, ಶುಕ, ಪಿಕ. ಮಯೂರಗಳು ಪಕ್ಕಗಳನ್ನು ಬಿಚ್ಚಿ ಹಾರಾಡಿದವು. ಮಕರಗಳೂ, ಉರಗಗಳೂ ಹರಿದಾಡಿದವು. ವಾನರ ಸಂಕುಲಗಳು ವೃಕ್ಷಗಳಲ್ಲಿದ್ದ ಫಲಗಳನ್ನು ಕಿತ್ತು ಕಿತ್ತು ತಿಂದವು, ಎರಚಾಡಿದವು. ಎಗರಾಡಿದವು. ನಾಲ್ಕನೆಯ ಕಟ್ಟಿನ ರಾಮಾಯಣ ಮಹಾಭಾರತದ ಕಾಲಗಳ ರಾಜರುಗಳು. ಯೋಧರು ಎದ್ದರು. ಕೂತರು, ರಥಗಳನ್ನು ನಡೆಸಿದರು. ಆನೆಗಳ ಮೇಲೆ, ಕುದುರೆಗಳ ಮೇಲೆ, ರಥಗಳಲ್ಲಿ ಕುಳಿತು, ಒಬ್ಬರನ್ನೊಬ್ಬರು ಅಸ್ತ್ರಶಸ್ತ್ರಗಳಿಂದ. ಕತ್ತಿಗಳಿಂದ. ಮುದ್ಗರಗಳಿಂದ ಹೊಡೆದರು. ಕೊಂದರು. ಸತ್ತವರ ಮಡದಿ ಮಕ್ಕಳು ಅತ್ತರು. ಅವರ ರಕ್ತಮಾಂಸಗಳನ್ನು ಶಾಕಿನಿ. ಡಾಕಿನಿಗಳು ಕುಡಿದು. ತಿಂದು ಕುಣಿದಾಡಿದವು. ಐದನೆಯ ಆರನೆಯ ಕಟ್ಟುಗಳಲ್ಲಿನ ಮಾನವರೂ. ಮೃಗ ಪಕ್ಷಿ ಸಂಕುಲಗಳೂ ಸಜೀವವಾದವು. ಕೆಳಗಿನಿಂದ ಎರಡನೆಯ ಕಟ್ಟಿನಲ್ಲಿದ್ದ ಭಯಂಕರಗಳಾದ ಸಿಂಹ, ಶಾರ್ದೂಲ, ವ್ಯಾಳಿಗಳು ಮೈಕೊಡವಿ. ಕಿವಿ, ಕೇಸರ. ಲಾಂಗೂಲಗಳನ್ನು ನಿಮಿರಿಸಿಕೊಂಡು ದಿಕ್ತಟಗಳು ಬಿರಿಯುವಂತೆ ಗರ್ಜಿಸಿ, ದೇವಾಲಯವನ್ನು ಸುತ್ತಿ ಸುತ್ತಿ ಅದೇ ಕಟ್ಟಿನಲ್ಲಿ ಪ್ರದಕ್ಷಿಣ ನಡೆದವು. ಅಷ್ಟರಲ್ಲಿ ಕೆಳಗಿನ ಕಟ್ಟಿನಲ್ಲಿದ್ದ ಆನೆಗಳ ಸಾಲು ಸಾಲೇ ಜೀವಗೊಂಡು ಭಯಂಕರವಾಗಿ ಘೀಳಿಟ್ಟವು. ಸಾವಿರಾರು ಯುದ್ಧದಾನೆಗಳು, ಅವುಗಳ ಕೊರಳ ಘಂಟೆಗಳು 'ಘಣೆರ್ ಘಣೆರ್' ಎಂದು ಶಬ್ದಮಾಡುತ್ತ. ಬೆನ್ನ ಮೇಲೆ ಇಕ್ಕಡೆಗಳಲ್ಲೂ ಇಳಿಯ ಬಿಟ್ಟಿದ್ದ ಘನಘಂಟೆಗಳು 'ಢಣ ಢಣ' ಎಂದು ಶಬ್ದಮಾಡುತ್ತ. ಆ ಮದ್ದಾನೆಗಳು ಒಂದರ ಬಾಲವನ್ನು ಇನ್ನೊಂದು ಹಿಡಿದು ಪ್ರದಕ್ಷಿಣ ಬಂದವು. ಮೇಲಿನ ಕಟ್ಟಿನ ಸಿಂಹ ಶಾರ್ದೂಲಗಳು ಹಾಗೆಯೇ ಪ್ರದಕ್ಷಿಣ ಬರುತ್ತಿದ್ದವು. ಯೋಧರು ಯುದ್ಧ ಮಾಡುತ್ತಲೇ, ಕೊಲ್ಲುತ್ತಲೇ ಇದ್ದರು. ವಾದ್ಯಗಾರರು ವಿವಿಧವಾದ್ಯಗಳನ್ನು ನುಡಿಸುತ್ತಲೇ ಇದ್ದರು. ವಿಲಾಸಿನಿಯರೂ. ಅಪ್ಸರೆಯರೂ ನರ್ತನಮಾಡುತ್ತಲೇ ಇದ್ದರು.

ಎಷ್ಟು ಎಷ್ಟು ಹೇಳಿದರೂ. ಹೇಗೆ ಹೇಗೆ ಬಣ್ಣಿಸಿದರೂ ಸಾಲದು, ಅಕ್ಕ. ಅಗ ನಾನು ಕಂಡ ದೃಶ್ಯ. ಸಾವಿರ ನಾಲಗೆಗಳ ಆದಿಶೇಷನ ಬಣ್ಣನೆಗೂ ಅಳವಲ್ಲದ ನೋಟವದು. ಆ ಸಿಂಹಶಾರ್ದೂಲಗಳನ್ನು ನೋಡಿ ನನಗೆ ಭಯವಾಗಲಿಲ್ಲ. ಯಾವುದೋ ಒಂದು ಮಹಾಶಕ್ತಿಯೆ ನನ್ನ ಒಡಲಿನಲ್ಲಿ ಮನೆಮಾಡಿದಂತೆ ಅಗ ನನಗೆ ಅನುಭವವಾಯಿತು. ನಾನು ಆಲಯದೊಳಕ್ಕೆ ಹೋದೆ. ಆಲಯದ ಪೂರ್ವದ್ವಾರದಲ್ಲಿದ್ದ ದ್ವಾರಪಾಲಕರು ಮೂರು ಮೂರು ಪುರುಷಪ್ರಮಾಣಗಳಲ್ಲಿದ್ದರು. ದಿವ್ಯಾಭರಣಭೂಷಿತರಾಗಿ, ಅಂಕುಶ, ಗದೆಗಳನ್ನು ಹಿಡಿದು, ಮಕುಟ ಧರಿಸಿ, ಜೊಂಪೆಜೊಂಪೆಯಾಗಿ ತೂಗುತ್ತಿರುವ ಮುತ್ತಿನ ಗೊಂಚಲುಗಳಿಂದಲೂ.

ವಜ್ರವೈಢೂರ್ಯಮರಕತ ಮಾಣಿಕ್ಯಗಳಿಂದಲೂ ಹೊಳೆಯುತ್ತಿರುವ ಎತ್ತರವಾದ ಕನಕಮಯ ಮಕುಟಗಳನ್ನು ಶಿರದಲ್ಲಿ ಧರಿಸಿಕೊಂಡು, ತ್ರಿಭಂಗಿಯಲ್ಲಿ ನಿಂತಿದ್ದರು. ನನ್ನನ್ನು ಅವರು ಅಡ್ಡಿಪಡಿಸಲಿಲ್ಲ ; 'ಒಳಗೆ ದಯಮಾಡಿ' ಎಂದು ಉಪಚರಿಸಿದರು. ಒಳಕ್ಕೆ ಹೋದ. ದೇವಾಲಯದೊಳಕ್ಕೆ ಹೋದೆನೋ, ಬ್ರಹ್ಮಾಂಡವನ್ನೇ ಹೊಕ್ಕೆನೋ ನನಗೆ ತಿಳಿಯಲಿಲ್ಲ. ಆಲಯದ ವೈಶಾಲ್ಯವು ಕಣ್ಣಿಗೆ ಸಿಗಲಿಲ್ಲ. ಔನ್ನತ್ಯವೂ ಕಣ್ಣಿಗೆ ಸಿಗಲಿಲ್ಲ. ಒಳಗೆ ಯಾರು ಇದ್ದಂತೆ ಕಾಣಬರಲಿಲ್ಲ. ಆಗ ಅತಿ ಪ್ರಕಾಶಮಾನವಾದ ಬೆಳಕು ಅಲ್ಲಿ ಉದಯವಾಯಿತು. ಆ ಬೆಳಕಿನಲ್ಲಿ ರವಿಯ ತೇಜಸ್ಸು, ಚಂದ್ರನ ತಂಪು ಎರಡೂ ಸೇರಿದ್ದವು. ಮಂಕುಬಡಿದು ನಿಂತಾದೆ ನಾನು.

ಆಲಯದ ಒಂದು ಕಡೆ ನೆಲದಿಂದ ಬಹು ದೊಡ್ಡದಾದ ಒಂದು ಕಮಲ ಹುಟ್ಟಿ ಅರಳಿತು. ಪಕ್ಕದಲ್ಲಿ ಮದ್ದಾನೆಯ ಸೊಂಡಲಿನಷ್ಟು ದಪ್ಪದ ಶರೀರವುಳ್ಳ ಆದಿಶೇಷ ಮೈಯನ್ನು ಸುತ್ತಿಟ್ಟು ಕೊಂಡು, ತನ್ನ ಸಹಸ್ರ ಫಣೆಗಳನ್ನು ಬಿಚ್ಚಿ ನಿಂತ. ಫಣಾರತ್ನಗಳ ಕಾಂತಿ ಉರಿಯುತ್ತಿರುವ ಕೆಂಡಗಳಂತೆ ಇದ್ದಿತು. ಆ ಮಹಾಶೇಷನ ತೆಳ್ಳನೆಯ ಸೀಳುನಾಲಗೆಗಳು ಆ ಬೆಳಕಿನಲ್ಲಿ ಮಿಂಚಿನ ಬಳ್ಳಿಗಳಂತೆ ಹೊಳೆದವು. ಆದಿಶೇಷನನ್ನು ಕಂಡು ನನಗೆ ಭಯವಾಗಲಿಲ್ಲ. ಆ ಮಹೋರಗನಿಗೆ ಪಕ್ಕದಲ್ಲಿ ಹಿಮಾಚ್ಛಾದಿತ ಧವಳಗಿರಿಶಿಖರವೊಂದು ನೆಲದಿಂದ ಮೇಲೆದ್ದಿತು. ಇಷ್ಟಾಗುವ ಹೊತ್ತಿಗೆ ಅಲ್ಲಲ್ಲಿ ಸುತ್ತಮುತ್ತ ಸಾವಿರಾರು ಚಿಕ್ಕ ದೊಡ್ಡ ಸುಖಾಸನಗಳು ಮೇಲಕ್ಕೆ ಎದ್ದುವು. ಅರಳಿದ ಆ ಮಹಾಕಮಲದಲ್ಲಿ ಬ್ರಹ್ಮನೂ, ಸರಸ್ವತಿಯೂ ಉರಗಶಯ್ಯೆಯಲ್ಲಿ ಲಕ್ಷ್ಮೀನಾರಾಯಣರೂ, ಧವಳಗಿರಿಯ ಶಿಖರಪೀಠದಲ್ಲಿ ಉಮಾಮಹೇಶ್ವರರೂ ಕುಳಿತಿದ್ದರು. ಅವರವರ ಪರಿವಾರಗಳು ಇಕ್ಕಡೆಗಳಲ್ಲೂ ನಿಂತಿದ್ದರು. ತ್ರಿಮೂರ್ತಿಗಳೂ ಅವರ ದೇವಿಯರು ಎಲ್ಲರಿಗಿಂತ ಉನ್ನತರೂ, ಎಲ್ಲರಿಗಿಂತ ತೇಜಸ್ವಿಗಳೂ ಆಗಿದ್ದರು. ಸಾವಿರಾರು ದೇವದೇವತೆಗಳು ಆ ಆಲಯದ ತುಂಬ ಕುಳಿತಿದ್ದರು. ಹಲವರು ನಿಂತಿದ್ದರು. ಗಂಧರ್ವರು, ವಿದ್ಯಾಧ ವಿದ್ಯಾಧರೆಯರು. ಅಪ್ಸರ ಅಪ್ಸರೆಯರು. ಎಲ್ಲರೂ ಅಲ್ಲಿದ್ದರು. ಆಗ ತ್ರಿಮೂರ್ತಿಗಳ ಎದುರಿ ವಿಶಾಲವಾದ ವರ್ತುಲಾಕಾರದ ನುಣುಪಾದ ಸ್ಫಟಿಕ ಶಿಲಾಪೀಠವೊಂದು ನೆಲಮಟ್ಟಕ್ಕಿಂತ ಎರಡು ಮೊಳಗಳಷ್ಟು ಎತ್ತರವಾಗಿ ಎದ್ದು ನಿಂತಿತು. ಅದರ ಸುತ್ತಲೂ ವಿವಿಧ ವಾದ್ಯಗಳನ್ನು ಹಿಡಿದಿದ್ದ ಗಂಧರ್ವರೂ, ಶ್ರೇಷ್ಠ ಆಸನಗಳಲ್ಲಿ ತುಂಬುರರೂ, ನಾರದರೂ, ಒಂದೆಡೆ ಉನ್ನತಾ ಸನದಲ್ಲಿ ಇಂದ್ರನೂ ಶಚಿಯೂ, ಇನ್ನೊಂದೆಡೆ ಅಗ್ನಿಯೂ ಸ್ವಾಹಾದೇವಿಯೂ, ಅಂಥದೆ ಆಸನ ಗಳಲ್ಲಿ ಯಮ, ನಿರ್ಋತಿ, ವರುಣ, ವಾಯು, ಈಶಾನ, ಕುಬೇರರೂ ತಮ್ಮ ತಮ್ಮ ದೇವಿಯ ರೊಡಗೂಡಿ ಸಂತೋಷದಿಂದ ಕುಳಿತಿದ್ದರು. ಆಗ ಬಹು ಮಧುರವೂ, ಸ್ವರ್ಗೀಯವೂ ಆದ ವಾದ್ಯಸಮ್ಮಿಲನವೂ ಮೊದಲಿಟ್ಟಿತು. ಸೂರೆಗರೆವ ಕಂಠಮಾಧುರ್ಯವುಳ್ಳ ಅಪ್ಸರೆಯರು ಗಂಧರ್ವರೂ ದನಿಗೂಡಿಸಿ ಹಾಡಿದರು.

ನರ್ತನ ಮಾಡತೊಡಗಿದವರು ಸಕಲಕಲಾಮಾತೆ ಶ್ರೀಶಾರದೆ. ಬ್ರಹ್ಮನೂ ಆ ನರ್ತನಕ್ಕೆ ತಾನೆ ತಾಳವಾದ್ಯಗಳನ್ನು ನುಡಿಸಿದ. ಬಳಿಕ ಲಕ್ಷ್ಮೀನಾರಾಯಣರು ಆನಂದನೃತ್ಯವಾಡಿದರು.

ಶಿವಪಾರ್ವತಿಯರ ನರ್ತನಕ್ಕೆ ಅಖಂಡ ಬ್ರಹ್ಮಾಂಡಗಳೇ ಕುಣಿದಾಡಿದುವು. ರತಿಮನ್ಮಥರು ಲಾವಣ್ಯನೃತ್ಯ ಮಾಡಿದರು. ರಂಭೆ ಊರ್ವಶಿಯರ ಶೃಂಗಾರನರ್ತನ ಮನಮೋಹಕವಾಗಿತ್ತು. ಇವರೆಲ್ಲ ನರ್ತನ ಮಾಡಿ ಮುಗಿದ ಮೇಲೆ ನರ್ತನಮಾಡಿದವನು ಗಣಪತಿ. ಇವರೆಲ್ಲರನ್ನು ನೋಡಿ ಅವನಿಗೆ ತಾನೂ ನರ್ತಿಸಬೇಕೆಂಬ ಆಸೆ ಹುಟ್ಟಿರಬೇಕು. ಅವನಿಗೆ ಹಿಂದೆ ಎಂದಾದರೂ ನರ್ತಿಸಿ ಅಭ್ಯಾಸವಿದ್ದಿತೊ ಇಲ್ಲವೊ! ಕಿವಿಗಳನ್ನು ಆಡಿಸುತ್ತ, ಸೊಂಡಿಲನ್ನು ಬೀಸುತ್ತ, ಮೋಟುಕೈಗಳನ್ನು ತಿರುವುತ್ತ, ಕಂಬಗಳಂತಿದ್ದ ಆ ಕಾಲುಗಳಿಗೆ ಕಿರುಗೆಜ್ಜೆಗಳ ಸರಗಳನ್ನು ಕಟ್ಟಿಕೊಂಡು ನಾಟ್ಯರಂಗವೇರಿದ ಗಣಪತಿ. ಎಲ್ಲರಿಗು ಹೊಟ್ಟೆಯಲ್ಲಿ ನಗು, ಮುಖದಲ್ಲಿ ಬಿಗು, ಗಣಪತಿಯ ಕೋಪಕ್ಕೆ, ಶಾಪಕ್ಕೆ ಈಡಾಗಬಾರದೆಂದು ನಗುವನ್ನು ಬಿಗಿಹಿಡಿದು ಕುಳಿತಿದ್ದರು. ವಾದ್ಯಘೋಷಣೆ ಮೊದಲಾಯಿತು. ತುಂಬುರರು ನಾರದರು ಹಾಡಿದರು.

ಮಹಾದೇವನು ಪಾರ್ವತಿಯನ್ನು ನೋಡಿ ಮೆಲ್ಲಗೆ 'ಇವನಿಗೇಕೆ ಕುಣಿಯುವ ಆಶೆ ಬಂತು ಈಗ ಈ ಮೈಯನ್ನಿಟ್ಟುಕೊಂಡು ?' ಎಂದನು. ಪಾರ್ವತಿಗೆ ಸ್ವಲ್ಪ ಸಿಟ್ಟು ಬಂತೆಂದು ಕಂಡಿತು. 'ಮಕ್ಕಳು ಕುಣಿಯಬಾರದೇನು ?' ಎಂದಳು. ಶಿವನು ತಾನು ಕೇಳಿದುದು ತಪ್ಪಾಯಿತೆಂದು ತಿಳಿದು ಸುಮ್ಮನಾದನು. ಗಜಾನನನು ತಾಂಡವನೃತ್ಯಕ್ಕೆ ಮೊದಲಿಟ್ಟನು. ಗಜಾನನ ಆ ನರ್ತನಕ್ಕೆ ಶಿಲಾಪೀಠ ಅದುರಿತು. ನೆಲ ನಡುಗಿತು. ನುಣ್ಣನೆಯ ಶಿಲೆಯ ಮೇಲೆ ಒಮ್ಮೆ ಗಣಪನಿಗೆ ಕಾಲು ಜಾರಿತು. ರಭಸದಿಂದ ಬಿದ್ದನು. ಭಯಾವೃತವಾಗಿದ್ದ ಆ ಸಭೆಯಲ್ಲಿ ಯಾರೂ ನಗಲಾಗಲಿಲ್ಲ. ಶಿವನು ಮಾತ್ರ ನಕ್ಕ. ಆ ನಗು ಗಣಪತಿಗೆ ಕೇಳಿಸಿತು. ಪಾರ್ವತಿ ಪತಿಯ ಕಡೆಗೆ ನೋಡಿದಳು. ಶಿವನಿಗೆ ಆಗ ತಾನು ನಗಬಾರದಿತ್ತು ಎನ್ನಿಸಿತು. ಗಣಪತಿಗೆ ಸಿಟ್ಟು ಬಂದಿತು. 'ನನ್ನ ನಾಟ್ಯ ನನಗೆ ಸುಖ ಕೊಟ್ಟರೆ ಸಾಕು ! ಇತರರು ನೋಡಿ ಏನೂ ಮೆಚ್ಚಬೇಕಾಗಿಲ್ಲ' ಎಂದುಕೊಳ್ಳುತ್ತ ಎದ್ದು ಹೋಗಿ, ದೇವಾಲಯದ ದಕ್ಷಿಣದ್ವಾರದ ಒಂದು ಪಾರ್ಶ್ವದಲ್ಲಿ ತನ್ನ ಸುಖಕ್ಕಾಗಿಯೇ ನಾಟ್ಯವಾಡುತ್ತ ನಿಂತುಬಿಟ್ಟ.

ಅನಂತರ ಗಂಧರ್ವರು, ಅವರ ಪತ್ನಿಯರು ಸಮೂಹನಾಟ್ಯವಾಡಿದರು. ಆಗ ಪಟ್ಟಣಿಗರೆಲ್ಲ ಆಲಯದೊಳಕ್ಕೆ ಬಂದು ನಡೆಯುತ್ತಿದ್ದ ನರ್ತನಗಳನ್ನು ನೋಡುತ್ತಿದ್ದರು. ಅಪ್ಪಾಜಿಯವರೂ ಸುಖಾಸನವೊಂದರಲ್ಲಿ ಕುಳಿತು ಪ್ರಾರಂಭದಿಂದಲೂ ನೋಡುತ್ತಿದ್ದರು.

ಈ ದೇವಲೋಕದವರ ನರ್ತನಗಳು ಮುಗಿದನಂತರ ಈರ್ವರು ಗಂಧರ್ವಕನ್ಯೆಯರು ನನ್ನ ಅಕ್ಕನನ್ನು ನಾಟ್ಯರಂಗಕ್ಕೆ ಕರೆತಂದರು. ನೀನು ಎದುರಿಗಿದ್ದ ತ್ರಿಮೂರ್ತಿಗಳಿಗೂ, ಅವರ ದೇವಿಯರಿಗೂ, ಸುತ್ತಲಿದ್ದ ಎಲ್ಲ ದೇವ ದೇವಿಯರಿಗೂ, ಅಪ್ಪಾಜಿಯವರಿಗೂ ಭಕ್ತಿವಿನಯಗಳಿಂದ ಕೈಮುಗಿದು, ಆನಂದನರ್ತನ ಮಾಡಲಾರಂಭಿಸಿದೆ. ಚಿಕ್ಕ ಅಕ್ಕ ವೀಣೆಯನ್ನು ನುಡಿಸುತ್ತಿದ್ದಳು. ರಂಭೆ ಊರ್ವಶಿಯರಾದಿಯಾಗಿ ಎಲ್ಲ ದೇವಾಂಗನೆಯರು, ದೇವರ್ಕಳು ನಿನ್ನ ನರ್ತನಕ್ಕೆ ಬೆರಗಾಗಿಹೋದರು. ಬಹುಶಃ ಮತ್ಸರಗೊಂಡಿದ್ದರೂ ಹೆಚ್ಚಲ್ಲ. ಭಾರತಿಯು 'ನಮ್ಮ ಮಗಳಿವಳು' ಎಂದಳು ಬ್ರಹ್ಮನೊಡನೆ. ಧರ್ಮೇಶನು 'ನನ್ನ ಮಗಳಿವಳು' ಎಂದನು.

ಶಿವೆಯೊಡನೆ. 'ಲಕ್ಷ್ಮಿ, ಇವಳು ನಮ್ಮ ವೇಲಾಪುರಿಯ ಮಗಳಲ್ಲವೇ ?" ಎಂದ
ಚೆಲುವನಾರಾಯಣ ಮಹಾಲಕ್ಷ್ಮಿಯೊಡನೆ.

'ಭಲೆ ! ಭಲೆ ! ನಾಟ್ಯವು ಇವಳಿಗಾಗಿಯೇ ಹುಟ್ಟಿತು' ಎಂದರು ಅಲ್ಲಿದ್ದ ತುಂಬುರು
ನಾರದರು. ಶಚೀಪತಿ 'ಈ ನರ್ತನವನ್ನು ನೋಡಿ ಕಲಿಯಿರಿ' ಎಂದರ್ಥ ಬರುವಂತೆ
ಊರ್ವಶಿ. ತಿಲೋತ್ತಮೆಯರ ಕಡೆ ನೋಡಿದ. 'ನರ್ತನ ಗಂಧರ್ವವಿದ್ಯೆ, ದೇವಲೋಕದ
ಸೊತ್ತು' ಎಂಬುದು ಸುಳ್ಳಾಯಿತು. ಅಕ್ಕ. ಅಂದು ನಿನ್ನಿಂದ. ಅಕ್ಕ, ನೀನು
ಚೆಲುವಕೇಶವನ ಮುಂದೆ ಅಂದು ನರ್ತನಮಾಡಿದುದಕ್ಕಿಂತಲೂ ಇಂದು ಚೆನ್ನಾಗಿ ಪ
ನಿನ್ನ ನರ್ತನ ನಿಂತೊಡನೆಯೆ ಎಲ್ಲರೂ ಸಂತೋಷಸೂಚಕ ಧ್ವನಿಗಳಿಂದ ತಮ್ಮ ತೃಪ್ತಿಯ
ವ್ಯಕ್ತಪಡಿಸಿದರು. ಲಕ್ಷ್ಮಿ, ಸರಸ್ವತಿ, ಪಾರ್ವತಿಯರು ಎದ್ದು ಬಂದು ನಿನ್ನನ್ನು ಬಿಗಿದಪ್ಪಿಕೊಂ
ನೀನು ಅವರಿಗೆಲ್ಲ ನಮಸ್ಕರಿಸಿದೆ. ಅವರು ಹರಸಿದರು.

ಇಷ್ಟೆಲ್ಲ ಆದ ಮೇಲೆ ಏನೋ ಮಂಜುಕವಿದಂತಾಯಿತು ! ದೇವಾಲಯದಲ್ಲಿದ್ದ
ಅದೃಶ್ಯರಾದರು. ನೀನೊಬ್ಬಳೆ ನರ್ತನಶಿಲೆಯ ಮೇಲೆ ನಿಂತಿದ್ದೆ. ನನ್ನನ್ನು ನ
'ಬಹಳ ಆಯಾಸವಾಗಿದೆ ನನಗೆ' ಎಂದೆ. ನಾನು ನಿನ್ನನ್ನು ಕರೆತಂದು, ಸೂರ್ಯಾಲ
ಬಾಗಿಲನ್ನು ತೆರೆದು 'ಅಕ್ಕ, ನೀನಿಲ್ಲಿ ವಿಶ್ರಮಿಸು' ಎಂದೆ. ನೀನು ಭಗ
ಸೂರ್ಯನಾರಾಯಣನ ಪಾದಗಳ ಮೇಲೆ ತಲೆಯಿಟ್ಟು ಪವಡಿಸಿದೆ. ಒಡನೆ ನಿದ್ದೆ
ನಿನ್ನ ನಿದ್ದೆಗೆ ಯಾರೂ ಭಂಗ ತರಬಾರದೆಂದು ನಾನು ಬಾಗಿಲನ್ನು ಎಳೆದು ಮುಚ್ಚಿ
ಹೊರಕ್ಕೆ ಬಂದೆ.

## ಟಿಪ್ಪಣಿ

### ಕವಿ ಮತ್ತು ಕೃತಿ :

ವ್ಯಾಯಾಮಶಾಸ್ತ್ರದಲ್ಲಿ ಮನೆಮಾತಾಗಿರುವ ಶ್ರೀಮರ್ಾ ಕೆ. ವಿ. ಅಯ್ಯರ್
'ಶಾಂತಲಾ' ಎಂಬ ತಮ್ಮ ಶ್ರೇಷ್ಠ ಕಾದಂಬರಿಯ ಮೂಲಕ ಸಾಹಿತ್ಯಜಗತ್ತಿನಲ್ಲಿಯೂ
ಮಾತಾಗಿದ್ದಾರೆ. ಈ ಐತಿಹಾಸಿಕ ಕಾದಂಬರಿಯಲ್ಲಿ ಹೊಯ್ಸಳ ರಾಜನಾದ ವಿಷ್ಣು
ಮತ್ತು ಶಾಂತಲೆಯರ ಜೀವನಕಥೆ ನಿರೂಪಿತವಾಗಿದೆ. ವಿಷ್ಣುವರ್ಧನನು ಹೊಯ್ಸಳೇ
ಶಾಂತಲೇಶ್ವರ ದೇವಾಲಯಗಳನ್ನು ಕಟ್ಟಿ ಮುಗಿಸಿದ ಮೇಲೆ, ಆ ಆಲಯಗಳ ಪೂರ್ವಮು
ನಂದಿಗಳನ್ನು ತಂದು ನಿಲ್ಲಿಸಿದ ಪ್ರಸಂಗವನ್ನು ಇಲ್ಲಿ ಎತ್ತಿಕೊಳ್ಳಲಾಗಿದೆ. ಈ ಪ್ರಸಂ
ರಾಜನ ಸಾಕುಮಗನಾದ ಕುವರ ವಿಷ್ಣುವು ಕಂಡ ಹೊಂಗನಸೊಂದು ಚಿತ್ರಿತವಾಗಿದೆ.
ಮನೋಹರವಾಗಿರುವ ಈ ಭಾಗದಲ್ಲಿ ರಾಜನಾದ ವಿಷ್ಣುವರ್ಧನ ಮತ್ತು ಶಾಂತಲೆಯರ
ಚಿತ್ರಣ ಎದ್ದು ಕಾಣುತ್ತದೆ. ಅದರಲ್ಲಿಯೂ ಕಲಾಪ್ರಪೂರ್ಣಳಾದ ಶಾಂತಲಾದೇವಿಯ
ಸುಂದರ ನಿರೂಪಣೆ ಚೇತೋಹಾರಿಯಾಗಿದೆ. ಶ್ರೀಮರ್ಾ ಕೆ. ವಿ. ಅಯ್ಯರ್
'ರೂಪದರ್ಶಿ' ಎಂಬ ಮತ್ತೊಂದು ಕಾದಂಬರಿಯನ್ನೂ, 'ಸಮುದ್ಯತಾ.' ಎಂಬ ಸಣ್ಣ
ಸಂಕಲನವೊಂದನ್ನೂ ಕನ್ನಡಿಗರಿಗೆ ನೀಡಿದ್ದಾರೆ. ಶ್ರೀ ಅಯ್ಯರ್ ಅವರ
ಶುದ್ಧವಾಗಿರುವಷ್ಟೇ ಸತ್ವಯುಕ್ತವಾಗಿದೆ.

## ಕಠಿಣ ಪದಗಳ ಅರ್ಥ :

ಆಲಯ—ಮನೆ. ಹರಿದಾರಿ—ಮೂರು ಮೈಲಿಗಳ ದೂರ. ಗದ್ಯಾಣ—ಚಿನ್ನದ ನಾಣ್ಯ; ೩೨ ಇಲ್ಲವೆ ೪೦ ಗುಂಜಿತೂಕದ ಚಿನ್ನದ ನಾಣ್ಯ. ರೂವಾರಿ—ಶಿಲ್ಪಿ. ಪ್ರಕಾಂಡ—ದೊಡ್ಡದಾದ. ಅಂಗಸೌಷ್ಠವ—ದೇಹಸೌಂದರ್ಯ. ಗಾವುದ—೧೨ ಮೈಲಿ ದೂರ. ಶಕಟ—ಬಂಡಿ. ದೂಲ—ಚಪ್ಪರವನ್ನು ಸೇರಿಸುವ ಮರದ ಅಚ್ಚು ಅಥವಾ ದೂರಿ. ವರ್ಷಾಕಾಲ—ಮಳೆಗಾಲ. ತಗದು—ಸಲ್ಲದು. ಪವಾಡ—ಅಲೌಕಿಕ ಘಟನೆ. ನಾಸ್ತಿಕರು—ದೇವರಲ್ಲಿ ನಂಬಿಕೆಯಿಲ್ಲದವರು. ಉಪಕ್ರಮ—ಪ್ರಾರಂಭ. ಅಹರ್ನಿಶಿ—ಹಗಲುರಾತ್ರಿ. ಹೇಮಾದ್ರಿ—ವಿಷ್ಣುವರ್ಧನನ ಅಮಾತ್ಯಶ್ರೇಷ್ಠರೂ ಮತ್ತು ತಂತ್ರಪಾಲರೂ ಆಗಿದ್ದವರು. ಕೇತಮಲ್ಲನಾಯಕ—ನರಸಿಂಗಮಯ್ಯನ ಸೋದರಳಿಯ; ತಲವನಪುರದ ನಿವಾಸಿ, ಒಬ್ಬ ದೊಡ್ಡ ವ್ಯಾಪಾರಿ; ಕಾಂಭೋಜದೇಶದಿಂದ ಕುದುರೆಗಳನ್ನು ತರಿಸಿ ಮಾರುತ್ತಿದ್ದ. ಪಾಣಿವಟ್ಟ—ಶಿವಲಿಂಗವನ್ನು ಕೂಡಿಸುವ ವೇದಿಕೆ. ಮಗ್ನ—ಮುಳುಗಿದವ. ನವರಂಗ—ದೇವಾಲಯದಲ್ಲಿ ನರ್ತನಕ್ಕಾಗಿ ನಿರ್ಮಿಸಿದ ಸ್ಥಳ. ನಿರಶನವ್ರತ—ಉಪವಾಸವ್ರತ. ಚಂದ್ರಮ—ಚಂದ್ರ. ದೀಪೋತ್ಸವ—ದೀಪ+ಉತ್ಸವ. (ಗು. ಸಂ.) ಮಹಾದ್ವಾರ—ಹೆಬ್ಬಾಗಿಲು. ವರ್ತುಳಾಕಾರ—ವರ್ತುಳ+ಆಕಾರ; ಗುಂಡಾದ ಆಕಾರ. ವೈಶಾಲ್ಯ—ವಿಸ್ತಾರ. ಔನ್ನತ್ಯ—ಎತ್ತರ. ವೈಪರೀತ್ಯ—ವ್ಯತ್ಯಾಸ. ಭಿತ್ತಿ—ಗೋಡೆ. ತಪ್ತಕಾಂಚನ—ಕಾವ ಬಂಗಾರ. ಶಿಲಾರಸ—ಕಲ್ಲಿನ ರಸ. ಆಚ್ಛಾದಿಸು—ಮುಚ್ಚು; ಆವರಿಸು. ಮದನ ಕೈಗೊಂಬೆ—ಮದನಿಕೆಗಳು : ಗುಡಿಯ ಸುತ್ತಲೂ ನಿಲ್ಲಿಸಿರುವ ದಿವ್ಯಸುಂದರರಾದ ರಮಣಿಯರ ಶಿಲಾಪ್ರತಿಮೆಗಳು. ಭಂಗಿ—ರೀತಿ. ಮಹೋನ್ನತ—ಮಹಾ+ಉನ್ನತ (ಗು.ಸಂ.) ಬಹಳ ಎತ್ತರವಾದ. ಶುಕ—ಗಿಳಿ. ಪಿಕ—ಕೋಗಿಲೆ. ಮಯೂರ—ನವಿಲು. ಪಕ್ಕ—ಪಕ್ಷ (ಸಂ.) ರೆಕ್ಕೆ. ಮಕರ—ಮೊಸಳೆ. ಉರಗ— (ಉರ—ಎದೆಯಲ್ಲಿ; ಗ—ಗಮಿಸುವುದು) ಹಾವು. ಸಂಕುಲ—ಸಮೂಹ. ಮುದ್ಗರ—ಗದೆ. ಶಾರ್ದೂಲ—ಹುಲಿ. ವ್ಯಾಳಿ—ಪುರಾಣೋಕ್ತವಾದ ಒಂದು ಪ್ರಾಣಿ. ಕೇಸರ—ಕೂದಲು. ಲಾಂಗೂಲ—ಬಾಲ. ದಿಕ್ತಟ—ದಿಕ್ಕುಗಳ ಕೊನೆ. ಘೀಳಿಡು—ಆನೆಗಳು ಕೂಗುವುದು. ಇಕ್ಕಡೆ—ಎರಡು+ಕಡೆ. ವಿಲಾಸಿನಿಯರು—ವೇಶ್ಯೆಯರು. ಅಳವಲ್ಲದ—ಸಾಧ್ಯವಲ್ಲದ. ಅಂಕುಶ—ಆನೆಯನ್ನು ತಿವಿಯಲು ಉಪಯೋಗಿಸುವ ಆಯುಧ. ದುಕೂಲ—ನಯವಾದ ಬಟ್ಟೆ. ಮಕುಟ—ಕಿರೀಟ. ತ್ರಿಭಂಗಿ—ಮೂರು ಡೊಂಕುಗಳಿಂದ ಕೂಡಿದ ದೇಹದ ನಿಲುವು. ಫಣೆ—ಹೆಡೆ. ಮಹೋರಗ—ಮಹಾ+ಉರಗ; ಘಟಸರ್ಪ. ಆದಿಶೇಷ. ಧವಳಗಿರಿ—ಶುಭ್ರವಾದ ಬೆಟ್ಟ; ಬೆಳ್ಳಿಬೆಟ್ಟ. ಸುಖಾಸನ—ಸುಖ+ಆಸನ. ಉರಗ ಶಯ್ಯೆ—ಹಾವಿನ ಹಾಸಿಗೆ (ವಿಷ್ಣುವು ಆದಿಶೇಷನ ಮೇಲೆ ಮಲಗಿದ್ದಾನೆ ಎಂಬುದು ಪುರಾಣಗಳ ಹೇಳಿಕೆ). ಸೊದೆ—ಸುಧಾ (ತ್ಸ.) ಅಮೃತ. ದನಿ—ಧ್ವನಿ (ತ್ಸ). ಬಿಗು—ಬಿಗಿ. ಮತ್ಸರ—ಹೊಟ್ಟೆಕಿಚ್ಚು : ದ್ವೇಷ. ಭಾರತಿ—ಸರಸ್ವತಿ. ಘನಸಾರ—ಕರ್ಪೂರ. ವೇಲಾಪುರಿ—ಕೊಲ್ಲಾಪುರ. ಶಚೀಪತಿ—ದೇವೇಂದ್ರ. ಬಿಗಿದಪ್ಪು—ಆಲಿಂಗಿಸಿಕೊಳ್ಳು. ಪವಡಿಸು—ಮಲಗು.

ಪ್ರಶ್ನೆಗಳು :

೧. ನಂದಿಗಳನ್ನು ಸಾಗಿಸುವುದರಲ್ಲಿ ಪ್ರಾಪ್ತವಾದ ಕಷ್ಟಗಳೇನು ? ಶಾಂತಲೆ... ಮತ್ತು ಅಪ್ಪಾಜಿಗೂ ಕನಸಿನಲ್ಲಿ ದೊರೆತ ಭರವಸೆಯೇನು ? ವಿವರಿಸಿ.

೨. ಚತುರ್ದಶಿಯ ರಾತ್ರಿ ನಡೆದ ಪವಾಡವನ್ನು ನಿಮ್ಮ ಸ್ವಂತ ಮಾತುಗಳಲ್ಲಿ ಬರೆಯಿ...

೩. ಗಣಪತಿಯ ನರ್ತನವನ್ನು ವರ್ಣಿಸಿ.

೪. ಶಾಂತಲೆಯ ನರ್ತನವನ್ನು ವರ್ಣಿಸಿ, ಅದನ್ನು ಕಂಡು ಆನಂದಿಸಿದ ಬ್ರಹ್ಮಾದಿ... ಆಡಿದ ಮಾತುಗಳನ್ನೂ, ಆ ಮಾತುಗಳಲ್ಲಿರುವ ಸ್ವಾರಸ್ಯವನ್ನೂ ವಿಶದೀಕರಿಸಿ.

೫. ನೀವು ಕಂಡ ಯಾವುದಾದರೂ ಒಂದು ಕನಸನ್ನು ವರ್ಣಿಸಿ.

ಸಂದರ್ಭದೊಡನೆ ಸ್ಪಷ್ಟೀಕರಿಸಿ :

೧. " ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ."

೨. " ಮಹಾದೇವ ! ಈಗ ನೀನೇ ದಾರಿ ತೋರಬೇಕು."

೩. " ಈ ಕಲಿಯುಗದಲ್ಲೂ ಇಂತಹ ಪವಾಡ ಒಂದಾದರೂ ಆದರೆ ಜ... ಧರ್ಮಿಗಳಾದಾರು."

೪. " ಆ ಬೆಳಕಿನಲ್ಲಿ ರವಿಯ ತೇಜಸ್ಸು ಚಂದ್ರನ ತಂಪು, ಎರಡೂ ಸೇರಿದ್ದವು."

೫. " ನನ್ನ ನಾಟ್ಯ ನನಗೆ ಸುಖ ಕೊಟ್ಟರೆ ಸಾಕು."

೬. " ಇವಳು ನಮ್ಮ ವೇಲಾಪುರಿಯ ಮಗುವಲ್ಲವೇ ?"

೭. " ಭಲೆ ಭಲೆ ! ನಾಟ್ಯವು ಇವಳಿಗಾಗಿಯೇ ಹುಟ್ಟಿತು. "

೮. " 'ನರ್ತನ ಗಂಧರ್ವವಿದ್ಯೆ, ದೇವಲೋಕದ ಸೊತ್ತು' ಎಂಬುದು ಸುಳ್ಳಾಯಿತು"

ಇಲ್ಲಿರುವ ಪದಗಳನ್ನು ಬಿಡಿಸಿ ಸಂಧಿಯನ್ನು ಬರೆಯಿರಿ :

ಶಾಂತಲೇಶ್ವರ ; ಬೃಹದಾಕಾರ ; ದಿಗ್ವಿಜಯ ; ಧ್ಯಾನಾದಿ ; ಸೂರ್ಯೋದಯ ; ವರ್ತುಲಾಕಾರ ; ಮಹೋನ್ನತ ; ದಿವ್ಯಾಭರಣ ; ಸೂರ್ಯಾಲಯ.

ಇವುಗಳಿಗೆ ವಿಗ್ರಹ ಬರೆದು ಸಮಾಸವನ್ನು ತಿಳಿಸಿ :

ಕಿರುಗಂಟೆ ; ಕಟ್ಟಾಜ್ಞೆ ; ಕೈತೂಗು ; ಅಸ್ತ್ರಶಸ್ತ್ರ ; ಮೈಕೊಡಹು ; ಸಿಂಹಶಾರ್ದೂಲ... ಇಕ್ಕಡೆ ; ಗಜಾನನ.

ಇವುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಪ್ರಯೋಗಿಸಿ :

ಮಹಾಪ್ರಯಾಸ ; ವಿಶ್ವಪ್ರಯತ್ನ ; ಸಕಲತಂತ್ರಸ್ವತಂತ್ರ ; ಸರ್ವವ್ಯಾ... ಆಹರ್ನಿಶಿ ; ಕದಡಿಹೋಗು ; ಉಪಕ್ರಮ ; ಮಂಕುಬಡಿ ; ವನಿಗೂಡಿಸು ; ಬಿಗಿದ...

***

# ಗರುಡಗಂಬದ ದಾಸಯ್ಯ

—ಗೊರೂರು ರಾಮಸ್ವಾಮಿ ಅಯ್ಯಂಗಾರ್

ನಮ್ಮ ಊರಿನ ಹೊಲಗೇರಿಯ ಆದಿಕರ್ಣಾಟಕರು ಬಹಳ ದಿವಸಗಳಿಂದ ಭಜನೆಗೆ ಬೇಕಾಗುವ ಗರುಡಗಂಬ ಒಂದನ್ನು ತರಿಸಿಕೊಡಿ ಅಂತಾ ಹೇಳ್ತಾ ಇದ್ರು. ನಾನೂ ಆಗ್ಲಿ ಆಗ್ಲಿ ಅಂತ ಹೇಳ್ತಾ ಒಂದೂವರೆ ವರುಷ ತಳ್ಳಿದೆ. ಅವತ್ತು ಮಧ್ಯಾಹ್ನ ಬೆಂಗಳೂರಿಗೆ ಹೋಗಿದ್ದಾಗ ನನ್ನ ಸ್ನೇಹಿತ ಶಂಕರಪ್ಪ "ಒಂದು ಗರುಡಗಂಬ, ಮಲ್ಲೇಶ್ವರದಲ್ಲಿ ಮದ್ಯಪಾನ ನಿರೋಧದ ಮೇಲೆ ಉಪನ್ಯಾಸ ಮಾಡುವ ಸಾಧುವಿನ ಬಳಿ ಇದೆ. ಆ ಸಾಧುವಿಗೂ, ನನಗೂ ಬಹಳ ಸ್ನೇಹ. ಈ ದಿವಸ ಅವನು ಬಿನ್ನಿಮಿಲ್ಲಿನ ಬಳಿ ಹೆಂಡ, ಸಾರಾಯಿ ಕುಡಿಯುವುದು ಪಾಪವೆಂಬ ವಿಷಯದ ಮೇಲೆ ಉಪನ್ಯಾಸ ಮಾಡುತ್ತಾನೆ. ಅವನಿಗೆ ಅಫೀಮನ್ನು ಕುಡಿಯದಿದ್ದರೆ ಉಪನ್ಯಾಸಕ್ಕೆ ಸ್ಫೂರ್ತಿಯೇ ಬರುವುದಿಲ್ಲವಂತೆ. ಆದರೆ ಅಫೀಮಿಗೆ ಅವನ ಕೈಯ್ಯಲ್ಲಿ ಒಂದು ಕಾಸೂ ಇಲ್ಲ. ಗರುಡಗಂಬವನ್ನು ಕೊಟ್ಟುಬಿಡುತ್ತಾನಂತೆ. ಅದನ್ನು ನೀನು ಕೊಂಡುಕೊ" ಎಂದನು. ನಾನು ನಿರುತ್ಸಾಹದಿಂದ "ಹೋಗಯ್ಯ, ಆ ಗರುಡಗಂಬ ಕೊಂಡುಕೊಂಡು ತಿರುಪಕ್ಕೆ ತಾನೇ ಹೋಗಬೇಕು ?" ಎಂದೆ. ಶಂಕರಪ್ಪ, "ನಿಮ್ಮ ಆದಿಕರ್ಣಾಟಕರಿಗೆ ಉಪಯೋಗವಾಗುತ್ತೆ, ಕಡಿಮೆ ಬೆಲೆಗೆ ಕೊಟ್ಟುಬಿಡುತ್ತಾನಂತೆ ತೆಗೆದುಕೊ" ಎಂದು ಬಲಾತ್ಕರಿಸಿ ೨ ರೂಪಾಯಿ ಬೆಲೆಬಾಳುವ ಗರುಡಗಂಬವನ್ನು ೧೦ ಆಣೆಗೆ ನನಗೆ ಕೊಡಿಸಿದನು. ಸಾಧುವು ಆ ದುಡ್ಡಿಗೆ ಅಫೀಮನ್ನು ಸೇವಿಸಿ ತನ್ನ ಉಪನ್ಯಾಸಕ್ಕೆ ಬಿನ್ನಿಮಿಲ್ಲಿನ ಕಡೆಗೆ ಹೊರಟುಹೋದನು.

ಗರುಡಗಂಬ ೧೦ ಆಣೆಗೆ ಸಿಕ್ಕಿದುದರಿಂದ ನನಗೆ ಸಂತೋಷವೇ ಆಯಿತು. ಹಿಂದೆ ಒಂದೆರಡು ಸಾರಿ ಒಂದೂವರೆ ರೂಪಾಯಿಗೆ ಕೇಳಿದ್ದರೂ ಅದು ಸಿಕ್ಕಿರಲಿಲ್ಲ. ನಮ್ಮ ಆದಿಕರ್ಣಾಟಕರಿಗೆ ಪರಮಸಂತೋಷವುಂಟಾಗುವುದೆಂಬ ಹುರುಪಿನಿಂದ. ನಾನು ಮೂರು ಘಂಟೆಯ ರೈಲಿಗೆ ಗರುಡಗಂಬವನ್ನು ಕೈಯಲ್ಲಿ ಹಿಡಿದುಕೊಂಡು ಮಲ್ಲೇಶ್ವರದಿಂದ ಹೊರಟೆ,

ನಾನು ಕೃಷ್ಣಬಜಾರಿನ ಮುಂದಕ್ಕೆ ಬಂದಾಗ ಎಲ್ಲರೂ ನನ್ನ ಕಡೆಯೇ ನೋಡುತ್ತಿರುವಂತೆ ತೋರಿತು. "ಇವರು ನನ್ನನ್ನೇ ಕುರಿತು ನೋಡುವಷ್ಟು ನಾನೇನೂ ಸುಂದರನಲ್ಲವಲ್ಲಾ" ಎಂದುಕೊಂಡು ಇನ್ನೂ ನಾಲ್ಕು ಹೆಜ್ಜೆ ಮುಂದಕ್ಕೆ ಹಾಕಿದೆ. ಆಗ ತಟ್ಟನೆ ಹೊಳೆಯಿತು. ನಾನು ಗರುಡಗಂಬವನ್ನು ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿದ್ದುದನ್ನು ಜನರು ಕಂಡು, "ಇವನಿಗೆ ಜೋಳಿಗೆ, ಜಾಗಟೆ ಇಲ್ಲ. ಆದರೂ ಇವನೂ ದಾಸಯ್ಯನೇ, ಸಂದೇಹವಿಲ್ಲ" ಎಂದು ಯೋಚಿಸಿದ್ದರು. ನನ್ನ ವೇಷವೇನೋ ಸ್ವಲ್ಪಮಟ್ಟಿಗೆ ಜಾಗಟೆ, ಜೋಳಿಗೆಯ ಗುರುವಿಗೆ ಸಮಾನವಾಗಿಯೇ ಇದ್ದಿತು. ಮಾಸಿದ ಒಂದು ಬಿಳಿಯ ಖಾದಿ ದಟ್ಟಿ, ಮಿತಿಮೀರಿ ಬೆಳೆದ ದೇಹಕ್ಕೆ ಬಿಗಿಯಾಗಿ ಮೇಲಕ್ಕಾಗಿದ್ದ ಒಂದು ಅಂಗಿ, ಅದರ ಮೇಲೆ ಹೊದೆದುಕೊಂಡಿದ್ದ ಕೊಳೆಯಾದ ಅಂಗವಸ್ತ್ರ, ಹೆಗಲ ಮೇಲೆ ನೇತಾಡುತ್ತಿದ್ದ ಅದರ ತುದಿಯಲ್ಲಿ ಕಟ್ಟಿದ್ದ ಸೌತೆಕಾಯಿಯ ಗಂಟು. ವೈದಿಕರಾದ ನಮ್ಮ ತಂದೆಯವರು ಬೆಂಗಳೂರಿಗೆ ಬರುವವರೆಗು ವದಂತಿ ಇದ್ದುದರಿಂದ ಮುಖಕ್ಷೌರ ಮಾಡಿಸದೆ ಬೆಳೆಸಿದ್ದ, ಚೂಪಾದ, ಅರದಂತಿದ್ದ ಕರಿಯ ಗಡ್ಡ—ಇವು ಆಗಿನ ನನ್ನವೇಷದ ಕೆಲವು ವೈಚಿತ್ರ್ಯಗಳು. ಇದೇ ವೇಷದಲ್ಲಿ ಹೋಟಲಿನಲ್ಲಿ ಕುಳಿತಿದ್ದ ನನ್ನನ್ನು ನೋಡಿ ಹಿಂದೆ ಒಬ್ಬನು "........ಸುಮ್ಮನೆ ಕುಕ್ಕರಬಡಿದಿರೋಕೆ ನಿನಗ ಸಂಬಳ ಕೊಡೋದು. ಹೋಗಿ ಬೇಗ ದೋಸೆ ತೆಗೆದುಕೊಂಡು ಬಾ" ಎಂದಿದ್ದನು. ನಾನು ದಾಸಯ್ಯನೆಂಬುದು ಜನರ ಮನಸ್ಸಿಗೆ ತಿಳಿಯಿತೆಂದು ನನಗೆ ಹೊಳೆದ ಕೂಡಲೇ, ನನಗ ಉಂಟಾದ ಅವಮಾನ ಹೇಳತೀರದು. ಭೂಮಿಯು ಅಂದು ನನ್ನನ್ನು ಅಲ್ಲೇ ನುಂಗಿಕೊಂಡಿದ್ದರೆ ನನಗೇನೂ ದುಃಖವುಂಟಾಗುತ್ತಿರಲಿಲ್ಲ.

ನಾನು ಏನು ಮಾಡಬೇಕೆಂದು ತೋರದೆ ಎರಡು ನಿಮಿಷ ಅಲ್ಲೇ ಸುಮ್ಮನೆ ನಿಂತುಬಿಟ್ಟೆ. ಆ ಎರಡು ನಿಮಿಷಗಳಲ್ಲಿ ನೂರಾರು ಜನ ನನ್ನ ಎದುರಿಗೆ ಹೋದರು. ಅವರೆಲ್ಲರಿಗೂ ನನ್ನ ಗರುಡಗಂಬದ ಮೇಲೆ ದೃಷ್ಟಿಯಿದ್ದಿತೇ ಹೊರತು ಮತ್ತಾವುದರ ಮೇಲೂ ಇರಲಿಲ್ಲ. ಅವರು ನನ್ನ ಕಡೆಯೇ ನೋಡಿಕೊಂಡು ಹಾಸ್ಯಮಾಡುತ್ತಾ ಮಾತನಾಡುತ್ತಿರುವಂತೆ ತೋರಿತು. ಹಾಳಾದ್ದನ್ನ ಬಟ್ಟೆಯಲ್ಲಾದರೂ ಸುತ್ತಿಕೊಳ್ಳೋಣ ಎಂದರೆ ಅದು ಎಣ್ಣೆಮಯವಾಗಿದ್ದುದರಿಂದ ಅದಕ್ಕೂ ಅವಕಾಶವಿರಲಿಲ್ಲ. ಹಾಗೂ ಹೀಗೂ ಮಲ್ಲೇಶ್ವರದ ಸಂಪಿಗೆರಸ್ತೆಯ ಗಲ್ಲಿಯನ್ನ ಹಾದು ನಮ್ಮ ಸ್ನೇಹಿತನ ಕೊಠಡಿಗೆ ಹೋಗಿ ಅದನ್ನು ಇಟ್ಟು, ಸದ್ಯ ಬದುಕಿಕೊಂಡೆನೆಂದು ನಿಟ್ಟುಸಿರು ಬಿಟ್ಟೆ.

ಆ ಸ್ನೇಹಿತನ ಕೊಠಡಿಗೆ ಎಷ್ಟೋ ಜನರು ಬಂದರು. ಅವರಿಗೆಲ್ಲಾ ಅದರ ಮೇಲೆ ಕಣ್ಣು. ಎಲ್ಲರೂ ಹಾಸ್ಯಮಾಡುವವರೇ. ಒಬ್ಬನಂತೂ ನನಗೂ, ಆ ಗರುಡಗಂಬಕ್ಕೂ ಸಂಬಂಧ ವಿಲ್ಲವೆಂದುಕೊಂಡು "..............ಹಾಳಾದ ದಾಸಯ್ಯ ಯಾರಯ್ಯಾ ನಿನಗೆ ಗಂಟುಬಿದ್ದೋನು! ಒಳ್ಳೆಯ ಸ್ನೇಹಿತರನ್ನೇ ಸಂಪಾದಿಸಿದ್ದೀಯೇ! ದಾಸಯ್ಯಗಳು, ಭಿಕ್ಷುಕರು, ಬುಡುಬುಡಿಕೆ ಯವರು, ಗೋಪಾಳದವರು ಇವರೇ ನಿನ್ನ ಸ್ನೇಹಿತರು. ನಿನ್ನ ಯೋಗ್ಯತೆಗೆ ಬೆಂಕಿಹಾಕಿತು...."

ಎಂದನು. ನನ್ನ ಸ್ನೇಹಿತ ಗಲ್ಲಿನ ಶಿಕ್ಷೆಗೆ ಗುರಿಯಾದ ನಿರಪರಾಧಿಯ ಮುಖದಂತೆ ಮುಖವನ್ನು ಮಾಡಿಕೊಂಡು ನನ್ನ ಕಡೆ ನೋಡಿದನು. ನಾನು ಮಂಕನಂತೆ ಸುಮ್ಮನಿದ್ದು ಬಿಟ್ಟೆ.

ಗರುಡಗಂಬದ ಮೇಲೆ ಕೆಲವು ಕಾಗದಗಳನ್ನಾದರೂ ಮುಚ್ಚೋಣವೆಂದರೆ ಜನ ಆ ಕೊಠಡಿ ಬಿಟ್ಟು ಹೊರಕ್ಕೆ ಹೊರಡಲೇ ಇಲ್ಲ. ಅವರೆದುರಿಗೆ ಮುಚ್ಚಿದರೆ "ನಾನೇ" ಎಂದು ಅವರಿಗೆ ಪೂರ್ತಾ ಗೊತ್ತಾಗಿಬಿಡುವುದಲ್ಲ ಎಂಬ ಭಯದಿಂದ ನಾನು ಮುಚ್ಚಲೇ ಇಲ್ಲ. ಆ ಜಾಗವನ್ನು ಬಿಟ್ಟು ಹೊರಕ್ಕೆ ಹೊರಡುವುದಕ್ಕೆ ಕೂಡ ನನಗೆ ಬುದ್ಧಿ ಹೊಳೆಯಲಿಲ್ಲ. ಭಯಂಕರ ಆಪಾದನೆಗಳಿಗೆ ಗುರಿಯಾದವನು ಹೇಗೆ ನಿರುತ್ಸಾಹದಿಂದ ಬಂದುದನ್ನೆಲ್ಲಾ ಸಹಿಸಲು ಸಿದ್ಧನಾಗಿರುವನೋ, ನಾನೂ ಆರೀತಿ ಬಂದ ಅನ್ಯಾಯವನ್ನೆಲ್ಲಾ ಸಹಿಸಲು ಸಿದ್ಧನಾಗಿ ಕುಳಿತುಬಿಟ್ಟೆ.

ರಾತ್ರಿ ಹತ್ತು ಗಂಟೆ ರೈಲಿಗೆ ನಾನು ಹೊರಡಬೇಕಾಗಿದ್ದಿತು. ಆ ಹೊತ್ತಿಗಾದರೂ ಬಂದಿದ್ದವರು ನನ್ನ ಸ್ನೇಹಿತನ ಕೊಠಡಿಯನ್ನು ಬಿಟ್ಟು ಹೊರಡಬಹುದೆಂದು ನಿರೀಕ್ಷಿಸುತ್ತಿದ್ದೆ. ಒಂಬತ್ತೂವರೆ ಘಂಟೆಯವರೆಗೆ ಕಾದರೂ ಆ ಪಾಪಿಗಳು ಆ ಕೊಠಡಿಯನ್ನು ಬಿಟ್ಟು ಹೊರಕ್ಕೆ ಹೊರಡಲಿಲ್ಲ. ನಾನು ವಿಧಿಯಿಲ್ಲದೆ ಅವರ ಎದುರಿಗೇ ತಿರುಪೆಯ ಕಂಬವನ್ನು ಹೊತ್ತುಕೊಂಡು ರೈಲ್ವೇ ಸ್ಟೇಷನ್ನಿಗೆ ಬಂದೆನು.

ನಾನು ಕುಳಿತ ಗಾಡಿಯಲ್ಲಿ ಒಬ್ಬ ದೊಡ್ಡ ಮನುಷ್ಯನು ಕುಳಿತಿದ್ದನು. ನಾನು ಬೆಂಚಿನ ಕೆಳಗೆ ಇಟ್ಟ ಗರುಡಗಂಬದ ಕಡೆಯೇ ಅವನು ನೋಡುತ್ತಿದ್ದನು. ಅವನೂ ನನ್ನನ್ನು ದಾಸಯ್ಯನೆಂದು ತಿಳಿಯಬಾರದೆಂದು ನಾನು ಅವನೊಂದಿಗೆ ಇಂಗ್ಲೀಷ್‌ನಲ್ಲಿ ಮಾತನಾಡಲು ಪ್ರಾರಂಭಿಸಿದೆ. ಆದರೂ ಅವನು ನನ್ನ ವಿಷಯದಲ್ಲಿ ಅಸಮಾಧಾನದಿಂದಲೇ ಮುಖವನ್ನು ಗಂಟುಹಾಕಿಕೊಂಡಿದ್ದನು.

ಆ ಹಾಳಾದ ಗರುಡಗಂಬವನ್ನು ತಲೆಕೆಳಕಾಗಿ ಹಿಡಿದುಕೊಂಡು ನಮ್ಮೂರ ಸ್ಟೇಷನ್ನಿನಲ್ಲಿ ಇಳಿದು, ಆದಿಕರ್ಣಾಟಕರ ಭಜನೆ ಮಂದಿರದ ಕಡೆಗೆ ಕತ್ತಲೆಯಲ್ಲಿ ಓಡುತ್ತಿದ್ದೆ. ಸ್ಟೇಷನ್ ಮಾಸ್ಟರು ..."ಅದ್ಯಾರೋ ದಾಸಯ್ಯ, ಟಿಕೆಟಿಲ್ಲದೆ ಆ ಕಡೆಯಿಂದ ಓಡ್ತಿರೋನು ?" ಎಂದು ಕೂಗಿದನು. ನನ್ನ ಹೊಟ್ಟೆಯಲ್ಲಿ ಅಡಗಿದ್ದ ಸಿಟ್ಟೆಲ್ಲವೂ ಹೊರಗೆ ಬಂದು "ನಿಮ್ಮಪ್ಪ ದಾಸಯ್ಯ" ಎಂದು ಟಿಕೆಟ್ಟನ್ನು ಎಸೆದು, ದೆವ್ವ ಹಿಡಿಯಲ್ಪಟ್ಟವನಂತೆ ಮನೆಗೆ ಓಡಿಹೋದೆನು.

## ಟಿಪ್ಪಣಿ

ಕವಿ ಮತ್ತು ಕರ್ತೃ :

ಈ ವಿನೋದಪರ ಪ್ರಬಂಧವನ್ನು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ "ಗರುಡಗಂಬದ ದಾಸಯ್ಯ" ಎಂಬ ಪ್ರಬಂಧಸಂಕಲನದಿಂದ ಆಯ್ದುಕೊಳ್ಳಲಾಗಿದೆ.

ಗೊರೂರು ರಾಮಸ್ವಾಮಿ ಅಯ್ಯಂಗಾರರು ನಮ್ಮ ನಾಡಿನ ವಿಖ್ಯಾತ ಲೇಖಕ ಒಬ್ಬರಾಗಿದ್ದಾರೆ. ಪ್ರಾದೇಶಿಕಜೀವನವನ್ನು ಚಿತ್ರಿಸುವುದರಲ್ಲಿ, ನವುರಾದ ಹಾ ಪ್ರಸಂಗಗಳನ್ನು ವರ್ಣಿಸುವಲ್ಲಿ ಅವರು ಅದ್ವಿತೀಯರಾಗಿದ್ದಾರೆ. ಅವರಷ್ಟು ಸಮರ್ಥವಾಗಿ ನಮ್ಮ ಗ್ರಾಮಜೀವನದ ಸ್ವಾರಸ್ಯಗಳನ್ನು ಸಾಹಿತ್ಯದಲ್ಲಿ ತಂದಿರುವ ಲೇಖಕರು ತುಂಬ ವಿರಳ. ಕ ಕಾದಂಬರಿ, ಪ್ರಬಂಧಗಳನ್ನು ಅವರು ಹೇರಳವಾಗಿ ರಚಿಸಿದ್ದಾರೆ. ಜೀವನಚರಿತ್ರೆಗಳನ್ನು ವಿಚಾರಸಾಹಿತ್ಯವನ್ನೂ ಗಣನೀಯ ಪ್ರಮಾಣದಲ್ಲಿ ಸೃಷ್ಟಿಸಿದ್ದಾರೆ. ರಾಜಕೀಯ ಹೋರಾಟ ಭಾಗವಹಿಸಿ ಸೆರೆಮನೆಯ ಅನುಭವವನ್ನೂ ಪಡೆದಿರುವ ಗೊರೂರರು ಖಾದಿ ಪ್ರಚಾರ, ಗ್ರಾಮ ನೈರ್ಮಲ್ಯ ಮುಂತಾದ ರಚನಾತ್ಮಕ ಕಾರ್ಯಗಳಲ್ಲಿಯೂ ಆಸಕ್ತರಾಗಿದ್ದಾರೆ. 'ನಮ್ಮೂ ರಸಿಕರು', 'ಬೈಲಹಳ್ಳಿಯ ಸರ್ವೆ', 'ಶಿವರಾತ್ರಿ', 'ಬೆಸ್ತರ ಕರಿಯ', 'ಹೇಮಾವ 'ಮೆರವಣಿಗೆ,' ಮುಂತಾದುವು ಅವರ ಕೆಲವು ಪ್ರಖ್ಯಾತ ಪುಸ್ತಕಗಳು.

ಪ್ರಕೃತ ಪ್ರಬಂಧದಲ್ಲಿ ತಮ್ಮೂರಿನ ಹರಿಜನರ ಬೇಡಿಕೆಯೊಂದನ್ನು ಈಡೇರಿಸಲು ಹೋ ತಾವು ವಿಚಿತ್ರ ಸನ್ನಿವೇಶದಲ್ಲಿ ಸಿಕ್ಕಿಕೊಂಡ ಒಂದು ಪ್ರಸಂಗವನ್ನು ಲೇಖಕರು ವರ್ಣಿಸಿದ್ದಾ ಗರುಡಗಂಬದ ದಾಸಯ್ಯ ಮುಖ್ಯವಾಗಿ ಬಿಳಿಗಿರಿರಂಗನ ಬೆಟ್ಟಕ್ಕೆ ಸೇರಿದವನು. ಅವ ವಾಸಸ್ಥಳ ಎಳಂದೂರು ಸುತ್ತಮುತ್ತ. ಆದರೆ ಈಚಿನ ಪ್ರಯಾಣಸೌಕರ್ಯಗಳ ಫಲವಾ ಅವನನ್ನು ಎಲ್ಲ ಕಡೆಯೂ ಕಾಣಬಹುದು. ಅವನು ಅಳಿಸಿ ಹೋಗುತ್ತಿರುವ ಸಂಪ್ರದಾಯ ಒಂದು ಸಾಕ್ಷಿಯಾಗಿದ್ದಾನೆ.

ಕಠಿಣಪದಗಳ ಅರ್ಥ :

ಆದಿಕರ್ಣಾಟಕರು—ಹರಿಜನರು. ಗರುಡಗಂಬ—ದೊಡ್ಡ ದೀಪದ ಕಂಬ (ಇದರಲ್ಲಿ ಅನೇ ಮಾದರಿಗಳುಂಟು) ದಟ್ಟಿ—ಪಂಚೆ. ಅಂಗವಸ್ತ್ರ— ಶಲ್ಯ. ಗೋಪಾಳದವರು—ತಿರುಪೆಯವರು.

ಪ್ರಶ್ನೆಗಳು :

೧. ಲೇಖಕರ ಉಭಯಸಂಕಟದ ಪ್ರಸಂಗವನ್ನು ವರ್ಣಿಸಿ.
೨. ಅವರಿಗೆ ಹೋಟಲಿನಲ್ಲಾದ ಅನುಭವವೇನು ? ಏಕೆ ?
೩. ಗರುಡಗಂಬ ಎಂದರೇನು ? ಅದನ್ನು ನೀವು ನೋಡಿದ್ದೀರಾ ? ವಿವರಿಸಿ.
೪. ದಾಸಯ್ಯನನ್ನು ನೀವು ನೋಡಿದ್ದೀರಾ ? ಅವನನ್ನು ವರ್ಣಿಸಿ.

***

# ಯಾರಿವನು ?

—ಕುವೆಂಪು

ಕ್ರಿಸ್ತಾಬ್ದ ೧೮೯೩ ನೆಯ ಸಂವತ್ಸರದ ಜನವರಿ ತಿಂಗಳು. ಮಾಗಿಯ ಕಾಲದ ಒಂದು ದಿನ. ಇನ್ನೂ ಉಷಃಕಾಲ. ಮೂಡಣದೆಸೆವೆಣ್ಣು ದರೋನ್ಮೀಲಿತನಯನೆಯಾಗಿದ್ದಾಳೆ. ಕತ್ತಲೆಯ ಮೊತ್ತವು ಮೆಲ್ಲಮೆಲ್ಲನೆ ಹಿಂಜರಿಯತೊಡಗಿದೆ. ಎಚ್ಚತ್ತ ಹಕ್ಕಿಗಳ ಸವಿಗೊರಲಿನ ಇಂಚರವು ಪ್ರಶಾಂತ ವಾಯುಮಂಡಲದಲ್ಲಿ ತರಂಗಗಳನ್ನು ಎಬ್ಬಿಸುತ್ತಿದೆ. ಮಾಗಿಯ ಮುಗಿಲಿನಿಂದ ಬಿಳಿಯ ಮಂಜಿನ ಸೋನೆ ಎಡೆಬಿಡದೆ ಸುರಿಯುತ್ತಿದೆ.

ಇಂತಹ ಸಮಯದಲ್ಲಿ ಕನ್ಯಾಕುಮಾರಿಯ ಪವಿತ್ರ ದೇವಾಲಯದಲ್ಲಿದ್ದ ನಿರುದ್ವಿಗ್ನ ಜೀವಿಗಳಾದ ಪೂಜಾರಿಗಳು ದೇವಸ್ಥಾನದ ಬಾಗಿಲುಗಳನ್ನು ತೆರೆದು ಆ ದಿನದ ಕಾರ್ಯಗಳಲ್ಲಿ ಎಂದಿನಂತೆ ತೊಡಗಿದ್ದರು. ನಾನಾ ಕಾರ್ಯಭಾರಗಳಲ್ಲಿ ತೊಡಗಿದ್ದ ಅವರು ಇದ್ದಕ್ಕಿದ್ದ ಹಾಗೆ ಚಕಿತರಾಗಿ ಕೈಲಿದ್ದ ಕೆಲಸಗಳನ್ನು ಹಾಗೆಯೇ ನಿಲ್ಲಿಸಿಬಿಟ್ಟು, ದೇಗುಲದ ಹೆಬ್ಬಾಗಿಲ ಕಡೆಗೆ ನೋಡತೊಡಗಿದರು. ಸನ್ಯಾಸಿಯೊಬ್ಬನು ಶಾಂತಗತಿಯಿಂದ ದೇವಾಲಯ ಪ್ರವೇಶ ಮಾಡುತ್ತಿದ್ದುದು ಅವರ ಕಣ್ಣಿಗೆ ಬಿತ್ತು. ಒಳಗೆ ಬಂದ ಆ ಭವ್ಯಮೂರ್ತಿ ಎಡಬಲಗಳನ್ನು ನಿರೀಕ್ಷಿಸದೆ ನೆಟ್ಟಗೆ ಗರ್ಭಗುಡಿಯ ಮುಂದೆ ಹೋಗಿ ದೇವಿಗೆ ದಂಡಪ್ರಣಾಮ ಮಾಡಿ ಎದ್ದು ನಿಂತನು. ದೇವರ ಮುಂದೆ ಹೊತ್ತಿಸಿದ್ದ ದೀಪಗಳ ಬೆಳಕಿನಲ್ಲಿ ಆ ಮಹಾಪುರುಷನ ದಿವ್ಯ ತೇಜಸ್ಸನ್ನು ಅವಲೋಕಿಸಿದ ಪೂಜಾರಿಗಳು ವಿಸ್ಮಯಮೂಕರಾದರು. ಅವರ ಜೀವಮಾನದಲ್ಲಿ ಅಂತಹ ವ್ಯಕ್ತಿಯನ್ನು ಅವರು ಕಂಡಿರಲಿಲ್ಲ. ಪುಣ್ಯಕ್ಷೇತ್ರವಾದ ಕನ್ಯಾಕುಮಾರಿಗೆ ಅನೇಕ ಸನ್ಯಾಸಿಗಳೂ, ಸಂಸಾರಿಗಳೂ ಎಲ್ಲ ಬಂದಿದ್ದರು. ಆದರೆ ಆದಿನ ಅರ್ಚಕರು ನೋಡಿದ ವ್ಯಕ್ತಿ ಅಸಾಧಾರಣ ತೇಜೋವಂತನಾಗಿದ್ದನು.

ಸುಮಾರು ಮೂವತ್ತು ಸಂವತ್ಸರಗಳ ವರ್ಷವಸಂತಗಳಿಂದ ತಾಡಿತವಾಗಿ, ಐದು, ಐದು ಮುಕ್ಕಾಲು ಅಡಿಗಳಷ್ಟು ಎತ್ತರವಾಗಿ ದೀರ್ಘದೇಹಿಯಾಗಿದ್ದ ಆತನ ಚಪ್ಪಟೆಚೌಕದ

ಭುಜಪ್ರದೇಶವೂ, ವಿಸ್ತಾರವಾಗಿದ್ದ ಎದೆಯೂ, ನಾನಾ ವ್ಯಾಯಾಮ ಕ್ರೀಡೆಗಳಲ್ಲಿ ಪಳಗಿ ಸುಪ್ಪ
ವಾಗಿ ಬಲಿಷ್ಠವಾಗಿದ್ದ ತೋಳುಗಳೂ ಆತನಿಗೆ ಜಟ್ಟಿಯ ಮೈಕಟ್ಟು ಕೊಟ್ಟು, ನೋಡಿದವ
ಯಲ್ಲಿ ಗೌರವಮಿಶ್ರವಾದ ಭೀತಿ ಮೂಡುವಂತೆ ಮಾಡುತ್ತಿದ್ದುವು. ಸ್ವಲ್ಪಮಟ್ಟಿಗೆ ಭಾರ
ಸ್ಥೂಲವಾಗಿದ್ದರೂ ಆ ವಜ್ರಶರೀರದಲ್ಲಿ ಆಲಸ್ಯಕ್ಕಾಗಲೀ, ತಾಮಸಕ್ಕಾಗಲೀ ಎಡೆಯಿದ್ದ
ಕಾಣುತ್ತಿರಲಿಲ್ಲ. ಎಣ್ಣೆಗೆಂಪಾಗಿ ಅಗಲವಾಗಿದ್ದ ಆತನ ಮುಖದಲ್ಲಿ ಧೀರಲಲಾಟವೂ,
ಹುಬ್ಬುಗಳೂ, ದಾರ್ಢ್ಯಸೂಚಕವಾದ ಮೊರಡುಗಲ್ಲವೂ, ಕರ್ರಗೆ, ತೀಕ್ಷ್ಣವಾಗಿ, ನಿರಂತರಾನ್ನ
ವಾಗಿ, ಕಮಲದಳಗಳನ್ನು ನೆನಪಿಗೆ ತರುವ, ಅದ್ಭುತ ತೇಜೋನ್ವಿತ ವಿಶಾಲ ನೇತ್ರದ್ವಯ
ಪೂಜ್ಯಭಾವವನ್ನು ಉದ್ದೀಪನಗೊಳಿಸುತ್ತಿದ್ದುವು. ಆ ದೃಷ್ಟಿಯಲ್ಲಿ ದಾರ್ಢ್ಯದೊ
ಕರುಣೆಯೂ, ಮೋಹದೊಡನೆ ಭೀಷಣತೆಯೂ, ವ್ಯಂಗ್ಯದೊಡನೆ ಹಾಸ್ಯವೂ, ವಿ
ಭಾವದೊಡನೆ ಗಂಭೀರಜ್ಞಾನವೂ ಸಮ್ಮಿಳಿತನಾಗಿದ್ದವು. ಅದು ಸರ್ವವ್ಯಾಪಿಯೂ, ಸರ್ವ
ಮುಖವೂ ಆಗಿ ಅಂತರಂಗದ ಐಶ್ವರ್ಯದ ಸಮುಜ್ವಲಕಾಂತಿಗೆ ಸಾಕ್ಷಿಯಾಗಿ
ದ್ವಂದ್ವಗಳಿಗೊಂದು ಸಮನ್ವಯರಂಗವಾಗಿತ್ತು. ಕಾಷಾಯವಸ್ತ್ರಧಾರಿಯೂ, ದಂಡಧಾರಿಯ
ಬ್ರಹ್ಮವನವಿಹಾರಿಯೂ ಆಗಿದ್ದ ಆತನ ಆತ್ಮಶ್ರೀ ಓಜಸ್ವಿಯಾದ ಸುಂದರ ಗಂಭೀರವದನದಿ
ಹೊರಸೂಸುತ್ತಿತ್ತು. ಕಾವಿಯ ರುಮಾಲನ್ನು ಸುತ್ತಿದ್ದ ಆತನು ಅರ್ಚಕರ ಚಕಿತದೃಷ್ಟಿ
ಛದ್ಮವೇಷದ ರಾಜಪುರುಷನಂತೆ ತೋರಿದನು.

ಧ್ಯಾನಾರೂಢನಾಗಿ ಮಾತೆಯ ಮುಂದೆ ನಿಂತಿದ್ದ ಆ ಮಾನವಕೇಸರಿ ಸ್ವಲ್ಪ ಹೊತ್ತಿ
ಮೈತಿಳಿದು, ನಿಟ್ಟುಸಿರುಬಿಟ್ಟು, ದೇವಾಲಯದ ಸಮಸ್ತಭಾಗಗಳನ್ನೂ ತೀಕ್ಷ್ಣ
ದೃಷ್ಟಿಯಿಂದ ಈಕ್ಷಿಸಿ ಹೊರಹೊರಟನು. ಆತನ ಪ್ರಶಾಂತ ಗಂಭೀರ ಹೃದಯ
ಯಾವುದೋ ಒಂದು ಮಹೋದ್ವೇಗದ ಲಹರಿ ತಾಂಡವವಾಡುತ್ತಿದ್ದಂತೆ ತೋರುತ್ತಿ
ಪೂಜಾರಿಗಳು ಬಾಗಿಲವರೆಗೂ ಓಡಿಬಂದು ಆತನು ಹೋಗುತ್ತಿದ್ದ ದಾರಿಯನ್ನೇ ನಿಟ್ಟಿಸು
ಮನಸ್ಸಿನಲ್ಲಿಯೇ ನಮಿಸಿದರು. ಆತನು ಸಮುದ್ರಾಭಿಮುಖವಾಗಿ ಹೋಗುತ್ತಿದ್ದ
ಅರ್ಚಕರು ನೋಡುತ್ತಿದ್ದ ಹಾಗೆಯೇ ಹಿಮಾವರಣದಲ್ಲಿ ಕಣ್ಮರೆಯಾದನು. ಅರ್ಚ
ಒಬ್ಬರ ಮುಖವನ್ನು ಒಬ್ಬರು ನೋಡುತ್ತಾ "ಯಾರಿವನು ?" ಎಂದರು.

ಗುಡಿಯಿಂದ ಹೊರಟ ಆ ಸನ್ಯಾಸಿ ಸಮುದ್ರತೀರಕ್ಕೆ ಬಂದನು. ಕನ್ಯಾಕುಮಾರಿ
ಸಮುದ್ರತೀರ ! ಭಾರತಮಾತೆಯ ಪವಿತ್ರ ಪಾದಗಳ ತುತ್ತತುದಿ ! ವೇದಭೂಮಿಯ ಕೊ
ಸಂನ್ಯಾಸಿ ಭಾವಪರವಶನಾಗಿ ನಿಂತು ಸುತ್ತಲೂ ದೃಷ್ಟಿಪ್ರಸಾರಮಾಡಿದನು. ಮುಂದು
ವಿಸ್ತಾರವಾದ, ಅನಂತವಾದ, ಮೇರೆಯರಿಯದ ಮಹಾಸಮುದ್ರ ! ಅಲ್ಲೋ
ಕಲ್ಲೋಲವಾದ ಮಹಾತರಂಗಗಳ ರುದ್ರರಮಣೀಯ ವಿನ್ಯಾಸದಿಂದ ಶೋಭಿಸುತ್ತಿ
ಅಪಾರ ವಾರಿಧಿ ! ಹಿಂದುಗಡೆ ವೇದಮಾತೆಯ ನೆಲಬೀಡಾದ ಬಿತ್ತರದ ಭರತಖಂ

ಭಿನ್ನಭಿನ್ನ ಜಾಗಗಳ, ಭಿನ್ನಭಿನ್ನ ಭಾಷೆಗಳ, ಭಿನ್ನಭಿನ್ನ ರುಚಿಗಳ, ಆದರೂ ಏಕಾಭಿನ್ನ ಸಂಸ್ಕೃತಿಯ ಜನಸಮುದಾಯವನ್ನು ಹೊತ್ತಿರುವ ಪುರಾಣ ಪ್ರಸಿದ್ಧವಾದ ಪುರಾತನ ಭಾರತವರ್ಷ !

ಆಗತಾನೇ ಪೂರ್ವದಿಗಂತದಲ್ಲಿ ಅರುಣೋದಯವಾಗುತ್ತಿತ್ತು. ನಲಿನಲಿಯುತ್ತಿದ್ದ ಕಡಲೊಡಲ ತೆರೆಗಳು ಮುಂಬೆಳಕಿನಲ್ಲಿ ಮಿಂಚುತ್ತಿದ್ದವು. ಶೈಶಿರಪ್ರಭಾತದ ಶೀತಲ ಸಮೀರಣನು ಸುಯ್ಯೆಂದು ತೀಡುತ್ತಿದ್ದನು. ಅನೇಕಾನೇಕ ಸಮುದ್ರಪಕ್ಷಿಗಳು ಹಿಂಜರಿಯುತ್ತಿದ್ದ ಮಂಜಿನಲ್ಲಿ ಹಾರಾಡತೊಡಗಿದ್ದವು. ತೀರದ ಕಲ್ಪವೃಕ್ಷಗಳಲ್ಲಿ ಚಿರಮರ್ಮರನಾದ ಮಾಡುತ್ತಿದ್ದ ತೆಂಗಿನ ಗರಿಗಳಲ್ಲಿ ವಿವಿಧ ನೆಲವಕ್ಕಿಗಳು ಇಂಚರಗೈಯಲು ಪ್ರಾರಂಭಿಸಿದ್ದವು. ಆ ಮಧುರ, ಸುಂದರ, ಶಾಂತ ಸನ್ನಿವೇಶದಲ್ಲಿ ಸಂನ್ಯಾಸಿ ಆವೇಶವಶನಾದನು. ಆ ತಪಸ್ವಿಯ ಕಾಂತಿ ಮಿಗಿಲಾಗುತ್ತಿದ್ದ ಪ್ರಭಾತ ಪ್ರಕಾಶದೊಡನೆ ಸ್ನೇಹ ಬೆಳೆಸುತ್ತಿತ್ತು.

ಸಂನ್ಯಾಸಿ ನಿಂತು ನೋಡಿದನು. ಅನತಿದೂರದಲ್ಲಿ ಕಡಲಿನಿಂದ ಗಜಾಕಾರವಾಗಿ ಮೇಲೆದ್ದ ಒಂದು ಬಂಡೆ ಹಿಂಜರಿದ ಮಂಜಿನಿಂದ ಮೂಡಿದಂತೆ ತೋರಿತು. ಯೋಗಿವರ್ಯನು ಮನಸ್ಸಿನಲ್ಲಿ ಏನು ನೆನೆದನೋ ? ಮಕರ ನಕ್ರ ತಿಮಿಂಗಿಲಮಯವಾಗಿದ್ದ ಆ ಭಯಂಕರವಾದ ಅಂಬುಧಿಯಲ್ಲಿ ಧುಮುಕಿದನು. ತರಂಗಗಳ ನಡುವೆ ದಿಟ್ಟತನದಿಂದ ಈಜತೊಡಗಿದನು. ಆಗತಾನೇ ಸಮುದ್ರತೀರಕ್ಕೆ ಬಂದ ಒಬ್ಬಿಬ್ಬರು ಕಾಷಾಯಧಾರಿಯ ಧೂರ್ತತನವನ್ನು ನೋಡಿ ನಡುಗಿದರು. ಅವರು ನೋಡುತ್ತಿದ್ದ ಹಾಗೆಯೇ ಕೆಚ್ಚೆದೆಯ ಸಂನ್ಯಾಸಿ ನಿರ್ದಿಷ್ಟ ಶಿಲಾರೋಹಣ ಮಾಡಿ. ಬಂಡೆಯ ತಗ್ಗು ಉಬ್ಬುಗಳಲ್ಲಿ ಅದೃಶ್ಯನಾದನು. ತೀರದಲ್ಲಿನ ಜನರು ಒಬ್ಬರ ಮುಖವನ್ನು ಒಬ್ಬರು ನೋಡಿ " ಯಾರಿವನು ? " ಎಂದು ವಿಸ್ಮಿತರಾದರು.

ಆರ್ಯಭೂಮಿಯ ತುತ್ತತುದಿಯ ಅರೆಬಂಡೆಯನ್ನು ಏರಿದ ಸಂನ್ಯಾಸಿ ಮರಳಿ ನಿಂತು ನೋಡಿದನು. ಮಹಾಪರ್ವತವೊಂದರ ತುತ್ತತುದಿಯ ಬಂಡೆಯ ಮೇಲೆ ನಿಂತ ವನಕೇಸರಿ ಸುತ್ತಲಿರುವ ನಿಮ್ನ ಪ್ರದೇಶಗಳನ್ನು ಎವೆಯಿಕ್ಕದೆ ದಿಟ್ಟಿಸುವಂತೆ ಆ ಸಂನ್ಯಾಸಿ ಮರಳಿ ನಿಂತು ನೋಡಿದನು. ಕೋಟ್ಯನುಕೋಟಿ ಭಾವನೆಗಳ ನಿರಂತರ ನೃತ್ಯದಲ್ಲಿ ಆತನು ಭಾವಾವೇಶ ವಶನಾದನು !

ಬಲಗಡೆ ಸಮುದ್ರ, ಎಡಗಡೆ ಸಮುದ್ರ, ಹಿಂದುಗಡೆ ಸಮುದ್ರ, ಮುಂದುಗಡೆ ವಿಸ್ತಾರವಾದ ತನ್ನ ಜನ್ಮಭೂಮಿ. ಮೇಲುಗಡೆ ಅನಂತವಾದ ನೀಲಾಕಾಶ. ಈ ಮಹಾವಸ್ತುಗಳ ನಡುವೆ ತಾನು ! ಸಂನ್ಯಾಸಿ ಕಡಲ ನಡುಬಂಡೆಯ ಮೇಲೆ ನಿಂತು ಸುತ್ತಲೂ ನೋಡಿದನು. ಸಮುದ್ರಾಕಾಶಗಳ ಆಲಿಂಗನಸ್ಥಾನವಾದ ಬಹುದೂರದ ಪೂರ್ವದಿಗಂತದಿಂದ ಕಿಶೋರಕಮಲ ಮಿತ್ರನು ತಳತಳಿಸಿ ಮೂಡಿದನು. ಬಾಲಸೂರ್ಯನ ಕೋಮಲ ಕಿರಣಗಳ ಅರುಣಜ್ಯೋತಿ ಕಡಲಿನ ತೆರೆತೆರೆಗಳಲ್ಲಿ ಹಬ್ಬಿ ಪ್ರತಿಬಿಂಬಿಸಿ ಮಿಂಚಿದುದು. ತೆರೆಗಳ ಶಿಖರಭಾಗದ ಬೆಳ್ನೊರೆಯೊಬ್ಬುಳಿ ಕೋಟ್ಯನುಕೋಟಿ ಮುತ್ತುಗಳ ಮುದ್ದೆಯಂತೆ ಶೋಭಿಸಿತು. ನೀಲಸ್ಫಟಿಕ ವರ್ಣದ ಪರ್ವತರೆಗಳು ನಾಲ್ದೆಸೆಗಳಿಂದಲೂ ಬಂದು ಸಂನ್ಯಾಸಿ ನಿಂತಿದ್ದ ಬಂಡೆಗೆ ಮುದ್ದಿನಿಂದ

ಮುತ್ತು ಕೊಟ್ಟುವು. ಅನತಿದೂರದಿಂದ ತೀರದಲ್ಲಿ ನಿಬಿಡ ಕಲ್ಪದ್ರುಮವನಶ್ರೇಣಿಗಳ ಹಸಿರು ಸೌಂದರ್ಯವು ಪ್ರಾತಃಸೂರ್ಯನ ದರಲೋಹಿತರಾಗದಲ್ಲಿ ನವಚೇತನವನ್ನು ಪಡೆದು ರಂಜಿಸಿತು. ರಾಜಯೋಗಿಯ ಕಣ್ಣುಗಳು ಮಿಂಚಿದುವು. ವದನವು ಆತ್ಮೈಶ್ವರ್ಯದ ತೇಜಸ್ಸಿನಿಂದ ಪ್ರಫುಲ್ಲಿತವಾಯಿತು. ಪೂತ ನೂತನ ಭಾವದಿಂದ ಎದೆಯರಳಿತು. ವಿಕಂಪಿತ ದೇಹನಾಗಿ ಒಯ್ಯನೆ ಕುಳಿತು ಪದ್ಮಾಸನಾರೂಢನಾಗಿ ಧ್ಯಾನಮಗ್ನನಾಗಿಬಿಟ್ಟನು.

ಸುತ್ತಲೂ ಕಡಲಿನ ತೆರೆಗಳು ಮೊರೆದುವು. ಆದರೆ ಆತನ ಹೃದಯದಲ್ಲಿ ಭಾವತರಂಗಗಳು ಇನ್ನೂ ಅತಿಶಯವಾಗಿ ಮೊರೆಯತೊಡಗಿದುವು. ಭಾರತವರ್ಷದ ತುತ್ತತುದಿಯ ಬಂಡೆಯ ಮೇಲೆ ಕುಳಿತ ಆ ದೇಶಭಕ್ತ ವೀರಸಂನ್ಯಾಸಿ ಮಾತೃಭೂಮಿಯ ಭೂತ ಭವಿಷ್ಯದ್ವರ್ತಮಾನಗಳನ್ನು ಕುರಿತು ಚಿಂತಿಸತೊಡಗಿದನು. ಒಂದು ಗಂಟೆಯಾಯಿತು ; ಎರಡು ಗಂಟೆಯಾಯಿತು; ಹೊತ್ತೇರಿತು ; ಬಿಸಿಲೇರಿತು. ಆದರೂ ಆತನು ಚಲಿಸಲಿಲ್ಲ. ಒಮ್ಮೆ ಚಿಂತೆಗಳ ಭರದಲ್ಲಿ ನಡುನಡುವೆ ನಿಟ್ಟುಸುರು ಬಿಡುವನು, ಒಮ್ಮೆ ಧ್ಯಾನಾಸಕ್ತನಾದ ಮತ್ತೊಬ್ಬ ಮಹಾಬುದ್ಧನೋ ಎಂಬಂತೆ ಆತನ ವದನದಲ್ಲಿ ಜ್ಯೋತಿ ತಾಂಡವವಾಡುವುದು. ಒಮ್ಮೆ ಮಹಾವೀರನೋಪಾದಿಯಲ್ಲಿ ಮಲೆಯುವನು, ಒಮ್ಮೆ ಹಸುಳೆಯಂತೆ ದೀನನಾಗುವನು, ಒಮ್ಮೆ ಕಂಬನಿತುಂಬಿದ ಕಣ್ಣುಗಳನ್ನು ವಿಶಾಲವಾಗಿ ತೆರೆದು ಅನಂತವಾದ ಜಲನಿಧಿಯನ್ನು ಅನಿಮಿಷನಯನನಾಗಿ ನಿಟ್ಟಿಸುವನು, ಒಮ್ಮೆ ಕನ್ಯಾಕುಮಾರಿ ರಾಮೇಶ್ವರಗಳಿಂದ ಕೈಲಾಸ ಬದರಿಕಾಶ್ರಮಗಳ ಪರ್ಯಂತ ಹಬ್ಬಿರುವ ಪುಣ್ಯಭೂಮಿಯಾದ ಮಹಾಭಾರತವರ್ಷವನ್ನು ತೀಕ್ಷ್ಣದೃಷ್ಟಿಯಿಂದ ಅವಲೋಕಿಸುವನು. ನಡುನಡುವೆ "ಹೇ ಜನನಿ, ಹೇ ಭರತಮಾತೆ, ಹೇ ನನ್ನ ಜನನಿ. ಹೇ ನನ್ನ ಭರತಮಾತೆ" ಎಂದು ಉದ್ಘೋಷಿಸಿ ಕಂಬನಿಗರೆವನು. ಒಮ್ಮೆ ಹರ್ಷ, ಒಮ್ಮೆ ದುಃಖ, ಒಮ್ಮೆ ಸರಳತೆ, ಒಮ್ಮೆ ಗಾಂಭೀರ್ಯ, ಒಮ್ಮೆ ಮುನಿಸು, ಒಮ್ಮೆ ಶಾಂತಿ ಹೀಗೆ ನಾನಾ ಭಾವಗಳಿಂದ ಆ ಓಜಸ್ವಿಯಾದ ಸಂನ್ಯಾಸಿ ಕಡಲಿನೆದೆಯ ಬಡಬಸಂತಾದನು.

ಸಂನ್ಯಾಸಿ ಮರಳಿ ನಿಮೀಲಿತನಯನನಾದನು. ಭರತಖಂಡದ ಪೂರ್ವೋತ್ತರ ವರ್ತಮಾನಗಳೆಲ್ಲವೂ ಆತನ ಮನದಲ್ಲಿ ಚಲನಚಿತ್ರಗಳಂತೆ ಮಿಂಚತೊಡಗಿದುವು. ಸನಾತನಳಾದ ಭಾರತಾಂಬೆಯ ಯುಗಯುಗಾಂತರಗಳ ಗರ್ಭವು ಗೋಚರವಾಗ ತೊಡಗಿತು. ಆಕೆಯಲ್ಲಿ ಹುಟ್ಟಿ ಬೆಳೆದ ಮಹಾತತ್ತ್ವಗಳು, ಮಹಾವ್ಯಕ್ತಿಗಳು. ಮಹಾರಾಜ್ಯಗಳು. ಮಹಾಚಕ್ರವರ್ತಿಗಳು, ಮಹಾಕವಿವರ್ಯರು. ಮಹಾಯೋಗಿಗಳು ಎಲ್ಲವೂ, ಎಲ್ಲರೂ ಒಬ್ಬೊಬ್ಬರಾಗಿ, ಒಂದೊಂದಾಗಿ ಸಂನ್ಯಾಸಿಯ ಬಗೆಗಣ್ಣಿಗೆ ಹೊಳೆಯತೊಡಗಿದವು. ಎಲ್ಲವೂ ಆ ಜನಾಂಗ ನಿರ್ಮಾಣಕನು ಕಂಡ ದಿವ್ಯದರ್ಶನಗಳಾಗಿದ್ದವು. ಮನು, ವ್ಯಾಸ, ಶಂಕರಾಚಾರ್ಯ, ಬುದ್ಧ. ರಾಮ. ಕೃಷ್ಣ, ಚೈತನ್ಯ ; ಕರ್ಣಾಟಕ, ವಂಗ. ಕೇರಳ, ರಾಜಪುತ್ರಸ್ಥಾನ, ಮಹಾರಾಷ್ಟ್ರ ; ಬ್ರಾಹ್ಮಣ. ಕ್ಷತ್ರಿಯ. ವೈಶ್ಯ, ಶೂದ್ರ : ಹಿಂದೂ, ಮುಸಲ್ಮಾನ, ಪಾರಸಿಕ, ಕ್ರೈಸ್ತ ; ಧರ್ಮ. ಕಾಮ, ಮೋಕ್ಷ ಇವೆಲ್ಲವುಗಳ ಎಡೆಬಿಡದ ಮೆರವಣಿಗೆ

ಬಾಗಿಯ ಬಗೆಯಲ್ಲಿ ಸಾಗಿಹೋಯಿತು. ಶಿಲ್ಪಿವರ್ಯನೊಬ್ಬನು ಮೊರಡಾದ ಒಂದು ಕಾಡು ಬಂಡೆಯಲ್ಲಿ ತನ್ನ ಇಷ್ಟವಿಗ್ರಹವನ್ನು ಸಂದರ್ಶಿಸುವಂತೆ, ಅಧೋಗತಿಗಿಳಿದ ಭರತಖಂಡದಲ್ಲಿ ಸಂನ್ಯಾಸಿ ಸಂಪದ್ಯುಕ್ತವಾದ ಸುಸಂಸ್ಕೃತ ಭಾವೀ ಭರತಖಂಡವನ್ನು ಸಂಕಲ್ಪಿಸಿದನು. ಭಾವಾವೇಶದಿಂದ ಆತನ ತನು ಕಂಪಿಸಿತು. ಸನಾತನಧರ್ಮದ ಪುನರುಜ್ಜೀವನವೂ, ಆರ್ಯ ಸಂಸ್ಕೃತಿಯ ಪುನರುತ್ಥಾನವೂ ತನ್ನ ಜೀವನದ ಧ್ಯೇಯಗಳಾಗಬೇಕೆಂದು ನಿರ್ಧರಿಸಿದನು. ಧರ್ಮವು ಭಾರತೀಯರ ರಕ್ತನಾಳಗಳಲ್ಲಿ ಪ್ರವಹಿಸುವುದನ್ನು ಕಂಡು ತನ್ನಲ್ಲಿ ತಾನೇ "ಭಾರತ ವರ್ಷವು ಪುನರುಜ್ಜೀವಿತವಾಗುವುದು. ಸನಾತನ ಆರ್ಯಸಂಸ್ಕೃತಿ ನೂತನ ಸಂಸ್ಕಾರಗಳನ್ನು ಪಡೆದು ಮರಳಿ ತಲೆಯೆತ್ತುವುದು! ಹೇ ಜನನಿ, ನಿನಗೆ ಜಯವಾಗಲಿ" ಎಂದು ಕೊಂಡನು.

ಇದ್ದಕ್ಕಿದ್ದ ಹಾಗೆ ಆ ತೇಜಸ್ವಿ ಎದ್ದು ನಿಂತನು, ಉನ್ನತ ಪರ್ವತದ ಮೇಲೆ ಉನ್ನತತರ ಶಿಖರವು ಎದ್ದು ನಿಲ್ಲುವಂತೆ! ಆತನ ಹೃದಯವನ್ನು ತುಂಬಿ ತುಳುಕುತ್ತಿದ್ದ ಭಾವಗಳು ಹೊರಸೂಸತೊಡಗಿದವು. ದಿಗ್ದಿಗಂತಗಳನ್ನು ನೋಡಿದನು. ನೀಲಾಕಾಶವನ್ನು ನೋಡಿದನು. ನೀಲಶರಧಿಯನ್ನು ನೋಡಿದನು. ಎದುರಿಗಿದ್ದ ಭಾರತವರ್ಷವನ್ನು ನೋಡಿದನು. ಸುಮಧುರ ಗಂಭೀರ ವಾಣಿಯಿಂದ ಸಮಸ್ತ ವಿಶ್ವವನ್ನೇ ಸಂಬೋಧಿಸಿದನು.

"ಹೇ ಜನನಿ, ಆರ್ಯಮಾತೆ, ಪುಣ್ಯಭೂಮಿ. ನಿನ್ನ ಸುಂದರವದನವನ್ನು ಕುರೂಪಗೈದ ಮಕ್ಕಳ ಪಾಪವನ್ನು ಮನ್ನಿಸು. ನಿನ್ನವರು ತಪ್ಪಿದರು. ಅಖಂಡಳಾದ ನಿನ್ನಲ್ಲಿ ಭೇದಗಳನ್ನು ಕಲ್ಪಿಸಿ ಕೆಟ್ಟರು. ಧರ್ಮವನ್ನು ಮರೆತು ಬಿದ್ದರು. ಗೊಡ್ಡು ಪದ್ಧತಿಗಳನ್ನೇ ಧರ್ಮವೆಂದು ಭ್ರಮಿಸಿ, ಅದರಂತೆ ಆಚರಿಸಿ, ನಿನ್ನನ್ನು ಪರಕೀಯರಿಗೆ ಮಾರಿದರು. ದಾಸಿಯನ್ನಾಗಿ ಮಾಡಿದರು. ಅನಾಥೆಯನ್ನಾಗಿ ಮಾಡಿದರು. ಅಮ್ಮಾ, ತ್ರಿಲೋಕಸುಂದರಿ, ನಿನ್ನನ್ನು ಕುರೂಪಿಯನ್ನಾಗಿ ಮಾಡಿದರು. ಮಕ್ಕಳ ಪಾಪವನ್ನು ಮನ್ನಿಸು! ಮನ್ನಿಸು! ಬಗೆಗೆಟ್ಟ ಅವರಿಗೆ ಸನ್ಮತಿಯನ್ನು ನೀಡು! ಎಲ್ಲಿ ನಿನ್ನ ಐಶ್ವರ್ಯ? ಎಲ್ಲಿ ನಿನ್ನ ವಿದ್ವತ್ತು? ಎಲ್ಲಿ ನಿನ್ನ ಆತ್ಮಧರ್ಮ? ಪುರೋಹಿತ ದೌರಾತ್ಮ್ಯದಿಂದ, ಜಾತಿಭೇದಗಳ ಕ್ರೌರ್ಯದಿಂದ, ಮೇಲೆದ್ದವರ ಅಹಂಕಾರದಿಂದ, ಕೆಳಗೆ ಬಿದ್ದವರ ಹೇಡಿತನದಿಂದ, ಪಂಡಿತರ ಸ್ವಾರ್ಥಬುದ್ಧಿಯಿಂದ, ಪಾಮರರ ಮೂರ್ಖತನದಿಂದ, ನಿನ್ನ ಸುಂದರ ಸುರಮಂದಿರವು ರುದ್ರಶ್ಮಶಾನವಾಯಿತೆ! ಎಲೈ ಕಂಬನಿಗಳೆ, ಮೂಕಾಶ್ರುಬಿಂದುಗಳೆ, ಮಾತೆಯ ಪಾದಗಳನ್ನು ತೊಳೆಯುವಿರಾ? ಮಕ್ಕಳ ಪಾಪಗಳನ್ನು ತೊಡೆಯುವಿರಾ? ಶ್ಮಶಾನ ಸದೃಶವಾದ ಭರತಖಂಡವನ್ನು ಮತ್ತೊಮ್ಮೆ ಸುರಮಂದಿರವನ್ನಾಗಿ ಮಾಡುವಿರಾ?

"ಇರಲಿ ನಾವೇನು ಮಾಡಿದ್ದೇವೆ? ಸಂನ್ಯಾಸಿಗಳು ನಾವೇನು ಮಾಡಿದ್ದೇವೆ? ಭರತ ಮಾತೆಯ ತೊಡೆಯ ಮೇಲೆ ಚಕ್ಕಂದದಿಂದ ನಲಿದಾಡುವ ಸಂನ್ಯಾಸಿಗಳು, ನಾವೇನು ಮಾಡಿದ್ದೇವೆ! ಕಾಷಾಯವಸ್ತ್ರಧಾರಿಗಳಾಗಿ, ಮೂರ್ಖಜನರ ತಾಮಸಾತಿಥ್ಯದಿಂದ ಉದರ

ಪೋಷಣೆ ಮಾಡಿಕೊಳ್ಳುತ್ತ, ಅಲೆಯುತ್ತಿರುವ ಲಕ್ಷಾಂತರ ಸಂನ್ಯಾಸಿಗಳು, ನಾವೇನು ಮಾಡಿದ್ದೇವೆ? ತತ್ತ್ವಬೋಧನೆ? ತತ್ತ್ವ ಬೋಧನೆ! ಛೀ ಛೀ ಬೈರಾಗಿಗಳೆ. ನಿಮ್ಮ ತತ್ತ್ವಬೋಧನೆಗೆ ಬೆಂಕಿಯಿಡಲಿ! ಹುಚ್ಚು! ಹುಚ್ಚು! ನಿಮಗೆಲ್ಲ ಹುಚ್ಚು! ಹೊಟ್ಟೆಗಿಲ್ಲದೆ ಕಂಗೆಟ್ಟಿರುವ ದೇಶದಲ್ಲಿ ನಿಮ್ಮ ತತ್ತ್ವಬೋಧನೆ! ಅಯ್ಯೋ ಕಪಟವೃತ್ತಿಯೆ! ನಾವೇನು ಮಾಡುತ್ತಿದ್ದೇವೆ? ಅನ್ನವಿಲ್ಲದ ವಸ್ತ್ರವಿಲ್ಲದ ಕುರಿಗಳಿಗೆ ವೇದಾಂತಬೋಧನೆ ಮಾಡುತ್ತಿದ್ದೇವೆ! ಆಹಾ! ವೇದಮಾತೆ, ನಿನ್ನ ಸಂನ್ಯಾಸಿಗಳ ಲೀಲೆಯನ್ನು ನೋಡು! ನೋಡಿ ನಲಿ! ನಲಿ! ಕಾಲಡಿಯ ಭೂಮಿಯನ್ನು ಹಿಡಿಯಲಾರದ ಅಶಕ್ತರಿಗೆ ಅನಂತಾಕಾಶವನ್ನು ತೋರಿಸುತ್ತಿದ್ದೇವೆ! ಸೋದರರು, ಸಂನ್ಯಾಸಿಗಳೆ, ನಮಗಿಂದು ಬರಿಯ ತತ್ತ್ವದಿಂದ ಮುಕ್ತಿ ದೊರಕದು. ಅನ್ನಬೇಕು ವಸ್ತ್ರಬೇಕು, ಜನಬೇಕು, ಧನಬೇಕು!

"ನಾನೊಬ್ಬ ಬಡಸಾಧು. ನಾನೇನು ಮಾಡಬಲ್ಲೆ? ನನಗೆ ಧನವೆಲ್ಲಿಯ ದೊರಕುವುದು?"

ಸಂನ್ಯಾಸಿ ನಿಷ್ಪಂದ ನೀರವನಾಗಿ ನಿಂತು ಸಾಗರವನ್ನು ದುರದುರನೆ ನೋಡಿದನು, ಪಶ್ಚಿಮ ದಿಕ್ಕಿನ ಕಡೆಗೆ ತಿರುಗಿ ಬಹುಕಾಲ ನಿಟ್ಟಿಸಿದನು. ನೈರಾಶ್ಯದ ಚಿಹ್ನೆಗಳು ಕ್ರಮಕ್ರಮವಾಗಿ ಮುಖದಿಂದ ಅಳಿಸಿಹೋದುವು. ಥಕ್ಕನೆ ಯಾರನ್ನೋ ಕಂಡವನಂತೆ ಬೆಚ್ಚಿಬಿದ್ದು ಕೈ ಮುಗಿದುಕೊಂಡು ಹೇಳತೊಡಗಿದನು:

"ಹೇ ಗುರುದೇವ. ಹೇ ಗುರುದೇವ, ನಿನ್ನ ಕೃಪೆಯೊಂದಿರಲಿ; ನನಗೆಲ್ಲ ಸಾಧ್ಯವಾಗುವುದು. ಸಮಸ್ತ ಭರತಖಂಡವನ್ನು ಸಂಚರಿಸಿ ಅದರ ಹೃದಯವನ್ನು ಅರಿತಿದ್ದೇನೆ. ನೂತನ ಚೇತನಶಕ್ತಿ ಅಧರ ಅಂತರಾಳದಲ್ಲಿ ಅಡಗಿದೆ. ಅದನ್ನು ಎಚ್ಚರಿಸಲು ಪ್ರಯತ್ನಪಡುತ್ತೇನೆ. ಸೊಂಟ ಕಟ್ಟಿ ನಿಲ್ಲುತ್ತೇನೆ. ಅರಸರ ಅರಮನೆಗಳಲ್ಲಿ ಸಜ್ಜೆಗಳ ಮೇಲೆ ಮಲಗಿದ್ದೇನೆ. ತಿರುಕರ ಗುಡಿಸಲುಗಳಲ್ಲಿ ನೆಲದ ಮೇಲೆ ಮಲಗಿದ್ದೇನೆ. ಭರತಮಾತೆಯನ್ನು ಆಪಾದಮಸ್ತಕವಾಗಿ ಅರಿತಿದ್ದೇನೆ. ಈ ಮಹಾಸಮುದ್ರವನ್ನು ದಾಟುವೆನು. ಪಶ್ಚಿಮದೇಶಗಳಿಗೆ ಹೋಗುವೆನು. ಐಶ್ವರ್ಯದಲ್ಲಿ ಓಲಾಡುತ್ತಿರುವ ಪಶ್ಚಿಮದೇಶಗಳಿಗೆ ಹೋಗುವೆನು. ನನ್ನ ಮೇಧಾಶಕ್ತಿ ಯಿಂದ ಧನಾರ್ಜನೆ ಮಾಡುವೆನು: ಮಾತೆಯ ಉದ್ಧಾರಕ್ಕೆ ಯತ್ನ ಮಾಡುವೆನು. ಹೇ ಜನನಿ, ಸಂನ್ಯಾಸಧರ್ಮಕ್ಕೆ ವಿರುದ್ಧವಾಗಿ ಧನಸಂಪಾದನೆ ಮಾಡುವೆನು. ದರಿದ್ರನಾರಾಯಣನ ಸೇವೆ ಮಾಡುವೆನು. ಹೇ ಗುರುದೇವ. ಹೇ ಗುರುದೇವ, ನಿನ್ನ ಕೃಪೆಯನ್ನು ನೀಡು. ನನಗೆ ನೆರವಾಗು! ನೆರವಾಗು!"

ಇಂತೆಂದು ದೇಶಭಕ್ತ ವೈರಾಗಿ ಮೌನವಾಗಿ ಗಗನದೆಡೆಗೆ ಶೂನ್ಯದೃಷ್ಟಿಯನ್ನಟ್ಟಿದನು. ಮಾಗಿಯ ನೇಸರು ಮೇಲೇರಿ ಸೌಮ್ಯಾತಪವು ವೈರಾಗಿಯನ್ನು ಮೀಯಿಸಿತು. ಆತನ ಕಾವಿಯ ತಲೆಯುಡೆಯನ್ನು ಕಡಲೆಲರು ಒಯ್ಯನೆ ಓಸರಿಸಿ ಕೆಳಗೆಸೆಯಿತು. ಕಡಲ್ವಕ್ಕಿಗಳು

ಸುತ್ತಲೂ ಹಾರಾಡಿದುವು. ಶರಧಿಯ ತರಂಗಗಳು ಸಂನ್ಯಾಸಿಯನ್ನು ಸಂತವಿಡುವಂತೆ ನಾಲ್ಕು ದಿಕ್ಕುಗಳಿಂದಲೂ ಮುತ್ತಿಬಂದು ಬಂಡೆಗೆ ಬಡಿಯುತ್ತಿದ್ದುವು. ಉದ್ವೇಗವು ಕಡಿಮೆಯಾಗಿ ರಾಜಯೋಗಿ ದೃಢಚಿತ್ತಾನ್ವಿತನಾದನು. ಮುಖದಲ್ಲಿ ದಿಟ್ಟತನದ ರೇಖೆಗಳು ತೋರಿದುವು. ಮರಳಿ ಆತನ ವಾಣಿ ದೂರದ ಗುಡುಗಿನಂತೆ ಗಂಭೀರವಾಗಿ ಮೊಳಗಿತು.

"ನನ್ನ ಸಂನ್ಯಾಸ ! ನನ್ನ ಆತ್ಮಕಲ್ಯಾಣ ! ನನ್ನ ಮುಕ್ತಿ ! ಛೀ ಛೀ ಸ್ವಾರ್ಥತೆಯೆ ದೂರ ಸರಿ ! ಭರತಖಂಡದ ಉದ್ಧಾರಕ್ಕಾಗಿ ಕೋಟಿ ಜನ್ಮಗಳನ್ನೆತ್ತಿ ಬರುವೆನು. ದರಿದ್ರ ನಾರಾಯಣರ ಸೇವೆಗಾಗಿ ನನ್ನ ಸ್ವಂತ ಆತ್ಮಮುಕ್ತಿಯನ್ನು ಈಡಾಡುವೆನು ! ಜಗತ್ತಿನಲ್ಲಿ ಕ್ರಿಮಿಯೊಂದು ಕಷ್ಟದಲ್ಲಿರುವವರೆಗೆ ನಾನು ಸುಖವನ್ನು ಬಯಸೆನು. ಕೀಟವೊಂದು ಬಂಧನದಲ್ಲಿರುವವರೆಗೆ ನನಗೆ ಮುಕ್ತಿ ಬೇಡ ! ಮಾತೃದೇವೋ ಭವ ! ಪಿತೃದೇವೋ ಭವ ! ಅತಿಥಿದೇವೋ ಭವ ! ಅಲ್ಲ ಅಲ್ಲ ದರಿದ್ರದೇವೋ ಭವ ! ಮೂರ್ಖದೇವೋ ಭವ ! ಪಾಪಿದೇವೋ ಭವ ! ಮೂರ್ಖರೆನ್ನ ದೇವರು ! ದರಿದ್ರರೆನ್ನ ದೇವರು ! ಪಾಪಿಗಳೆನ್ನ ದೇವರು ! ನಾನವರ ಸೇವೆಗಾಗಿ ನನ್ನಾತ್ಮವನ್ನು ಧಾರೆಯೆರೆಯುವೆನು ! ಗುರುದೇವ, ಗುರುದೇವ ! "

ಸಂನ್ಯಾಸಿ ಸೆರೆಮನೆಯಿಂದ ಹೊರಗೆ ಬಂದವನಂತೆ ಒಂದೆರಡು ನಿಟ್ಟುಸಿರೆಳೆದು ಹಿಂದಕ್ಕೂ ಮುಂದಕ್ಕೂ ಅಡ್ಡಾಡತೊಡಗಿದನು. ನಯನಗಳು ನವಜ್ಯೋತಿಯನ್ನು ಚೆಲ್ಲಿದುವು. ಘನ ವ್ಯೋಮವನ್ನೂ, ಸಮುದ್ರವನ್ನೂ, ಭಾರತವರ್ಷವನ್ನೂ ದೃಷ್ಟಿಸಿ ಪಶ್ಚಿಮದ ಕಡೆಗೆ ತಿರುಗಿ ನಿಂತನು. ತುಸುಹೊತ್ತು ದುರದುರನೆ ನಿಟ್ಟಿಸಿ ಹೇಳತೊಡಗಿದನು.

"ನನಗಿಂದು ತಿಳಿಯಿತು ನನ್ನ ಜನ್ಮೋದ್ದೇಶ ! ಪಶ್ಚಿಮ ದೇಶಗಳಿಗೆ ಹೋಗುವೆನು. ಅಲ್ಲಿ ಭೋಗವಾದಿಗಳ ಹೃದಯದಲ್ಲಿ ಸನಾತನ ವೇದಧರ್ಮಜ್ಯೋತಿಯನ್ನು ಬೀರುವೆನು. ಅವರು ಭಾರತಾಂಬೆಗೆ ತಲೆಬಾಗಿ ಆಕೆಗೆ ನೆರವಾಗುವಂತೆ ಮಾಡುವೆನು. ಆಕೆಯ ದುರ್ಗತಿಯನ್ನು ಪರಿಹರಿಸಲೆಳಸುವೆನು. ಭಾವಸಮಾಧಿ ಅಲ್ಲಿರಲಿ ! ನಿರ್ವಿಕಲ್ಪಸಮಾಧಿ ಸದ್ಯಕ್ಕೆ ಒತ್ತಟ್ಟಿಗಿರಲಿ ! ನನ್ನಾತ್ಮಮುಕ್ತಿ ಸದ್ಯಕ್ಕೆ ಮುಕ್ತಾಯವಾಗಿರಲಿ ! ನಿಜವಾದ ಧರ್ಮವನ್ನು ಜಗತ್ತಿಗೆ ಬೋಧಿಸುವೆನು, ಜಗತ್ತನ್ನು ಎಚ್ಚರಿಸುವೆನು, ಭರತಖಂಡವನ್ನು ಮೇಲೆತ್ತುವೆನು. ಹೇ ಜನನಿ, ಪುಣ್ಯಭೂಮಿ, ಆರ್ಯಮಾತೆ, ವೇದಪೂಜಿತೆ, ನನ್ನನ್ನು ಆಶೀರ್ವದಿಸು ! ಹೇ ! ಗುರುದೇವ, ಕೃಪಾಕರ, ನನಗೆ ಶಕ್ತಿಯನ್ನು ನೀಡು ! "

ಹೀಗೆಂದ ಸಂನ್ಯಾಸಿ ಕಲ್ಲಿನ ಮೇಲೆ ಕಲ್ಲಾಗಿ ನಿಂತುಬಿಟ್ಟನು. ಆತನ ಸುಂದರ ಗಂಭೀರ ಮೂರ್ತಿಯನ್ನು ಕಂಡು ಸಮುದ್ರರಾಜನು ನಮಸ್ಕರಿಸಿದನು. ಬಾನ್ದೇವಿ ಕೈಮುಗಿದಳು. ಭಾರತಾಂಬೆ ಕಂಬನಿತುಂಬಿ ಕಂಪಿತಹಸ್ತದಿಂದ ಹರಸಿದಳು. ಶ್ರೀ ಗುರುದೇವನು ಮಂದಸ್ಮಿತನಾಗಿ ಪ್ಪ ಶಕ್ತಿವರ್ಧಕ ಕೃಪಾಕಟಾಕ್ಷವನ್ನು ಬೀರಿದನು.

ಸಂನ್ಯಾಸಿ ಅಲುಗಾಡದೆ ನಿಂತನು. ಆತನ ಆತ್ಮವು ವಿಶಾಲವಿಶ್ವದಲ್ಲಿ ಸಂಚರಿಸುತ್ತಿತ್ತು. ಸಮುದ್ರಪಕ್ಷಿಗಳು ಒಂದರ ಮುಖವನ್ನು ಒಂದು ನೋಡಿ ವಿಸ್ಮಯದಿಂದ "ಯಾರಿವನು?" ಎಂದು ಹಾಡಿದವು!

ಯಾರಿವನು?

## ಟಿಪ್ಪಣಿ

ಕೃತಿ ಮತ್ತು ಕರ್ತೃ:

ಯಾರಿವನು? ಎಂಬ ಇಲ್ಲಿನ ಪಠ್ಯಭಾಗವನ್ನು ಆಧುನಿಕ ಕನ್ನಡದ ಅದ್ವಿತೀಯ ಕವಿ ಕುವೆಂಪುರವರ 'ಸ್ವಾಮಿ ವಿವೇಕಾನಂದ' ಗ್ರಂಥದಿಂದ ಆಯ್ದುಕೊಳ್ಳಲಾಗಿದೆ. ಇದು ಆ ಗ್ರಂಥದ ಮೊದಲನೆಯ ಅಧ್ಯಾಯ. ಸ್ವಾಮಿ ವಿವೇಕಾನಂದರು ಪಾಶ್ಚಾತ್ಯ ಜಗತ್ತಿಗೆ ಯಾತ್ರೆ ಹೊರಡುವ ಮುನ್ನ ಆಸೇತುಹಿಮಾಚಲಪರ್ಯಂತ ಇಡೀ ಭಾರತವನ್ನೊಮ್ಮೆ ಸುತ್ತಿ ಬಂದರು. ಹಾಗೆ ಸುತ್ತುವಾಗ ಭಾರತದ ದಕ್ಷಿಣದ ಕೊನೆಯಾದ ರಾಮೇಶ್ವರಕ್ಕೂ ಅವರು ಸಂದರ್ಶನ ವಿತ್ತರು. ಪೂರ್ವ, ಪಶ್ಚಿಮ, ದಕ್ಷಿಣ—ಮೂರು ಸಮುದ್ರಗಳೂ ಸೇರುವ ಆ ದಿವ್ಯಭವ್ಯ ಸ್ಥಾನದಲ್ಲಿ ಅವರ ಭಾವಜೀವನದ ಒಂದು ದೃಶ್ಯವನ್ನು ಕವಿ ಇಲ್ಲಿ ಕಂಡರಿಸಿದ್ದಾರೆ.

ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ ಎಂಬುದು ಕುವೆಂಪು ಎಂಬುದರ ವಿಸ್ತೃತರೂಪ. ಶಿವಮೊಗ್ಗ ಜಿಲ್ಲೆಯ ಕುಪ್ಪಳ್ಳಿ ಎಂಬುದು ಕವಿಯ ಹುಟ್ಟಿದೂರು. ಪ್ರಕೃತಿ ಸೌಂದರ್ಯದ ಬೀಡಾದ ಮಲೆನಾಡಿನ ಗರ್ಭದಿಂದ ಇಳಿದು ಬಂದಿರುವ ಕುವೆಂಪು ಪ್ರಕೃತಿವರ್ಣನೆಯಲ್ಲಿ ಅದ್ವಿತೀಯವಾದ ಸಿದ್ಧಿಯನ್ನು ಪಡೆದಿದ್ದಾರೆ. ಇವರ ಕಾವ್ಯಸೃಷ್ಟಿಯಿಂದ ಆಧುನಿಕ ಕನ್ನಡಸಾಹಿತ್ಯ ಶ್ರೀಮಂತವಾಗಿದೆ. ಮುಗ್ಧರಾದ ಎಳೆಯ ಮಕ್ಕಳನ್ನು ವಿನೋದಗೊಳಿಸಬಲ್ಲ 'ಬೊಮ್ಮನ ಹಳ್ಳಿಯ ಕಿಂದರಿಜೋಗಿ'ಯಿಂದ ಹಿಡಿದು ಜ್ಞಾನಿಗಳೆನಿಸಿಕೊಂಡ ಪರಿಣತ ವಯಸ್ಕರನ್ನೂ ಮೆಚ್ಚಿಸಬಲ್ಲ 'ಶ್ರೀ ರಾಮಾಯಣದರ್ಶನಂ' ವರೆಗೆ ಅವರ ಕಾವ್ಯದ ಹರವು ಪ್ರಸರಿಸಿದೆ. ಕಥೆ, ಕಾದಂಬರಿ, ಭಾವಗೀತೆ, ಜೀವನಚರಿತ್ರೆ, ನಾಟಕ, ವಿಮರ್ಶೆ, ಮಹಾಕಾವ್ಯ—ಇತ್ಯಾದಿ ಸಾಹಿತ್ಯದ ಯಾವ ಮುಖವೂ ಅವರ ಲೇಖನಿಯಿಂದ ವಂಚಿತವಾಗಿಲ್ಲ. ಬಾಲ್ಯದಿಂದಲೂ ಶ್ರೀ ರಾಮಕೃಷ್ಣಾಶ್ರಮದ ನಿಕಟ ಬಾಂಧವ್ಯದ ಫಲವಾಗಿ ಪ್ರಕೃತಿದತ್ತವಾದ ಇವರ ಕವಿತಾಶಕ್ತಿಯೊಡನೆ ಭಗವದ್ಭಕ್ತಿಯೂ ಸಮರಸವಾಗಿ ಬೆರೆತು ಇವರೊಬ್ಬ ಋಷಿಕವಿಗಳಾಗಿದ್ದಾರೆ. ಇವರ ಕೃತಿಗಳಲ್ಲಿ ಶಿಖರಪ್ರಾಯವಾಗಿರುವ 'ಶ್ರೀ ರಾಮಾಯಣದರ್ಶನಂ' ಕಾವ್ಯಕ್ಕೆ ಕೇಂದ್ರಸಾಹಿತ್ಯ ಅಕೆಡಮಿಯ ಬಹುಮಾನ ಬಂದಿದೆ. ರಾಷ್ಟ್ರಾಧ್ಯಕ್ಷರಿಂದ 'ಪದ್ಮಭೂಷಣ' ಎಂಬ ಪ್ರಶಸ್ತಿ ಬಂದಿದೆ. ಭರತಖಂಡದ ಎಲ್ಲ ಭಾಷೆಗಳಲ್ಲಿ ಹುಟ್ಟಿರುವ ಎಲ್ಲ ಕಾವ್ಯಗಳಲ್ಲಿಯೂ ಇದು ಅತ್ಯಂತ ಶ್ರೇಷ್ಠವಾದುದೆಂದು ಪರಿಗಣಿತವಾಗಿ ಇದಕ್ಕೆ ಜ್ಞಾನಪೀಠಪ್ರಶಸ್ತಿ ಸಂದಾಯವಾಗಿದೆ. ಮೈಸೂರು ಸರ್ಕಾರ ಇವರನ್ನು "ರಾಷ್ಟ್ರಕವಿ" ಎಂದು ಸಂಭಾವಿಸಿದೆ.

ಶ್ರೀಮಾನ್ ಕೆ.ವಿ. ಪುಟ್ಟಪ್ಪನವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಮಹಾರಾಜ ಕಾಲೇಜಿನ ಪ್ರಧಾನಾಧಿಕಾರಿಗಳಾಗಿ, ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಈಗ ವಿಶ್ರಾಂತರಾಗಿದ್ದಾರೆ. ಇವರ ಕನ್ನಡ ಪ್ರೇಮ ಲೋಕೋತ್ತರವಾದುದು. ಇವರು ಉಪಕುಲಪತಿಗಳಾಗಿದ್ದಾಗ ಮೈಸೂರು ವಿಶ್ವವಿದ್ಯಾನಿಲಯದ ಶಿಕ್ಷಣದಲ್ಲಿ ಕನ್ನಡ ಮಾಧ್ಯಮವನ್ನು ಬಳಕೆಗೆ ತಂದರು. ಇವರ ಸಾಹಿತ್ಯಸೇವೆಯನ್ನು ಮೆಚ್ಚಿ ಮೈಸೂರು, ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳು ಇವರಿಗೆ 'ಡಾಕ್ಟರೇಟ್' ಪ್ರಶಸ್ತಿಯನ್ನು ನೀಡಿವೆ.

'ಕಾನೂರು ಸುಬ್ಬಮ್ಮ ಹೆಗ್ಗಡತಿ' 'ಮಲೆಗಳಲ್ಲಿ ಮದುಮಗಳು' 'ಅನಿಕೇತನ' 'ಪಾಂಚಜನ್ಯ' 'ದ್ರೌಪದಿಯ ಶ್ರೀಮುಡಿ' 'ತಪೋನಂದನ' 'ಕೋಗಿಲೆ' 'ಜನಪ್ರಿಯ ವಾಲ್ಮೀಕಿ ರಾಮಾಯಣ' 'ಮೂರು ನಾಟಕಗಳು' ಇವು ಅವರ ಕೆಲವು ಗ್ರಂಥಗಳು.

ಕಠಿಣಪದಗಳ ಅರ್ಥ :

ಸಂವತ್ಸರ—ವರ್ಷ. ಮಾಗಿಯ ಕಾಲ —ಚಳಿಗಾಲ. ಉಷಃಕಾಲ—ಬೆಳಗಿನ ಜಾವ; ಪ್ರಾತಃ ಕಾಲ. ಮೂಡ—ಪೂರ್ವ. ದೆಸೆ—ದಿಕ್ಕು. ದರೋನ್ಮೀಲಿತ—ದರಾ + ಉನ್ಮೀಲಿತ (ಗು. ಸಂ.) ಅರೆ ತೆರೆದ. ನಯನ—ಕಣ್ಣು. ಸವಿಗೊರಲು—ಸವಿಯಾದ + ಕೊರಲು (ಕ.ಸ.) ಇಂಪಾದ ಕಂಠ. ಇಂಚರ—ಇನಿದು + ಸರ (ಕ.ಸ.)ಮಧುರವಾದ ಧ್ವನಿ. ತರಂಗ—ಅಲೆ. ದೇವಾಲಯ—ದೇವ + ಆಲಯ(ಸ. ದೀ. ಸಂ.) ದೇವಸ್ಥಾನ. ನಿರುದ್ವಿಗ್ನ—ಅಶಾಂತವಲ್ಲದ ; ಶಾಂತವಾದ. ಕಾರ್ಯಭಾರ—ಕೆಲಸಗಳ ಹೊರೆ ; ಕೆಲಸಗಳ ಜವಾಬ್ದಾರಿ. ಚಕಿತ—ಬೆರಗಾದ, ನಿಟ್ಟುಬಿದ್ದ. ಹೆಬ್ಬಾಗಿಲು—ಹಿರಿದು + ಬಾಗಿಲು (ಕ. ಸ.) ಮಹಾದ್ವಾರ. ಗತಿ—ಗಮನ ; ನಡಿಗೆ. ನಿರೀಕ್ಷಿಸು—ಗಮನಿಸು ; ಸೂಕ್ಷ್ಮವಾಗಿ ನೋಡು. ಗರ್ಭಗುಡಿ—(ಗುಡಿಯ + ಗರ್ಭ)—ದೇವರ ಪ್ರತಿಮೆಯನ್ನು ಸ್ಥಾಪಿಸಿರುವ ಸ್ಥಳ. ಅವಲೋಕಿಸು—ನೋಡು. ವಿಸ್ಮಯ—ಆಶ್ಚರ್ಯ. ಅಪಾರ್ಥಿವ—ಮಾನವಾತೀತ. ಮೂವತ್ತು ಸಂವತ್ಸರಗಳ ವರ್ಷವಸಂತಗಳಿಂದ ತಾಡಿತ—ಮೂವತ್ತು ವಸಂತಗಳನ್ನು ಕಳೆದ: ಮೂವತ್ತು ವರ್ಷಗಳು ತುಂಬಿದ. ತಾಡಿತ—ಬಡಿತ. ದೇಹಿ—ದೇಹವನ್ನು ಉಳ್ಳವನು ; ಮನುಷ್ಯ. ಸುಪುಷ್ಟ—ಚೆನ್ನಾಗಿ ಬೆಳೆದ : ತುಂಬಿಕೊಂಡ. ಮೂಡು—ಹುಟ್ಟು. ಸ್ಥೂಲ—ದಪ್ಪ . ಆಲಸ್ಯ—ಬೇಸರ. ತಾಮಸ—ಕೋಪದಿಂದ ಕೂಡಿದ ಗುಣ. ಲಲಾಟ—ಹಣೆ. ದಿಟ್ಟ—ಎದೆಗಾರಿಕೆ ; ಧೀರತನ. ದಾರ್ಢ್ಯ—ಬಲವಾದ. ಮೊರಡು—ಏರು ತಗ್ಗುಗಳಿಂದ ಕೂಡಿದ : ಒರಟಾದ. ನಿರಂತರಾನ್ವೇಷಕ—ನಿರಂತರ + ಅನ್ವೇಷಕ (ಸ. ದೀ. ಸಂ.) ಯಾವಾಗಲೂ ಪರಿಶೀಲಿಸುವವ.

ತೇಜೋನ್ವಿತ—ತೇಜಸ್ಸಿನಿಂದ ಕೂಡಿದ, ಉದ್ದೀಪನ—ಕೆರಳಿಸುವುದು. ಭೀಷಣ—ಭಯಂಕರ. ವ್ಯಂಗ್ಯ—ವಿಡಂಬನ, ಪರಿಹಾಸ. ಸಮ್ಮಿಳಿತ—ಒಟ್ಟಾಗಿ ಸೇರಿದ. ವ್ಯಾಪಿ —

ಆವರಿಸಿದುದು. ಅಂತರಂಗ—ಮನಸ್ಸು. ಸಮುಜ್ವಲ—ಪ್ರಕಾಶವಾದ. ಕಾಷಾಯ—ಕಾವಿ. ಬ್ರಹ್ಮವನವಿಹಾರಿ—ಬ್ರಹ್ಮವೆಂಬ ವನದಲ್ಲಿ ಸಂಚರಿಸುವವ, ಬ್ರಹ್ಮಜ್ಞಾನವನ್ನು ವಿಚಾರಮಾಡುವವನು. ಓಜಸ್ಸು—ಬಲ ಮತ್ತು ಪ್ರಕಾಶ. ಛದ್ಮವೇಷ—ಮರೆಸಿಕೊಂಡ ವೇಷ. ಕೇಸರಿ—ಸಿಂಹ. ನಿಟ್ಟುಸಿರು—ನಿಡಿದಾದ+ಉಸಿರು (ಕ.ಸ.) ಈಕ್ಷಿಸಿ—ನೋಡಿ. ಮಹೋದ್ವೇಗ—ಮಹಾ+ಉದ್ವೇಗ—ಹೆಚ್ಚು ದುಃಖ. ಲಹರಿ—ತರಂಗ ಆವೇಶ. ತಾಂಡವ—ನರ್ತನ. ನಿಟ್ಟಿಸು—ದೃಷ್ಟಿಸಿ ನೋಡು. ಹಿಮಾವರಣ—ಹಿಮದಿಂದ ಮುಚ್ಚಿದ. ವೇದಭೂಮಿ—ಭಾರತದೇಶ. ಪ್ರಸಾರ—ಹರಡು. ಅನಂತ—ಕೊನೆಯಿಲ್ಲದ. ಮೇರೆವರಿಯದ—ಎಲ್ಲೆ ಇಲ್ಲದ. ಅಲ್ಲೋಲಕಲ್ಲೋಲ—ತಳಮಳ. ರುದ್ರರಮಣೀಯ—ಘೋರವೂ ಮನೋಹರವೂ ಆದ. ವಿನ್ಯಾಸ—ರಚನೆ. ವಾರಿಧಿ—ಸಮುದ್ರ. ಬಿತ್ತರ—ವಿಸ್ತಾರ (ತ್ಭ). ಏಕಾಭಿನ್ನ—ಬೇರೆಯಲ್ಲದ ; ಒಂದೇ ಆದ. ದಿಗಂತ—ದಿಕ್+ಅಂತ (ಆ.ಸಂ.) ದಿಕ್ಕಿನ ಕೊನೆ. ಅರುಣೋದಯ—ಅರುಣ+ಉದಯ (ಗು.ಸಂ.) ಬೆಳಗಿನ ಜಾವ. ಕಡಲು—ಸಮುದ್ರ. ಒಡಲು—ಶರೀರ. ಮುಂಬೆಳಗು—ಬೆಳಕಿನ+ಮುಂದು (ಅಂ.ಸ.) ಪ್ರಭಾತ—ಪ್ರಾತಃಕಾಲ. ಸಮೀರಣ—ವಾಯು. ತೀಡು—ಬೀಸು. ಚಿರಮರ್ಮರನಾದ—ಸದಾ ಕೇಳಿಬರುತ್ತಿರುವ ಒಂದು ವಿಧವಾದ ಶಬ್ದ. ನೆಲವಕ್ಕಿ—ನೆಲದ+ಪಕ್ಕಿ (ಷ.ತ.ಸ.) ನೆಲದ ಮೇಲೆ ಓಡಾಡುವ ಹಕ್ಕಿ—ಪಕ್ಷಿ (ತ್ಭ). ಆವೇಶ—ಮೈತುಂಬು. ಅನತಿದೂರ—ಸಮೀಪ. ಮಕರ—ಮೀನು. ನಕ್ರ—ಮೊಸಳೆ. ಅಂಬುಧಿ—ಸಮುದ್ರ. ಆರೋಹಣ—ಹತ್ತುವುದು. ಅರೆ—ಕಲ್ಲುಬಂಡೆ. ಎವೆಯಿಕ್ಕದೆ—ಕಣ್ಣುಮುಚ್ಚದೆ. ಕೋಟ್ಯನುಕೋಟಿ—ಕೋಟಿ+ಅನುಕೋಟಿ (ಯ.ಸಂ.) ಲೆಕ್ಕವಿಲ್ಲದಷ್ಟು. ಕಿಶೋರ—ಬಾಲ ; ಎಳೆಯ. ಕಮಲಮಿತ್ರ—ಸೂರ್ಯ. ಪೆರ್ದೆರೆ—ಪಿರಿದು+ತೆರೆ (ಕ.ಸ.) ದೊಡ್ಡ ಅಲೆ. ನಾಲ್ದೆಸೆ—ನಾಲ್ಕು+ದೆಸೆ (ದ್ವಿ.ಸ.) ನಾಲ್ಕು ದಿಕ್ಕುಗಳು. ನಿಬಿಡ—ತುಂಬಿದ. ದ್ರುಮ—ಮರ. ಶ್ರೇಣಿ—ಸಾಲು. ಹರಿತ—ಹಸುರಾದ. ದರಲೋಹಿತ—ಅರೆಕೆಂಪಾದ. ಆತ್ಮೈಶ್ವರ್ಯ—ಆತ್ಮ+ಐಶ್ವರ್ಯ (ವೃ.ಸಂ.) ಆತ್ಮಜ್ಞಾನವನ್ನೇ ಸಂಪತ್ತನ್ನಾಗಿ ಉಳ್ಳ. ಪ್ರಫುಲ್ಲಿತ—ಅರಳಿದ. ಪೂತ—ಪವಿತ್ರವಾದ. ವಿಕಂಪಿತ—ನಡುಗುವ. ಹೊತ್ತು—ಸೂರ್ಯ. ಬುದ್ಧ—ಕಪಿಲವಸ್ತುವಿನ ಶುದ್ಧೋದನ ಮಹಾರಾಜನ ಮಗ, ಸಿದ್ಧಾರ್ಥನೆಂದು ಅವನ ಹೆಸರು ; ತಪಸ್ಸುಮಾಡಿ ಜ್ಞಾನವನ್ನು ಪಡೆದು ಬೌದ್ಧಮತವನ್ನು ಸ್ಥಾಪಿಸಿದನು. ಮಹಾವೀರ—ಜೈನರ ೨೪ನೆಯ ತೀರ್ಥಂಕರ. ಮಲೆಯುವ—ಔದ್ಧತ್ಯದಿಂದಿರುವ. ಕಂಬನಿ—ಕಣ್ಣ+ಪನಿ (ಷ.ತ.ಸ) ಕಣ್ಣೀರು. ಅನಿಮಿಷನಯನ—ತೆರೆದ ಕಣ್ಣುಳ್ಳವನು. ಪರ್ಯಂತ—ವರೆಗೆ. ಉದ್ಘೋಷ—ಗಟ್ಟಿಯಾಗಿ ಕೂಗುವಿಕೆ. ಬಡಬ—ಸಮುದ್ರದಲ್ಲಿ ಹುಟ್ಟುವ ಬೆಂಕಿ. ನಿಮೀಲಿತ—ಮುಚ್ಚಿದ. ಪೂರ್ವೋತ್ತರ—ಹಿಂದಿನ ಮತ್ತು ಮುಂದಿನ. ಸನಾತನ ಧರ್ಮ—ಹಿಂದೂ ಧರ್ಮ. ಚಾಗಿ—ತ್ಯಾಗಿ(ತ್ಭ) ಅಧೋಗತಿ—ಕೀಳು ಸ್ಥಿತಿ. ಸಂಪದ್ಯುಕ್ತ—ಐಶ್ವರ್ಯದಿಂದ ಕೂಡಿದ. ಭಾವಿ—ಮುಂದಿನ. ಪುನರುಜ್ಜೀವನ—ಮತ್ತೆ ಉದ್ಧಾರವಾಗುವುದು. ಪುನರುತ್ಥಾನ—ಮತ್ತೆ ಮೇಲೇಳುವುದು. ಧ್ಯೇಯ—ಹೆಗ್ಗುರಿ. ಉನ್ನತ—ಶ್ರೇಷ್ಠ. ಅಖಂಡ—ಛಿದ್ರವಾಗದ ; ಒಂದಾದ. ಪರಕೀಯ—

ಬೇರೆ ದೇಶದ. ಅನಾಥೆ—ದಿಕ್ಕಿಲ್ಲದವಳು. ಒಗೆಗೆಡು—ಬುದ್ಧಿಹೀನವಾಗು. ಸನ್ಮತಿ—ಸತ್+ಮತಿ (ಆ.ನಾ.ಸ.) ಒಳ್ಳೆಯ ಬುದ್ಧಿ. ದೌರಾತ್ಮ್ಯ—ಕೆಟ್ಟ ಸ್ವಭಾವ. ಕ್ರೌರ್ಯ—ಕ್ರೂರವಾದ. ಮೂಕಾಶ್ರು—ಮಾತಿಲ್ಲದೆ ಸುರಿಯುವ ಕಣ್ಣೀರು. ಚೆಲ್ಲಾಟ—ಆಟ. ಉದರಪೋಷಣೆ—ಹೊಟ್ಟೆ ಹೊರೆಯುವುದು. ಸದೃಶ—ಸಮಾನ. ನಿಷ್ಪಂದ—ಅಲುಗದ. ನೀರವ-ಮೌನ. ವೈರಾಗ್ಯ—ಆಸೆಯನ್ನು ಗೆದ್ದ ಸ್ಥಿತಿ. ಚಿಹ್ನೆ—ಗುರುತು. ಕೈಮುಗಿ—ಕೈಯ್ಯಂ+ಮುಗಿ (ಕ್ರಿ.ಸ.). ಅಂತರಾಳ–ಹೃದಯದ ಒಳಗೆ. ಸಜ್ಜೆ—ಶಯ್ಯೆ. (ತ್ಸ)ಹಾಸಿಗೆ. ಪವಡಿಸು—ಮಲಗು. ಆಪಾದಮಸ್ತಕ-ಪಾದದಿಂದ ತಲೆಯವರೆಗೆ. ಓಲಾಡು-ಮುಳುಗು. ಮೇಧಾಶಕ್ತಿ-ಬುದ್ಧಿಶಕ್ತಿ; ಧನಾರ್ಜನೆ—ಐಶ್ವರ್ಯದ ಸಂಪಾದನೆ. ವೈರಾಗಿ—ಆಸೆಯನ್ನು ಬಿಟ್ಟವನು: ಸಂನ್ಯಾಸಿ. ನೇಸರು—ಸೂರ್ಯ. ಸೌಮ್ಯಾತಪ—ಸೌಮ್ಯ + ಆತಪ—(ಸ.ದೀ.ಸಂ.) ತಂಪಾದ ಬಿಸಿಲು; ಹೂಬಿಸಿಲು. ತಲೆಯುಡೆ—ತಲೆಯ + ಉಡೆ (ಷ.ತ.ಸ.) ರುಮಾಲು; ಪೇಟ. ಕಡಲೆಲರು—ಕಡಲಿನ + ಎಲರು; ಸಮುದ್ರದಿಂದ ಬೀಸುವ ಗಾಳಿ. ಒಯ್ಯನೆ—ನಿಧಾನವಾಗಿ; ಮೃದುವಾಗಿ. ಓಸರಿಸು—ಪಕ್ಕಕ್ಕೆ ಸರಿ. ದೃಢಚಿತ್ತಾನ್ವಿತ—ನಿಶ್ಚಲಮನಸ್ಸಿನಿಂದ ಕೂಡಿದ. ವಾಣಿ—ಬಾಣಿ (ದ್ಭ), ಮಾತು. ಮಾತೃದೇವೋ ಭವ—ತಾಯಿಯೇ ದೇವರು. ವ್ಯೋಮ—ಆಕಾಶ. ಭೋಗವಾದಿ—ಐಹಿಕ ಸುಖಗಳೇ ಜೀವನದ ಗುರಿಯೆಂದು ಹೇಳುವವನು. ನೆರವಾಗು—ಸಹಾಯವಾಗು. ನಿರ್ವಿಕಲ್ಪಸಮಾಧಿ—ಭಗವಂತನಲ್ಲಿಯೇ ಮನಸ್ಸನ್ನು ನಿಲ್ಲಿಸಿ ಮಾಡುವ ಧ್ಯಾನ: ಆತ್ಮಸಾಕ್ಷಾತ್ಕಾರದ ಸ್ಥಿತಿ. ಮಂದಸ್ಮಿತ—ಮುಗುಳುನಗೆ. ಕಟಾಕ್ಷ—ಕಡೆಗಣ್ಣ ನೋಟ.

## ಪ್ರಶ್ನೆಗಳು

೧. ಸಂನ್ಯಾಸಿಯು ಸಮುದ್ರತೀರಕ್ಕೆ ಬಂದು ಏನು ಮಾಡಿದನು?
೨. ಧ್ಯಾನಾಸಕ್ತನಾದ ಸಂನ್ಯಾಸಿಯ ಹೃದಯದಲ್ಲಿ ಎದ್ದ ಭಾವತರಂಗಗಳಾವುವು? ವಿವರಿಸಿ.
೩. ಸಂನ್ಯಾಸಿಯು ಸಮಸ್ತವಿಶ್ವವನ್ನು ಕುರಿತು ಸಂಬೋಧಿಸಿದುದೇನು?
೪. ರಾಜಯೋಗಿಯು ಏನೆಂದು ಶಪಥಮಾಡಿದನು?
೫. ಸಂನ್ಯಾಸಿಯನ್ನು ಕಂಡು 'ಯಾರಿವನು?' ಎಂಬ ಪ್ರಶ್ನೆ ಯಾರುಯಾರ ಮನಸ್ಸಿನಲ್ಲಿ ಉದಿಸಿತು? ಹೇಗೆ ಉದಿಸಿತು?

## ಸಂದರ್ಭದೊಡನೆ ಸ್ಪಷ್ಟೀಕರಿಸಿರಿ :

೧. 'ದ್ವಂದ್ವಗಳಿಗೊಂದು ಸಮನ್ವಯರಂಗವಾಗಿತ್ತು.'
೨. 'ಆ ಓಜಸ್ವಿಯಾದ ಸಂನ್ಯಾಸಿ ಕಡಲಿನೆದೆಯ ಬಡಬನಂತಾದನು.'
೩. 'ಅಮ್ಮಾ, ತ್ರಿಲೋಕಸುಂದರಿ, ನಿನ್ನನ್ನು ಕುರೂಪಿಯನ್ನಾಗಿ ಮಾಡಿದರು.'

೪. 'ಎಲ್ಲೈ ಕಂಬನಿಗಳೆ, ಮೂಕಾಶ್ರುಬಿಂದುಗಳೆ, ಮಾತೆಯ ಪಾದಗಳನ್ನು ತೊಳೆಯುವಿರಾ ?'

೫. 'ಅನ್ನವಿಲ್ಲದ, ವಸ್ತ್ರವಿಲ್ಲದ ಕುರಿಗಳಿಗೆ ವೇದಾಂತಬೋಧನೆ ಮಾಡುತ್ತಿದ್ದೇವ!'

೬. 'ಕೀಟವೊಂದು ಬಂಧನದಲ್ಲಿರುವವರೆಗೆ ನನಗೆ ಮುಕ್ತಿಬೇಡ!'

೭. 'ನನಗಿಂದು ತಿಳಿಯಿತು ನನ್ನ ಜನ್ಮೋದ್ದೇಶ!'

೮. 'ನಿಜವಾದ ಧರ್ಮವನ್ನು ಜಗತ್ತಿಗೆ ಬೋಧಿಸುವೆನು!'

ವಿಗ್ರಹವಾಕ್ಯ ಬರೆದು ಸಮಾಸವನ್ನು ತಿಳಿಸಿ :

ಮೂವತ್ತು; ಗಂಭೀರವದನ; ಮೈತಿಳಿ; ತ್ರಿಲೋಕ; ಕೈಮುಗಿ; ಅರಮನೆ; ಕಡಲ್ಬಕ್ಕಿ; ತಲೆವಾಗು.

ಪದಗಳನ್ನು ಬಿಡಿಸಿ ಸಂಧಿಯನ್ನು ಹೇಳಿ :

ಎಣ್ಣೆಗೆಂಪು; ನಿರಂತರಾನ್ವೇಷಕ; ತೇಜೋನ್ವಿತ; ತೀಕ್ಷ್ಣಾನ್ವೇಷಕ; ಮನೋದ್ವೇಗ; ಸಮುದ್ರಾಭಿಮುಖ; ಅರುಣೋದಯ; ಸನ್ಮತಿ; ರಾಮೇಶ್ವರ; ಯುಗಾಂತರ; ಅನೇಕಾನೇಕ; ತಾಮಸಾತಿಥ್ಯ.

ಇವುಗಳಿಗೆ ತತ್ಸಮ, ತದ್ಭವಗಳನ್ನು ಬರೆಯಿರಿ :

ಸಾಕ್ಷಿ; ಶ್ರೀ; ದೃಷ್ಟಿ; ರಾಜ; ಚಾಗಿ; ಸೆಜ್ಜೆ; ಶೂನ್ಯ; ಯೋಗಿ; ವಾಣಿ; ಅಂಚೆ ಮುಖ; ಕುಮಾರಿ.

ಇವುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಪ್ರಯೋಗಿಸಿ :

ಕಣ್ಮರೆಯಾಗು; ಅಲ್ಲೋಲಕಲ್ಲೋಲ; ಭಾವಪರವಶ; ತಾಮಸಾತಿಥ್ಯ; ಅನಂತಾಕಾಶ; ಜನ್ಮೋದ್ದೇಶ; ಭೂತಭವಿಷ್ಯದ್ವರ್ತಮಾನ.

ಇವುಗಳ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ :

ಖಂಡ; ಭೇದ; ಪವಿತ್ರ; ಜ್ಞಾನ; ಆರೋಹಣ; ಶಾಂತಿ; ಜಯ; ಆಚಾರ; ಸ್ವಾರ್ಥ; ಸುರ.

****

# ಬಾದಾಮಿಯ ಚಾಲುಕ್ಯರು

—ಆಲೂರು ವೆಂಕಟರಾವ್

ಈ ಚಾಲುಕ್ಯರೇ ಇಡೀ ಕರ್ಣಾಟಕಕ್ಕೆ ಸಾರ್ವಭೌಮರಾಗಿ ಮೊದಲು ಆಳಿದ ಅರಸರು. ಈ ವಂಶದ ೯ ಜನ ಅರಸರು ಬಾದಾಮಿಯಲ್ಲಿ ಬಹು ವೈಭವದಿಂದ ಸುಮಾರು ೨೦೦ ವರ್ಷಗಳವರೆಗೆ ಆಳಿದರು. ಹಾರೀತ ಋಷಿಯು ದೇವತೆಗಳಿಗೆ ಅರ್ಘ್ಯೋದಕವನ್ನು ಕೊಡುವಾಗ ಅವನ ಚುಲಕದಿಂದ, ಎಂದರೆ ಬೊಗಸೆಯೊಳಗಿಂದ, ಒಬ್ಬ ವೀರಪುರುಷನು ಹುಟ್ಟಿದನಂತೆ. ಚಾಲುಕ್ಯರು ತಾವು ಆ ವೀರಪುರುಷನ ವಂಶಜರೆಂದು ಹೇಳಿಕೊಳ್ಳುತ್ತಾರೆ. ಆದುದರಿಂದ ಇವರಿಗೆ " ಹಾರೀತಪುತ್ರ "ರೆಂದೆನ್ನುತ್ತಾರೆ. ಇವರ ಗೋತ್ರ ಮಾನವ್ಯ ; ಕುಲದೇವತೆ ವಿಷ್ಣು ; ವಂಶ ಚಂದ್ರವಂಶ. ಇವರು ಮೊದಲು ಉತ್ತರದವರು. ನರ್ಮದೆಯನ್ನು ದಾಟಿ ಮೊದಲು ಬಂದವನು ಜಯಸಿಂಹನು. ಇವನು ರಾಷ್ಟ್ರಕೂಟರ ಅರಸನಾದ ಇಂದ್ರನನ್ನು ಸೋಲಿಸಿ, ಮುಂದೆ ದಕ್ಷಿಣಕ್ಕೆ ಸಾಗಿ ಕಂಚಿಯಲ್ಲಿರುವ ಪಲ್ಲವವಂಶದ ತ್ರಿಲೋಚನಪಲ್ಲವನೊಡನೆ ಕಾದಿದನು. ಆದರೆ ಆ ಯುದ್ಧದಲ್ಲಿ ತಾನೇ ಮಡಿದನು. ಆಗ ಗರ್ಭಿಣಿಯಾಗಿದ್ದ ಅವನ ಹೆಂಡತಿಯು ವಿಷ್ಣು ಸೋಮಯಾಜಿಯೆಂಬ ಒಬ್ಬ ಬ್ರಾಹ್ಮಣನನ್ನು ಆಶ್ರಯಿಸಿದಳು. ಅಲ್ಲಿ ಅವಳಿಗೆ ರಾಜಸಿಂಹನೆಂಬ ಮಗನು ಹುಟ್ಟಿದನು. ಅವನು ದೊಡ್ಡವನಾದ ಬಳಿಕ ಪಲ್ಲವರೊಡನೆ ಕಾದಿ, ಅವರನ್ನು ಸೋಲಿಸಿ, ಆ ವಂಶದ ರಾಜಪುತ್ರಿಯನ್ನು ಮದುವೆಯಾದನು. ಆದರೆ ಅವನ ಇತಿಹಾಸವು ನಮಗೆ ವಿಶೇಷವಾಗಿ ತಿಳಿದಿಲ್ಲ. ಇವನ ಮಗನಾದ ಪುಲಿಕೇಶಿಯೇ ಈ ಚಾಲುಕ್ಯ ವಂಶದ ಮೊದಲನೆಯ ಪ್ರಖ್ಯಾತ ರಾಜನು. ಇವನ ರಾಜಧಾನಿಯು ಮೊದಲು " ಇಂದುಕಾಂತ " ಅಥವಾ " ಅಜಂತೆ "ಯಲ್ಲಿದ್ದಿತು. ಆದರೆ ಮುಂದೆ ಈ ಪುಲಿಕೇಶಿಯು ಪಲ್ಲವರನ್ನು ಬಗ್ಗುಬಡಿದು, ವಾತಾಪಿ ಅಥವಾ ಬಾದಾಮಿಯನ್ನು ಅವರಿಂದ ಸೆಳೆದುಕೊಂಡು, ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿದನು. ಇವನು ಸಾರ್ವಭೌಮತ್ವ ಸೂಚಕವಾದ ಅಶ್ವಮೇಧಯಜ್ಞವನ್ನು ಮಾಡಿ ದಿಗಂತಕೀರ್ತಿಯನ್ನು ಪಡೆದನು. ಇವನ ಮಗನಾದ

ಮಂಗಳೇಶನು (೫೯೭-೬೦೮) ಮಹಾ ಕೋಟೇಶ್ವರನ ಭಕ್ತನು. ಇವನು ಬಾದಾಮಿಯಲ್ಲಿ ಎಲ್ಲಕ್ಕೂ ದೊಡ್ಡದಾದ ಮೂರನೆಯ ವೈಷ್ಣವ ಗವಿಯನ್ನು ಕೊರೆಯಿಸಿದನು.

ಇವನ ತರುವಾಯ ಪ್ರೌಢಪ್ರತಾಪಿಯಾದ ೨ನೆಯ ಪುಲಿಕೇಶಿಯು ಪಟ್ಟವೇರಿದನು (೬೦೯-೬೪೨). ಈ ಎರಡನೆಯ ಪುಲಿಕೇಶಿಯು ಕರ್ನಾಟಕದ ಗಂಗ, ಕದಂಬ, ಪಲ್ಲವ ಮುಂತಾದ ಅರಸರನ್ನು ಗೆದ್ದುದಲ್ಲದೆ ಕರ್ನಾಟಕವನ್ನು ದಾಟಿ ಹೋಗಿ, ಉತ್ತರದಲ್ಲಿ ಆಳುತ್ತಿದ್ದ ಕೋಸಲ, ಕಲಿಂಗ, ಮೌರ್ಯ ಮುಂತಾದ ಅರಸರನ್ನೂ, ದಕ್ಷಿಣದಲ್ಲಿಯ ಪಾಂಡ್ಯ, ಚೋಳ, ಕೇರಳ ಮೊದಲಾದ ಅರಸರನ್ನೂ ಪಾದಾಕ್ರಾಂತರನ್ನಾಗಿ ಮಾಡಿದನು. ನೂರು ಹಡಗುಗಳುಳ್ಳ ಹಡಗುಪಡೆಯೊಂದಿಗೆ ಪಶ್ಚಿಮ ಸಮುದ್ರದಲ್ಲಿ ಸೈನ್ಯವನ್ನು ಸಾಗಿಸಿ ಉತ್ತರಕ್ಕೆ ಮುಂಬಯಿ ಹತ್ತಿರವಿರುವ "ಪುರಿ" ಎಂಬ ಪಟ್ಟಣವನ್ನು ತೆಗೆದುಕೊಂಡನು. ಆದರೆ ಈ ಪುಲಿಕೇಶಿಯು ಮಾಡಿದ ಎಲ್ಲಕ್ಕೂ ಮಹತ್ವದ ಕಾರ್ಯವೆಂದರೆ ಉತ್ತರ ಹಿಂದೂಸ್ಥಾನಕ್ಕೆಲ್ಲಾ ಸಾರ್ವಭೌಮ ಚಕ್ರವರ್ತಿಯಾಗಿದ್ದ ಕನೋಜದ ಅರಸನಾದ "ಹರ್ಷವರ್ಧನ"ನನ್ನು ನರ್ಮದೆಯ ದಂಡೆಯ ಮೇಲೆ ಸಂಪೂರ್ಣವಾಗಿ ಸೋಲಿಸಿದುದೇ. ಆಗ ಅವನು "ಪರಮೇಶ್ವರ" ಎಂಬ ಬಿರುದನ್ನು ಧರಿಸಿ ಅಶ್ವಮೇಧಯಾಗವನ್ನು ಮಾಡಿದನು. ಹರ್ಷವರ್ಧನನು ಇವನ ಮೇಲೆ ದಂಡೆತ್ತಿ ಬಂದಾಗ ಅವನ ಸೈನ್ಯದಲ್ಲಿ ಬರೀ ಆನೆಗಳೇ ಅರವತ್ತು ಸಾವಿರವಿದ್ದವು ಎಂದ ಮೇಲೆ ಅವನ ಕುದುರೆ ಕಾಲಾಳುಗಳ ಸೈನ್ಯವು ಎಷ್ಟಿತ್ತೆಂಬುದನ್ನು ನೀವೇ ಊಹಿಸಿರಿ. ಅಂದಿಗೆ ಉತ್ತರ ಹಿಂದೂಸ್ಥಾನದ ಇತಿಹಾಸವು ಮುಗಿಯಿತು. ಕರ್ನಾಟಕದ ಇತಿಹಾಸಕ್ಕೆ ಕಳೆಯೇರುತ್ತಾ ಹೋಯಿತು. ಇವನ ರಾಜ್ಯವಿಸ್ತಾರವು ನರ್ಮದೆಯಿಂದ ದಕ್ಷಿಣಕ್ಕೆ ಇಡೀ ದಕ್ಷಿಣಾಪಥವನ್ನು ಆಕ್ರಮಿಸಿತ್ತು. ಪೂರ್ವ, ಪಶ್ಚಿಮ, ದಕ್ಷಿಣ ಸಮುದ್ರದ ನಡುವಿನ ನಾಡೆಲ್ಲವೂ ಇವನಿಗೆ ಸೇರಿತ್ತು. ಹ್ಯೂಯನತ್ಸಾಂಗನೆಂಬ ಚೀನಾದೇಶದ ಪ್ರವಾಸಿಯು ೬೪೧ ನೆಯ ಇಸ್ವಿಯ ಸುಮಾರಿಗೆ ಈ ಪುಲಿಕೇಶಿಯ ರಾಜ್ಯದೊಳಗೆ ಸಂಚಾರಮಾಡಿದನು. ಅವನು ನಮ್ಮೀ ಕರ್ನಾಟಕವನ್ನೂ, ಪುಲಿಕೇಶಿಯ ಆಗಿನ ಪ್ರಜೆಗಳನ್ನೂ, ಅವರ ನಡೆನುಡಿಗಳನ್ನೂ ಅತ್ಯಂತ ಸುಂದರವಾಗಿ ವರ್ಣಿಸಿದ್ದಾನೆ. ಪ್ರತಿಯೊಬ್ಬ ಕನ್ನಡಿಗನೂ ಅದನ್ನು ತನ್ನೆದೆಯ ಮೇಲೆ ಬರೆದಿಟ್ಟುಕೊಳ್ಳಬೇಕು. ಈ ಪುಲಿಕೇಶಿಯಂಥ ವೈಭವಸಂಪನ್ನರಾದ ಅರಸರು ಹಿಂದೂಸ್ಥಾನದ ಇತಿಹಾಸದಲ್ಲಿ ಬೆರಳಿನಿಂದೆಣಿಸುವಷ್ಟು ಸಹ ಸಿಕ್ಕುವುದು ಅಪೂರ್ವ. ಅವನ ವರ್ಚಸ್ಸು ಇರಾಣ ಮುಂತಾದ ಪರರಾಷ್ಟ್ರಗಳ ಮೇಲೆಯೂ ಇತ್ತೆಂದು ಗೊತ್ತಾಗುತ್ತದೆ. ಅರಬ್ಬೀ ಭಾಷೆಯ ಒಂದು ಪುಸ್ತಕದಲ್ಲಿ ಈತನು ಇರಾಣದ ಅರಸನಾದ 'ಖುಸ್ರು'ವಿನ ಕಡೆಗೆ ತನ್ನ ರಾಯಭಾರಿಯನ್ನು ಕಳುಹಿಸಿದ್ದನೆಂದು ಉಲ್ಲೇಖವಿದೆ. ಮೇಲಾಗಿ ಇರಾಣದ ರಾಯಭಾರಿಗಳು ಇವನ ಒಡ್ಡೋಲಗಕ್ಕೆ ಬಂದಿದ್ದರೆಂಬುದು ಅಜಂತೆಯಲ್ಲಿರುವ ಗವಿಯೊಳಗಿನ ಒಂದು ಚಿತ್ರದಿಂದ ಗೊತ್ತಾಗುತ್ತದೆ. ಈ ಪುಲಿಕೇಶಿಯ ಪ್ರತ್ಯಕ್ಷದರ್ಶನವು ಆ ಚಿತ್ರದಲ್ಲಿ ಕನ್ನಡಿಗರಿಗೆ ಆಗುವಂತಿದೆ. ಕನ್ನಡಿಗರ ದುರ್ದೈವದಿಂದ, ಅದರಲ್ಲಿಯೂ ಪುಲಿಕೇಶಿಯ ಮುಖವನ್ನೇ ಯಾವನೋ ಒಬ್ಬ ದುಷ್ಟನು

ಕಡಿಸಿರುವನು. ಆದರೆ ಅದೇ ಅಜಂತೆಯಲ್ಲಿರುವ ಮತ್ತೊಂದು ಗವಿಯಲ್ಲಿ ಒಂದು 'ರಾಜವಿಲಾಸ' ನೌಕೆಯ ಚಿತ್ರವಿದ್ದು ಅದರಲ್ಲಿಯ ಮೂರ್ತಿಯು ಪುಲಿಕೇಶಿಯದೇ ಇರಬಹುದೆಂದು ನಮಗೆ ತೋರುತ್ತದೆ. ಇರಲಿ! ಮುಖ್ಯವಾಗಿ ಹೇಳುವುದೇನೆಂದರೆ, ಈ ಪುಲಿಕೇಶಿಯ ಹೆಸರನ್ನು ಯಾವ ಕನ್ನಡಿಗನೂ ಎಂದಿಗೂ ಮರೆಯಕೂಡದು. ಇವನ ಪರಾಕ್ರಮದ ಮತ್ತು ರಾಜನೀತಿಯ ಕೃತ್ಯಗಳನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ. ಇವನ ಕಾಲದಲ್ಲಿ ಇವನ ಹಿರಿಯ ಸೊಸೆಯಾದ 'ವಿಜಯಭಟ್ಟಾರಿಕಾ' ಎಂಬುವಳು ಸಾವಂತವಾಡಿಯನ್ನಾಳಿದಳು. ಪುಲಿಕೇಶಿಯ ಮಗನ ಆಳ್ವಿಕೆಯಲ್ಲಿ ದಕ್ಷಿಣ ಗುಜರಾಥದಲ್ಲಿ ಚಾಲುಕ್ಯರದೊಂದು ಶಾಖೆಯು ಸ್ಥಾಪಿಸಲ್ಪಟ್ಟಿತ್ತು. ಇವನ ಮಗ, ಮೊಮ್ಮಗ, ಮರಿಮಕ್ಕಳು ಇವರೆಲ್ಲ ಶೂರರಾದ ಅರಸರೇ. ಅವರು ಈ ವಂಶದ ಹುಟ್ಟುಹಗೆಗಳಾದ ಪಲ್ಲವರೊಡನೆಯೂ, ಚೋಳ, ಪಾಂಡ್ಯ, ಹೈಹಯ ಮುಂತಾದವರೊಡನೆಯೂ ಕಲಿತನದಿಂದ ಕಾದಿ ಚಾಲುಕ್ಯವಂಶದ ಹೆಸರನ್ನು ಶಾಶ್ವತವಾಗಿ ನಿಲ್ಲಿಸಿರುವರು. ಆದರೆ ಇತಿಹಾಸವನ್ನು ಕೊಡುವುದು ನಮ್ಮ ಮುಖ್ಯ ಉದ್ದೇಶವಿರದೆ ವೈಭವವನ್ನು ಕಣ್ಣೆದುರಿಗೆ ತಂದಿಡುವುದೇ ನಮ್ಮ ಮುಖ್ಯ ಮನೋಗತವಿರುವುದರಿಂದ ನಾವು ಹೆಚ್ಚಿನ ಸಂಗತಿಗಳನ್ನು ಇಲ್ಲಿ ಹೇಳುವುದಿಲ್ಲ. ಈ ಮಹಾಪುಲಿಕೇಶಿಯಿಂದ ನಾಲ್ಕನೆಯ ತಲೆಯವನಾದ ೨ನೆಯ ವಿಕ್ರಮಾದಿತ್ಯನು ತನ್ನ ವಂಶಕ್ಕೆ ಪೂರ್ವದಿಂದಲೂ ಶತ್ರುಗಳಾದ ಪಲ್ಲವರೊಡನೆ ಹೋರಾಡಿ ಮಾಣಿಕ್ಯದ ರಾಶಿಯನ್ನೂ, ಗಜತುರಗಗಳನ್ನೂ ಯಥೇಷ್ಟವಾಗಿ ತೆಗೆದುಕೊಂಡು ಅವರ ರಾಜಧಾನಿಯಾದ ಕಂಚಿಯನ್ನು ಹೊಕ್ಕ ಸಂಗತಿಯು ಮಾತ್ರ ನೆನಪಿನಲ್ಲಿಡತಕ್ಕುದಾಗಿದೆ. ಏಕೆಂದರೆ, ಈ ವಿಕ್ರಮಾದಿತ್ಯನು ಮಿಕ್ಕವರಂತೆ ಆ ಪಟ್ಟಣವನ್ನು ಹಾಳುಮಾಡದೆ ದೇವಬ್ರಾಹ್ಮಣರಿಗೂ, ಬಡಬಗ್ಗರಿಗೂ ಅನೇಕ ದಾನ ಮುಂತಾದವುಗಳನ್ನು ಮಾಡಿ ಅಲ್ಲಿಯ ರಾಜಸಿಂಹೇಶ್ವರ ಮುಂತಾದ ದೇವಾಲಯಗಳನ್ನು ಉದ್ಧರಿಸಿದನು. ಇವನ ಹೆಂಡತಿಯಾದ ಲೋಕಮಹಾದೇವಿಯೆಂಬುವಳು ಈತನ ಈ ಜಯದ ಸೂಚನಾರ್ಥವಾಗಿ ಪಟ್ಟದಕಲ್ಲಿನಲ್ಲಿ ವಿರೂಪಾಕ್ಷನ ಅತಿ ವಿಸ್ತಾರವಾದ ದೇವಾಲಯವನ್ನು (೬೫೭ ಶಕ) ಕಟ್ಟಿಸಿದಳು. ಇವಳು ಈ ಕಾಲದಲ್ಲಿ "ಕಿಸುವೊಳಲ್" ಎಂದರೆ ಪಟ್ಟದಕಲ್ಲಿನಲ್ಲಿ ಆಳುತ್ತಿದ್ದಳು. ಆದರೆ ಇವನ ಮಗನ ಕಾಲಕ್ಕೆ ಏಳೆಂಟು ತಲೆಗಳಿಂದ ಅವಿಚ್ಛಿನ್ನವಾಗಿ ನಡೆಯುತ್ತಾ ಕೈವಶವಾಗಿದ್ದ ರಾಜಲಕ್ಷ್ಮಿಯು ಈ ವಂಶವನ್ನು ಬಿಟ್ಟುಹೋದಳು. ರಾಷ್ಟ್ರಕೂಟರ ಅರಸನಾದ ದಂತಿವರ್ಮನೆಂಬುವನು ಇವರ ರಾಜ್ಯವನ್ನು ಸೆಳೆದುಕೊಂಡು ರಾಷ್ಟ್ರಕೂಟವಂಶವನ್ನು ಸ್ಥಾಪಿಸಿದನು.

## ಟಿಪ್ಪಣಿ

ಕೃತಿ ಮತ್ತು ಕರ್ತೃ :

ಇಲ್ಲಿನ ಪಠ್ಯಭಾಗವನ್ನು ಆಲೂರು ವೆಂಕಟರಾವ್ ಅವರ 'ಕರ್ನಾಟಕ ಗತವೈಭವ' ಎಂಬ ಗ್ರಂಥದಿಂದ ಆಯ್ದುಕೊಳ್ಳಲಾಗಿದೆ. ದಿವಂಗತ ವೆಂಕಟರಾಯರು ೧೮೮೦ ರಲ್ಲಿ ಜನಿಸಿದರು. ಮಹಾತ್ಮಾ ಗಾಂಧಿಯವರ ಸ್ವಾತಂತ್ರ್ಯಸಮರದಲ್ಲಿ ಮಹತ್ತಾದ ಪಾತ್ರವನ್ನು ವಹಿಸಿದ ಇವರು ಕರ್ನಾಟಕದ ಏಕೀಕರಣಕ್ಕಾಗಿಯೂ ಅಪಾರವಾಗಿ ಶ್ರಮಿಸಿದರು.

ಇವರನ್ನು "ಕರ್ನಾಟಕ ಕುಲಪುರೋಹಿತರು" ಎಂದು ಕರೆದು ಗೌರವಿಸಲಾಗಿದೆ. 'ಕರ್ನಾಟಕ ಗತವೈಭವ', 'ಕರ್ನಾಟಕ ವೀರರತ್ನಗಳು', 'ಕರ್ನಾಟಕತ್ವದ ವಿಕಾಸ', 'ನನ್ನ ಜೀವನ ಸ್ಮೃತಿಗಳು' ಮೊದಲಾದ ಅವರ ಗ್ರಂಥಗಳು ಕನ್ನಡ ಸಾಹಿತ್ಯಜಗತ್ತಿನಲ್ಲಿ ಸಾಕಷ್ಟು ಜಾಗೃತಿಯನ್ನುಂಟುಮಾಡಿದವು. ಕೆಲಕಾಲ ಇವರು ಜಯಕರ್ನಾಟಕ ಮಾಸಪತ್ರಿಕೆಯ ಸಂಪಾದಕರಾಗಿಯೂ ಇದ್ದರು. ೧೯೩೦ ರಲ್ಲಿ ಮೈಸೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು. ಕರ್ನಾಟಕ ಗ್ರಂಥಕರ್ತರ ಸಮ್ಮೇಳನ, ಕರ್ನಾಟಕ ರಾಷ್ಟ್ರೀಯ ಪರಿಷತ್ತು, ಕರ್ನಾಟಕ ವಿದ್ಯಾವರ್ಧಕಸಂಘ, ಕರ್ನಾಟಕ ಇತಿಹಾಸಮಂಡಲ ಮೊದಲಾದ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಇವರು ಪ್ರಮುಖವಾದ ಪಾತ್ರಧಾರಿಗಳಾಗಿದ್ದರು. ಸಾಹಿತ್ಯಜಗತ್ತಿನಂತೆ ಆಧ್ಯಾತ್ಮಿಕ ಜಗತ್ತಿನಲ್ಲಿಯೂ ಇವರು ಸುಪ್ರಸಿದ್ಧರಾಗಿದ್ದಾರೆ. ಅವರ ಮಧ್ವಸಿದ್ಧಾಂತ ಪ್ರವೇಶಿಕೆ ಶ್ರೀಮುಖ್ಯಪ್ರಾಣಮಹಿಮೆ ಮೊದಲಾದ ಕೃತಿಗಳೂ, ಲೋಕಮಾನ್ಯ ತಿಲಕರ ಗೀತಾರಹಸ್ಯದ ಅನುವಾದ "ಗೀತಾಪ್ರಕಾಶ"ವೂ ಇವರ ಆಧ್ಯಾತ್ಮಿಕ ಜ್ಞಾನಕ್ಕೆ ಸಾಕ್ಷಿಯಾಗಿವೆ. ಇವರು ೧೯೬೪ ರಲ್ಲಿ ದಿವಂಗತರಾದರು.

ಇಲ್ಲಿನ ಪಠ್ಯಭಾಗದಲ್ಲಿ ಚಾಳುಕ್ಯ ರಾಜವಂಶದ ಇತಿಹಾಸ ಪರಂಪರೆಯು ಮನೋಜ್ಞವಾಗಿ ರೂಪಿತವಾಗಿದೆ.

ಕಠಿಣಪದಗಳ ಅರ್ಥ :

ಸಾರ್ವಭೌಮ—ಸಾಮ್ರಾಟ, ಚಕ್ರವರ್ತಿ. ಅರ್ಘ್ಯೋದಕ—ಪೂಜೆಯ ನೀರು (ಅರ್ಘ್ಯ+ಉದಕ. ಗು. ಸಂ.) ಚುಲಕ—ಬೊಗಸೆ. ಕಾದು—ಯುದ್ಧಮಾಡು. ಅಶ್ವಮೇಧ—ಕುದುರೆಯನ್ನು ಬಲಿಕೊಟ್ಟು ಮಾಡುವ ಯಜ್ಞ. ದಿಗಂತ—ದಿಕ್ಕಿನ ಕೊನೆ. ಸೆಳೆ—ಕಿತ್ತುಕೊಳ್ಳು. ಪಾದಾಕ್ರಾಂತ—ಅಧೀನ. ಮುಂದೆ+ಸುಗ್ಗು-ಮುನ್ನುಗ್ಗು (ಕ್ರಿ. ಸ.) ಮಹತ್ವ—ದೊಡ್ಡ. ಕೈಯಂ+ಸೇರು ಕೈಸೇರು-(ಕ್ರಿ.ಸ.) ಅತಿ+ಅಂತ-ಅತ್ಯಂತ (ಯಣ್. ಸಂ.) ವರ್ಚಸ್ಸು—ಕಾಂತಿ. ಉಲ್ಲೇಖ—ಬರವಣಿಗೆ. ಒಡ್ಡೋಲಗ-ರಾಜಸಭೆ; ರಾಜನ ದರ್ಬಾರು. ದುರ್ದೈವ—ಕೆಟ್ಟ ಅದೃಷ್ಟ. ನೌಕೆ—ಹಡಗು. ಮನೋಗತ—ಮನಸ್ಸಿನಲ್ಲಿರುವ ಅಭಿಪ್ರಾಯ. ಯಥಾ+ಇಚ್ಛಾ-ಯಥೇಚ್ಛಾ (ಗು. ಸಂ.) ಬೇಕಾದಷ್ಟು. ರಾಜಸಿಂಹ+ಈಶ್ವರ-ರಾಜಸಿಂಹೇಶ್ವರ (ಗು.ಸಂ.) ಸೂಚನಾ+ಅರ್ಥ-ಸೂಚನಾರ್ಥ (ಸ. ದೀ. ಸಂ). ಅವಿಚ್ಛಿನ್ನ—ಅಖಂಡ; ಒಡೆಯದ. ಕೈವಶ—ಕೈಗೆ ಸಿಕ್ಕು; ಕೈಸೇರು.

ಹಾರೀತ—ಈತನು ಜಾಬಾಲಿಋಷಿಯ ಪುತ್ರ. ಹ್ಯೂಯನ್‌ತ್ಸಾಂಗ್—ಚೀನಾದೇಶದ ಬೌದ್ಧಯಾತ್ರಿಕ, ಭಿಕ್ಷು. ಈತನು ಪುಲಿಕೇಶಿಯ ಕಾಲದಲ್ಲಿ ಭಾರತಕ್ಕೆ ಬಂದು ದೇಶದಲ್ಲೆಲ್ಲ ಸಂಚರಿಸಿ, ಭಾರತದೇಶದ ರಾಜಕೀಯ ಸ್ಥಿತಿಯನ್ನೂ, ಪುಲಿಕೇಶಿಯ ಮತ್ತು ಹರ್ಷವರ್ಧನ ರಾಜ್ಯಭಾರ ಕ್ರಮವನ್ನೂ ಬರೆದಿದ್ದಾನೆ.

ಹರ್ಷವರ್ಧನ—ಗುಪ್ತ ಸಾಮ್ರಾಜ್ಯವು ನಾಶವಾದ ಮೇಲೆ ನೂರಾರು ವರ್ಷಗಳ ನಂತರ ಪ್ರಭಾಕರವರ್ಧನನು ಒಂದು ಸಾಮ್ರಾಜ್ಯವನ್ನು ಕಟ್ಟುತ್ತಾನೆ. ಇವನ ಮಗನೇ ಹರ್ಷವರ್ಧನ. ಇವನು ಆರು ವರ್ಷಗಳ ಕಾಲ ಸುದೀರ್ಘ ದಂಡಯಾತ್ರೆಯನ್ನು ಮಾಡಿದನು. ಕನೂಜು, ಬಂಗಾಳ ಅಸ್ಸಾಂ ಮೊದಲಾದುವನ್ನು ಗೆದ್ದು ಉತ್ತರಭಾಗದ ಎಲ್ಲ ಭಾಗಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡು, ಹಲವು ವರ್ಷಗಳನಂತರ ದಕ್ಷಿಣಭಾರತವನ್ನು ಗೆಲ್ಲಲು ದಂಡೆತ್ತಿ ಬಂದು ಎರಡನೆಯ ಪುಲಿಕೇಶಿಯಿಂದ ಸೋತು ಹಿಂದಿರುಗಿದನು.

ಪ್ರಶ್ನೆಗಳು :

೧. ಚಾಲುಕ್ಯರನ್ನು ಹಾರೀತಪುತ್ರರೆಂದು ಕರೆಯಲು ಕಾರಣವೇನು ?
೨. ೧ನೆಯ ಪುಲಿಕೇಶಿಯ ಪೂರ್ವಜರ ವಿಚಾರವಾಗಿ ಸಂಗ್ರಹವಾಗಿ ಬರೆಯಿರಿ.
೩. ಮೊದಲನೆಯ ಪುಲಿಕೇಶಿಯು ಮಾಡಿದ ಸಾಹಸ ಕಾರ್ಯಗಳೇನು ?
೪. ಎರಡನೆಯ ಪುಲಿಕೇಶಿಯು ಮಾಡಿದ ಮಹತ್ವದ ಕಾರ್ಯಗಳಾವುವು ?
೫. ಎರಡನೆಯ ಪುಲಿಕೇಶಿಯನ್ನು ಕುರಿತು ಅಜಂತ ಗವಿಯಲ್ಲಿ ಕಾಣಬರುವ ಅಂಶಗಳೇನು ?

ವ್ಯಾಕರಣ :

ವಾಕ್ಯವಿಭಜನೆ—ಸಂಪೂರ್ಣ ಅರ್ಥವನ್ನು ಕೊಡುವ ಪರಸ್ಪರ ಹೊಂದಿಕೆಯುಳ್ಳ ಶಬ್ದಸಮುದಾಯಕ್ಕೆ ವಾಕ್ಯವೆಂದು ಹೆಸರು. ಇವುಗಳಲ್ಲಿ ಸಾಮಾನ್ಯವಾಕ್ಯ, ಮಿಶ್ರವಾಕ್ಯ, ಸಂಯೋಜಿತವಾಕ್ಯಗಳೆಂದು ಮೂರು ವಿಧ.

೧. ಸಾಮಾನ್ಯವಾಕ್ಯ—ಒಂದೇ ಪೂರ್ಣಕ್ರಿಯೆಯಿರುವ ವಾಕ್ಯವು ಸಾಮಾನ್ಯವಾಕ್ಯವೆನಿಸುವುದು. ಉದಾ. :—ಪುಲಿಕೇಶಿಯು ಹರ್ಷವರ್ಧನನನ್ನು ಸೋಲಿಸಿದನು.

೨. ಮಿಶ್ರವಾಕ್ಯ—ಒಂದು ಅಥವಾ ಅನೇಕ ಅಧೀನವಾಕ್ಯಗಳೂ, ಒಂದು ಪ್ರಧಾನ ವಾಕ್ಯವೂ ಇರುವುದು ಮಿಶ್ರವಾಕ್ಯವೆನಿಸುವುದು. (ಪ್ರಧಾನವಾಕ್ಯವೆಂದರೆ ಒಂದು ಪೂರ್ಣ ಕ್ರಿಯೆಯುಳ್ಳ ಸ್ವತಂತ್ರವಾಕ್ಯ. ಅಧೀನವಾಕ್ಯವೆಂದರೆ—ಅಪೂರ್ಣ ಕ್ರಿಯೆಯಿಂದ ಕೂಡಿ ಬೇರೊಂದು ವಾಕ್ಯಕ್ಕೆ ಅಧೀನವಾಗಿರುವುದು) ಉದಾ. :— ಎರಡನೆಯ ವಿಕ್ರಮಾದಿತ್ಯನು ಪಲ್ಲವರೊಡನೆ ಹೋರಾಡಿ, ಮಾಣಿಕ್ಯದ ರಾಶಿಗಳನ್ನೂ, ಗಜತುರಗಗಳನ್ನೂ ಯಥೇಚ್ಛವಾಗಿ ದೋಚಿಕೊಂಡು ಬಂದನು.

೩. ಸಂಯೋಜಿತವಾಕ್ಯ—ಸಂಪೂರ್ಣ ಅರ್ಥದಿಂದ ಕೂಡಿದ ಎರಡು ಅಥವಾ ಹೆಚ್ಚು ವಾಕ್ಯಗಳು ಸಂಯೋಜಕ ಶಬ್ದಗಳಿಂದ ಕೂಡಿಸಲ್ಪಟ್ಟು ಒಂದು ಸಂಪೂರ್ಣ ಅಭಿಪ್ರಾಯವುಳ್ಳ ವಾಕ್ಯವೇ ಸಂಯೋಜಿತವಾಕ್ಯ. ಉದಾ. :— ಇಡೀ ದಿನವೆಲ್ಲಾ ಮಳೆ ಸುರಿಯಿತು ; ಆದರೆ ಕೆರೆಕಟ್ಟೆಗಳು ತುಂಬಲಿಲ್ಲ.

****

# ಮಹಾಕವಿ ರಾಘವಾಂಕ

—ಆರ್. ಸಿ. ಹಿರೇಮಠ

## 'ಹರಿಶ್ಚಂದ್ರಕಾವ್ಯ'

ರಾಘವಾಂಕನ ಹರಿಶ್ಚಂದ್ರ ಕಾವ್ಯವು ಕಂಬನಿಯ ಕಾಲುವೆ; ರಸದ ಯಾತ್ರೆಯಾಗಿದೆ. ಕರುಣರಸ ಈ ಕಾವ್ಯದಲ್ಲಿ ಮಡುಗಟ್ಟಿ ನಿಂತಿದೆ. ಕಾಡಿನಲ್ಲಿ ಹಾಡಿ ಹರಿಶ್ಚಂದ್ರನ ನೊಂದ ಮನವನ್ನು ತಣಿಸಿ ಮುತ್ತಿನ ಸತ್ತಿಗೆಯನ್ನು ಬೇಡಿ ಮದುವೆಯಾಗ ಬಯಸಿದ ಹೊಲತಿಯರನ್ನು ಆತನು ಚಮ್ಮಟಿಗೆಯಿಂದ ಹೊಡೆದು ಕಳಿಸಿದೊಡನೆ ವಡವಾಗ್ನಿಯಂತೆ ಆರ್ಭಟಿಸುತ್ತ ಬಂದು ವಿಶ್ವಾಮಿತ್ರನು ಹರಿಶ್ಚಂದ್ರನನ್ನು ಕಾಡತೊಡಗುವನು. ತನ್ನ ಮಕ್ಕಳಾದ ಗಾಣರಾಣಿಯರನ್ನು ಮದುವೆಯಾಗಬೇಕೆಂದು ಕಾಡಿ ಬೇಡುವನು. "ಎಡವಿಡದೆ ಕಾಡಿಬೇಡುವಿರಾದೊಡೆ ಇನ್ನು ಕೇಳಿ ಕಡೆಗೆನ್ನ ಸರ್ವರಾಜ್ಯವನಾದಡಂ ನಿಮಗೆ ಕೊಡಹಡೆವೆನೈ...." ಎಂದು ನುಡಿದಾಗ ತಥಾಸ್ತು ಎಂದು ರಾಜ್ಯಸರ್ವಸ್ವವನ್ನು "ಹಡೆದೆಂ, ಹಡೆದೆಂ" ಎಂದು ನುಡಿಯುವನು. ಧಾರೆಯೆರೆಸಿಕೊಂಡು ಅದನ್ನು ಸ್ವೀಕರಿಸುವನು. ಧಾರೆಯೆರೆದ ರಾಜ್ಯಸರ್ವಸ್ವದಲ್ಲಿ ನಿನ್ನ ತೊಡಿಗೆಗಳಿವೆ; ಅವು ನೀಡೆಂದು ಬೇಡಿ, ಹಣ್ಣು ಸೀರೆಯನೀಸಿಕೊಂಡು ನಾಲ್ಕಾಗಿ ಸೀಳಿ, ಅವರಿಗೆ ಉಡಕೊಟ್ಟು, ಅವರ ದಿವ್ಯಾಂಬರವನ್ನು ತೆಗೆದುಕೊಳ್ಳುವನು. ಇದನ್ನೋದಿದಾಗ ಅದಾವ ಕಲ್ಲೆದೆ ಕರಗದು? ಇನ್ನೂ ಕವಿ ನಮ್ಮ ಕರುಣೆಯನ್ನು ಸೆಳೆಯುತ್ತಾನೆ. "ಬಹುಸುವರ್ಣಯಾಗವ ಮಾಡಿದಂದು ನೀನೆನಗೆ ದಕ್ಷಿಣೆಯಿತ್ತ ಧನವನೀವುದು" ಎಂದು ಸಕಲ ರಾಜ್ಯವನ್ನು ಸ್ವೀಕರಿಸಿದ ಮೇಲೆ ವಿಶ್ವಾಮಿತ್ರನು ಕೇಳುವನು; ಅದಕ್ಕಾಗಿ ಹರಿಶ್ಚಂದ್ರನು ಒಪ್ಪುವವರೆಗೆ ಹಟಹಿಡಿಯುವನು. ಮುನಿ ಆತನನ್ನು ಪುರಕ್ಕೆ ತಂದು ಪ್ರತ್ಯಕ್ಷವಾಗಿ ಎಲ್ಲವನ್ನೂ ಸ್ವೀಕರಿಸುವನು. ಆಗ ಧೈರ್ಯನಿಧಿ ಹರಿಶ್ಚಂದ್ರನ ಸ್ಥಿತಿ, ಪುರಜನರ ಗೋಳು ಇವನ್ನು ಕಂಡು ನಮ್ಮ ಕಣ್ಣೀರು ಧಾರೆಧಾರೆಯಾಗಿ ಹರಿಯುತ್ತವೆ. ನಸುನನೆಯುನಕ್ಕಿದಳಿಕುಳದಂತಾದ ಪುರಜನರ ಸ್ಥಿತಿಯನ್ನಂತೂ ಬಣ್ಣಿಸಲು ಸಾಧ್ಯವೇ ಇಲ್ಲದಾಗಿದೆ. "ನೆರೆ ನಿನ್ನ

ನಂಬಿ ನಚ್ಚಿರ್ದ ಪರಿವಾರಮಂ ಮರೆದೆಯೋ, ತೊರೆದೆಯೋ, ಮಾರಿದೆಯೋ" ಎಂದು ಗೋಳಿಡುವ ಗೋಳು ಎಂತಹ ಕಿವಿಯನ್ನಾದರೂ ಪ್ರವೇಶಿಸಬಲ್ಲದು. 'ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ ; ಪರಿಜನದ ಭಾಗ್ಯವಡವಿಗೆ ನಡೆಯುತಿದೆ' ಎಂದು ಗೋಳಿಡುವ ಪುರಜನರೊಡನೆ ನಾವೂ ಗೋಳಿಡುತ್ತೇವೆ. ಹೀಗೆ ಕಥೆ ಮುಂದುವರಿದಂತೆಲ್ಲ ಹರಿಶ್ಚಂದ್ರ ಕಾವ್ಯದ ಕರುಣರಸದ ಮಡು ಆಳವಾಗುತ್ತದೆ. ಭೋರ್ಗರೆವ ಪ್ರವಾಹವೂ ಆಗುತ್ತದೆ.

ಮುಂದೆ ಹರಿಶ್ಚಂದ್ರನು ಸತಿಸುತರನು ಮಾರಿಕೊಂಡು ತಾನೂ ಹೊಲೆಯನಿಗಾಳಾಗುವ ದೃಶ್ಯವಂತೂ ಎಲ್ಲರ ಕರುಣೆಯನ್ನು ಸೆಳೆಯುತ್ತದೆ. ಅಲ್ಲಿಯೂ ಕರುಣೆ ಅಧಿಕ ಸ್ಥಿತಿಯನ್ನು ಮುಟ್ಟುವುದು. ಮಗು ಹುಲ್ಲು ಕಟ್ಟಿಗೆ ತರಲು ಹೋದಾತನು ಇನ್ನೂ ಬರಲಿಲ್ಲವೆಂದು ಚಂದ್ರಮತಿಯು "ಅಡವಿಯೊಳು ಹೊಲಬುಗೆಟ್ಟನೊ..." ಎಂದು ತಾಯಿಗೆ ಸಹಜವಾದ ರೀತಿಯಲ್ಲಿ ಚಡಪಡಿಸುವಳು. "ಬಂದರಂ ಲೋಹಿತಾಶ್ವಾ ಎಂದು, ಬಟ್ಟೆಯೊಳು ನಿಂದರಂ ಲೋಹಿತಾಶ್ವಾ ಎಂದು, ಗಾಳಿ ಗಿರಿಕೆಂದಡಂ ಲೋಹಿತಾಶ್ವಾ" ಎಂದು ಕರೆಯುತ್ತ ಮಗನ ದಾರಿ ಕಾಯುವಳು. ಮಗನು ಸತ್ತನೆಂದು ತಿಳಿದ ಮೇಲೆ ಆ ತಾಯಿಗೊದಗಿದ ಸ್ಥಿತಿ ಜಗತ್ತಿನಲ್ಲಿ ಇನ್ನಾವ ವ್ಯಕ್ತಿಗೂ ಒದಗಿರಲಿಕ್ಕಿಲ್ಲವೆನಿಸುತ್ತದೆ. ಆಕೆ ಬಂದು ಒಡೆಯನಡಿಗಳ ಮೇಲೆ ಬಿದ್ದು ಬಾಯ್ಬಿಡುತ "ಅರಣ್ಯದೊಳೆನ್ನ ಮಗನುಗ್ರಕಾಳೋರಗಂ ಕಚ್ಚಿ ಮಡಿದನೆಂ"ದು ಪ್ರಾರ್ಥಿಸಿದರೆ, ಆ ವಿಪ್ರನು "ಲೇಸಾಯ್ತು, ಮಡಿದರೆ ಮಡಿದನು" ಎಂದು ನುಡಿಯುವನು. ಈ ಮಾತನ್ನು ಕೇಳಿದಾಗ ಆ ತಾಯಿಯ ಹೃದಯಕ್ಕಾದ ನೋವನ್ನು ನೆನೆಯಲು ಸಾಧ್ಯವಿದೆಯೆ? "ಬಂಟರನು ಕೊಟ್ಟರಸಿಸ್ಯೆ ತಂದೆ" ಎನೆ, "ನಡುವಿರುಳು ಬಂಟರುಂಟೆ? ನಿದ್ದೆ ಗೆಯ್ಯಬೇಕೇಳು ಕಾಡದಿರು" ಎಂದು ಬೆದರಿಸುವನು. "ನರಿಗಳೆಳೆಯದ ಮುನ್ನ ದಹಿಸಬೇಡವೆ ತಂದೆ ಕರುಣಿಸು" ಎಂದಾಗ "ದುರ್ಮರಣವಟ್ಟ ಶೂದ್ರನನು ಸಂಸ್ಕರಿಸುವವರಾವಲ್ಲ"ವೆನ್ನುವನು. "ಆನಾದೊಡಂ ಹೋಗಿ ಕಂಡು ಮಗನ ಉರಿಗಿತ್ತು ಬಪ್ಪೆನೇ" ಎನೆ, "ಕೆಲಸಮಂ ಬಿಟ್ಟು ಹರಿಯದೆ ಇರ್ದುದನೆಯ್ದೆ ಗೆಯ್ದು ಹೋಗು" ಎನ್ನುವನು. ಆ ತಾಯಿ ಚಚ್ಚರದಿ ಮಾಡಿ ಹೋಗುವಳು. ಮಗು ಸತ್ತಾಗ ಜೀವನ್ಮೃತಳಾದ ಚಂದ್ರಮತಿಯ ಗೋಳನ್ನು ಬಣ್ಣಿಸುವುದು ಅದಾರಿಗೆ ತಾನೆ ಸಾಧ್ಯ? ಆಕೆಯ ಮೌನದಲ್ಲಿ ವಿಶ್ವದ ಕರುಣೆಯಡಗಿದೆ. ಅಡವಿಗೆ ಬಂದು "ಹಡೆದೊಡಲು ಹುಡಿಯಾಯ್ತು ಮಗನೆ!.... ...ತರಳ! ಸಿರಿ ಹೋದ ಮರುಕವನು ನೆಲೆಗೆಟ್ಟ ಚಿಂತೆಯನು...ಎಲ್ಲವನು ನಿನ್ನಂ ನೋಡಿ ಮರೆತಿರ್ದೆನು. ಅತಿಲಜ್ಜೆಗೆಟ್ಟನ್ಯರಾಳಾಗಿ ಧನವನಾರ್ಜಿಸಿ ಭೂಪತಿಯುಂ ಬಂದು ಕೇಳಿದರೆ ಆವುದ ತೋರಿ ಮರುಕವನು ಮರೆಯಿಸುವೆನು; ಉಗ್ರಾಹಿಗಾಹುತಿಯಾದನೆನ್ನಲೇ?" ಎಂದು ಭೋರ್ಗರೆಯುವಳು. "ಸಾವಾಗವ್ವಾ ಎಂದಳಲೆದೆಯಾ" ಎಂದು ಒಂದೇ ಸಮನೆ ತಾಯಿ ಹಲುಬುವಳು. ಅಲ್ಲಿಯ ಹೃದಯ ನಿಜವಾಗಿಯೂ ತಾಯಿಯ ಹೃದಯ. ಕರುಣೆ ಇದಕ್ಕಿಂತ ಅಧಿಕವಾಗಿ ಬರಲು ಸಾಧ್ಯವೇ ಇಲ್ಲವೆಂಬಂತೆ ಕವಿ ಅದನ್ನು ನಿರೂಪಿಸಿದ್ದಾನೆ. ಶವಕ್ಕೆ ಸಂಸ್ಕಾರ

ಮಾಡಲು ಚಂದ್ರಮತಿ ಕಟ್ಟಿಗೆಯನ್ನು ಸಿದ್ಧಮಾಡಿದಾಗ ಹರಿಶ್ಚಂದ್ರನು ಗರ್ಜಿಸುತ್ತ ಬಂದು ಮುಟ್ಟಿಗೆಯ ಮೇಲಿರ್ದ ಸುತನ ಹಿಂಗಾಲ್ವಿಡಿದು ಸೆಳೆದು ಬಿಸುಡುವನು. 'ಬಿಸುಟದಿರು, ಬಿಸುಟದಿರು ಹಸುಳೆ ನೊಂದಿಹನು. ನನ್ನ ಮಗನಲ್ಲ, ನಿನ್ನ ಶಿಶುವಿನೋಪಾದಿ' ಎಂದು ತಾಯಿ ಬಿನ್ನೈಸಿಕೊಳ್ಳುವಾಗ ಕರುಣೆಯ ಸಾಗರವೇ ಉಕ್ಕಿಬಂದಂತಾಗುತ್ತದೆ. ಅದರಲ್ಲಿ ನಾವೆಲ್ಲ ಮುಳುಗಿಹೋಗುತ್ತೇವೆ. ಕೊನೆಗೆ ಹರಿಶ್ಚಂದ್ರನಂತಹ ಧೈರ್ಯನಿಧಿಯು ಎದೆ ಬಿರಿದು 'ಮುಂದೆ ನೀನಾಳಲಿಹ ಧರೆಯನನ್ಯರಿಗಿತ್ತನೆಂದು ನುಡಿಸೆಯೋ' ಎಂದು, 'ಮತ್ತದಲ್ಲ ದೆಮ್ಮಿಬ್ಬರಂ ತಂದು ಲೋಗರಿಗೆ ಮಾರಿದನೆಂದು ನುಡಿಸೆಯೋ' ಎಂದು ಒರಲಿ ಬಾಯ್ಬಿಡು ವಾಗ ಧರೆ ನಡುಗಿ ಹೋಗುತ್ತದೆ. ಕೊನೆಗೆ ನಿರಪರಾಧಿಯಾದ ಚಂದ್ರಮತಿಯ ಮೇಲೆ ಕಾಶೀರಾಜನ ಮಗನನ್ನು ಕೊಂದ ಅಪರಾಧ ಬಂದು. ಇನ್ನು ಮರಣವೇ ಕೊನೆಯ ಹಾದಿಯೆಂದು ಆಕೆ ಎಲ್ಲವನ್ನೂ ಒಪ್ಪುವಳು. ತಲೆಹೊಡಿಸಿರೆಂದು ದೊರೆ ಆಜ್ಞೆ ಹೊರಡಿಸಿದಾಗ ಹರಿಶ್ಚಂದ್ರನೇ ಆ ಕಾರ್ಯ ಮಾಡಬೇಕಾಗುವುದು.

ಹೀಗೆ ಹರಿಶ್ಚಂದ್ರಕಾವ್ಯವು ಕಂಬನಿಯ ಕಾಲುವೆಯಾಗಿದೆ. ಆ ರಸದ ಮಡುವಿನಲ್ಲಿ ಈಸುವಾಗ ವ್ಯಷ್ಟಿ ಸಮಷ್ಟಿಶಕ್ತಿಗಳ ಹೋರಾಟದ ಕಲ್ಪನೆಯಾಗುತ್ತದೆ. ದೈವೀಶಕ್ತಿಯ ಎದುರು ವ್ಯಕ್ತಿ ಅಸಹಾಯನಾಗಿರುವನೆಂದು ಕನಿಕರಪಡುತ್ತೇವೆ. ಹರಿಶ್ಚಂದ್ರನಿಗೆ ಬಂದೊ ದಗುವ ಕಷ್ಟಪರಂಪರೆ ನಮ್ಮ ಹೃದಯವನ್ನು ಜಗ್ಗಿಜಗ್ಗಿ ನೀರುನೀರು ಮಾಡಿಬಿಡುತ್ತದೆ. ಅದನ್ನು ಎದುರಿಸುವ ಹರಿಶ್ಚಂದ್ರನ ಸತ್ಯ, ಧೈರ್ಯ, ಸ್ಥೈರ್ಯಗಳನ್ನು ಕಂಡು ಮಾನವನಲ್ಲಿ ಇಂತಹ ಬೀಕರ ದೈವೀಶಕ್ತಿಯನ್ನು ಎದುರಿಸಿ ವಿಜಯಿಯಾಗುವ ಸಾಮರ್ಥ್ಯವಿದೆಯೆಂದು ಸಮಾಧಾನವೆನಿಸುತ್ತದೆ. ಈ ಅರಿವಿನಿಂದ ಆತ್ಮೋದ್ಧಾರವಾಗುತ್ತದೆ. ಹೃದಯದ ಕಶ್ಮಲ ಕರಗಿ ದಿವ್ಯಸಾಕ್ಷಾತ್ಕಾರವಾದಂತಾಗುತ್ತದೆ.

ಹರಿಶ್ಚಂದ್ರಕಾವ್ಯವು ಸಾವಿರಾರು ಜನರ ಹೃದಯವನ್ನು ಸೆಳೆದಿರುವುದು ಈ ಕರುಣಾರಸದ ಮೂಲಕವಾಗಿಯೆಂದು ನಿಸ್ಸಂದೇಹವಾಗಿ ಹೇಳಬಹುದು. ಉಳಿದ ರಸಗಳ ನಿರೂಪಣೆಯಲ್ಲಿ ಯಾವ ಕಡೆಯಾದರೂ ಸ್ವಲ್ಪ ಹೆಚ್ಚು ಕಡಿಮೆ ಕೃತ್ರಿಮತೆಗೆ ಕೈಹಾಕಬೇಕಾಗುತ್ತದೆ. ಆದ ಕರುಣೆಯಲ್ಲಿ ಕೃತ್ರಿಮತೆಗೆ ಎಡೆಯೇ ಇಲ್ಲದಾಗುತ್ತದೆ. ಅದರಲ್ಲಿಯೂ ರಾಘವಾಂಕನಂತಹ ಮಹಾಕವಿಯ ಕೈಯಲ್ಲಿ ಕರುಣರಸಪ್ರಧಾನವಾದ ಇಂತಹ ವಸ್ತು ಸಿಕ್ಕಾಗ ಅದರ ಸಾರ್ಥಕ ಯಾಗಿರುವುದು ಸ್ವಾಭಾವಿಕವಾಗಿದೆ. ಶೋಕದಲ್ಲಿ ಎಂತಹ ಶಕ್ತಿಯಿದೆಯೆಂಬುದನ್ನು ಆ ಕಾವ್ಯವ ನ್ನೋದಿ ಅರಿತುಕೊಳ್ಳಬೇಕು. ಹೃದಯದ ಅಂತರಾಳದಿಂದ ಈ ಭಾವನೆಗಳು ಗಗನದವರೆ ನೆಗೆದಂತಾಗುತ್ತವೆ. ಕನ್ನಡದಲ್ಲಿ ಕರುಣರಸವಿಲ್ಲದ ಕಾವ್ಯವಿಲ್ಲ. ಆದರೆ ಈ ದಿಶೆಯಲ್ಲಿ ಹರಿಶ್ಚಂದ್ರ ಕಾವ್ಯವು ಏಕಮೇವಾದ್ವಿತೀಯವಾಗಿದೆ ಎಂದು ಹೇಳಬಹುದು. ಪಂಪನಿಂದ ಷಡಕ್ಷರದೇವನ ವರೆಗಿನ ಯಾವ ಕಾವ್ಯ ತೆಗೆದುಕೊಂಡು ತೂಗಿ ನೋಡಿದರೂ ಅದು ಕರುಣರಸದಲ್ಲಿ ಈ ಕಾವ್ಯಕ್ಕೆ ಸರಿಯಾಗಲಾರದೆಂದೆನಿಸುತ್ತದೆ. ಇದಕ್ಕೆ ಕಥಾವಸ್ತುವು ಕರುಣಾರ

ಪ್ರಧಾನವಾಗಿರುವುದೂ ಕೆಲಮಟ್ಟಿಗೆ ಕಾರಣವಾಗಿದೆ. ವೀಕ್ಷ ರಸಾನುಭೂತಿಯಲ್ಲಿ ಮಾನವನಿಗೆ ಕಲ್ಪನಾ ಸಾಮ್ರಾಜ್ಯದಲ್ಲಿ ನಿಂತಿರುವೆನೆಂದೆನಿಸಿದರೆ ಕರುಣರಸಾನುಭೂತಿಯಲ್ಲಿ ಇಲ್ಲಿಯೇ ಇದ್ದಂತೆ ಭಾಸವಾಗುತ್ತದೆ.

## ಟಿಪ್ಪಣಿ

ಕೃತಿ ಮತ್ತು ಕರ್ತೃ :

ಈ ಗದ್ಯಭಾಗವನ್ನು ಡಾ॥ ಆರ್. ಸಿ. ಹಿರೇಮಠ ಅವರ "ಮಹಾಕವಿ ರಾಘವಾಂಕ" ಎಂಬ ವಿಮರ್ಶನ ಗ್ರಂಥದಿಂದ ಆರಿಸಿಕೊಳ್ಳಲಾಗಿದೆ.

ರಾಘವಾಂಕ ೧೩ನೇ ಶತಮಾನದಲ್ಲಿದ್ದ ಕವಿ. ಆತ ಹರಿಹರನ ಶಿಷ್ಯನೂ, ಸೋದರಳಿಯನೂ ಆಗಿದ್ದನು. 'ಹರಿಶ್ಚಂದ್ರಕಾವ್ಯ', 'ಸಿದ್ಧರಾಮಚಾರಿತ್ರ್ಯ' ಮೊದಲಾದವು ಆತನ ಗ್ರಂಥಗಳು. ಆತ ಷಟ್ಪದಿಕಾವ್ಯ ಪರಂಪರೆಯ ಪ್ರವರ್ತನಕಾರ. ಆತನ ಕಾವ್ಯಗಳಲ್ಲಿ, 'ಹರಿಶ್ಚಂದ್ರ ಕಾವ್ಯ' ಶ್ರೇಷ್ಠವಾದುದು. ಹೀಗೆ ಪ್ರಸಿದ್ಧನಾಗಿರುವ ರಾಘವಾಂಕನನ್ನು ಕುರಿತು 'ಮಹಾಕವಿ ರಾಘವಾಂಕ' ಎಂಬ ವಿಮರ್ಶನ ಗ್ರಂಥವನ್ನು ಬರೆದವರು ಡಾ॥ ಆರ್. ಸಿ. ಹಿರೇಮಠ ಅವರು.

ಡಾ॥ ಆರ್. ಸಿ. ಹಿರೇಮಠರು ೧೯೨೦ರಲ್ಲಿ ಧಾರವಾಡದಲ್ಲಿ ಹುಟ್ಟಿದರು. ಮುಂಬೈ ವಿಶ್ವವಿದ್ಯಾನಿಲಯದಲ್ಲಿ ಪ್ರಥಮ ದರ್ಜೆಯಲ್ಲಿ ಎಂ. ಎ. ಪದವಿ ಪಡೆದ ಮೇಲೆ ಬಾಗಲಕೋಟೆ ಬಸವೇಶ್ವರ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇರಿದರು. ಅನಂತರ ಕರ್ಣಾಟಕ ವಿಶ್ವವಿದ್ಯಾ ನಿಲಯದಲ್ಲಿ ರೀಡರ್ ಆದರು. ಈಗ ಅದೇ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದಾರೆ. ಇವರಿಗೆ ದ್ರಾವಿಡ-ಆರ್ಯ ಭಾಷೆಗಳ ಸಂಬಂಧವನ್ನು ಕುರಿತ ಸಂಶೋಧನೆಗೆ ಡಾಕ್ಟರೇಟ್ ಪ್ರಶಸ್ತಿ ದೊರೆತಿದೆ. ಭಾಷಾವಿಜ್ಞಾನದ ಹೆಚ್ಚಿನ ಶಿಕ್ಷಣಕ್ಕೆ ಅಮೆರಿಕೆಗೂ ಹೋಗಿ ಬಂದರು. ರಾಕ್‌ಫೆಲರ್ ಪ್ರತಿಷ್ಠಾನದ ಶಿಷ್ಯವೇತನವನ್ನು ಪಡೆದವರಲ್ಲಿ ಇವರೂ ಒಬ್ಬರು. ಕರ್ಣಾಟಕ ವಿಶ್ವವಿದ್ಯಾನಿಲಯ ಕೈಗೊಂಡಿರುವ ವಚನ ವಾಙ್ಮಯ ಸಂಶೋಧನೆಯ ಪ್ರಧಾನ ಸಂಪಾದಕರಾಗಿದ್ದಾರೆ. ಹಿರೇಮಠರು ಐವತ್ತಕ್ಕೂ ಹೆಚ್ಚು ಗ್ರಂಥ ಗಳನ್ನು ಪ್ರಕಟಿಸಿದ್ದಾರೆ. ಕಾವ್ಯ, ನಾಟಕ, ವಿಮರ್ಶೆ, ಸಂಶೋಧನೆ, ಗ್ರಂಥಸಂಪಾದನೆ, ಅನುವಾದ ಇವು ಅವರ ಕಾರ್ಯಕ್ಷೇತ್ರಗಳು. ಸುಮಾಂಜಲಿ, ಮೌನಸ್ಪಂದನ—ಅವರ ಕವನ ಸಂಕಲನಗಳು ; ಹರಿಶ್ಚಂದ್ರನಾಟಕಂ ಅವರ ನಾಟಕಕೃತಿ ; ಮಹಾಕವಿ ರಾಘವಾಂಕ, ಸಾಹಿತ್ಯ ಸಮೃಷ್ಟಿ, ಷಟ್‌ಸ್ಥಲಪ್ರಭೆ—ಇವು ಅವರ ಸಂಶೋಧನ ವಿಮರ್ಶನ ಗ್ರಂಥಗಳು, ಪದ್ಮರಾಜ ಪುರಾಣ, ತ್ರಿಷಷ್ಟಿ ಪುರಾತನಚರಿತ್ರಂ, ರಾಜಶೇಖರವಿಳಾಸ, ಬಸವಣ್ಣನವರ ವಚನಗಳು, ಚನ್ನಬಸವಣ್ಣನವರ ವಚನಗಳು, ಬಸವರಾಜವಿಜಯ—ಮೊದಲಾದುವು ಅವರ ಸಂಪಾದಿತ ಕೃತಿಗಳು. ಉತ್ತರ ಕರ್ಣಾಟಕದ ಆಡುನುಡಿಯನ್ನು ಕುರಿತು ಇಂಗ್ಲಿಷಿನಲ್ಲಿ ಗ್ರಂಥವೊಂದನ್ನು ರಚಿಸಿದ್ದಾರೆ.

ಪ್ರಕೃತ ಗದ್ಯಭಾಗದಲ್ಲಿ ಹರಿಶ್ಚಂದ್ರಕಾವ್ಯದ ಸಾರಾಂಶವಿದೆ. ಹರಿಶ್ಚಂದ್ರನನ್ನು ನೆನೆದಾಗಲೆಲ್ಲ ಸತ್ಯ ನೆನಪಾಗುತ್ತದೆ. ಸತ್ಯಕ್ಕಾಗಿ ರಾಜ್ಯವನ್ನೂ, ಸತಿಸುತರನ್ನೂ, ಕಡೆಗೆ ತನ್ನನ್ನೆ ಕೊಟ್ಟುಕೊಂಡವನು ಹರಿಶ್ಚಂದ್ರ. ಸತ್ಯ ಒಂದು ಆದರ್ಶ ನಿಜ. ಆದರೆ ಅದು ಇಂಥ ವ್ಯಕ್ತಿಗಳ ಮೂಲಕ ಚಲಾವಣೆಗೆ ಬರಬೇಕಾಗುತ್ತದೆ. ವಿಶ್ವಾಮಿತ್ರ ಹರಿಶ್ಚಂದ್ರನನ್ನು ಪರೀಕ್ಷೆಗೆ ಒಡ್ಡುತ್ತಾನೆ. ಹೊಲತಿಯರನ್ನು ನಿರ್ಮಿಸಿ ಹರಿಶ್ಚಂದ್ರನ ಹತ್ತಿರ ಕಳಿಸುತ್ತಾನೆ. ಮಾತಿಗೆ ಸಿಕ್ಕಿಸಿ ರಾಜ್ಯವನ್ನು ಕಸಿದುಕೊಳ್ಳುತ್ತಾನೆ. ಹರಿಶ್ಚಂದ್ರ ಸತಿಸುತರೊಡನೆ ಕಾಡಿಗೆ ಹೊರಡುತ್ತಾನೆ. ಅಲ್ಲಿಯೂ ಹೆಂಡತಿ ಮಗುವನ್ನು ಮಾರಿ, ತಾನು ಶ್ಮಶಾನದ ಕಾವಲುಗಾರನಾಗಬೇಕಾದ ದುರ್ಧರ ಪ್ರಸಂಗ ಒದಗುತ್ತದೆ. ಮಗ ಲೋಹಿತಾಶ್ವ ಹಾವು ಕಡಿದು ಸತ್ತಾಗ ಚಿತೆಗಿಡಲು ಬಂದ ಚಂದ್ರಮತಿ ಆಪಾದನೆಗೆ ಒಳಗಾಗುತ್ತಾಳೆ. ಕಡೆಗೆ ಹರಿಶ್ಚಂದ್ರನೇ ತನ್ನ ಸತಿಯ ತಲೆಯನ್ನು ಕಡಿಯಬೇಕಾದ ಇಕ್ಕಟ್ಟಿನ ಪ್ರಸಂಗ ಬರುತ್ತದೆ. ಚಂದ್ರಮತಿಯ ಪ್ರಲಾಪವಂತೂ ಕರುಳನ್ನು ಕತ್ತರಿಸುತ್ತದೆ. ಇದರಲ್ಲಿ ಉದ್ದಕ್ಕೂ ಕರುಣರಸದ ಹೊಳೆ ಹರಿದಿದೆ. ಇದೆಲ್ಲದರ ಸಂಕ್ಷಿಪ್ತವಾದ, ಸಾರವತ್ತಾದ ಚಿತ್ರವನ್ನು ಲೇಖಕರು ಇಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ.

ಕಠಿಣ ಪದಗಳ ಅರ್ಥ :

ಸತ್ತಿಗೆ–ಛತ್ರಿ. ಚಮ್ಮಟಿಗೆ–ಬಾರುಕೋಲು. ವಡವಾಗ್ನಿ–ಸಮುದ್ರದಲ್ಲಿರುವ ಬೆಂಕಿ. ಹಡೆದೆಂ–ಪಡೆದೆನು. ತೊಡಿಗೆ–ಉಡುವ ಬಟ್ಟೆ. ಅಂಬರ–ಬಟ್ಟೆ. ನಸು–ಸ್ವಲ್ಪ. ನನೆ–ಮೊಗ್ಗು. ಅಳಿಕುಳ–ದುಂಬಿಗಳ ಸಮೂಹ. ನೆರೆ–ಹೆಚ್ಚಾಗಿ, ಅತಿಶಯವಾಗಿ. ಹೊಲಬು–ದಾರಿ. ಬಟ್ಟೆ–ದಾರಿ. ಕಾಳೋರಗ–ಭಯಂಕರಸರ್ಪ, ಕೃಷ್ಣಸರ್ಪ. ಲೇಸು–ಒಳ್ಳೆಯದು. ಬಂಟ–ಸೇವಕ. ದಹಿಸು–ಸುಡು. ಎಯ್ದೆ–ಚೆನ್ನಾಗಿ. ಜಡ್ಡರ–ಬೇಗ. ಜೀವನ್ಮೃತ–ಬದುಕಿದ್ದರೂ ಸತ್ತಂತಿರುವ. ಉಗ್ರಾಹಿ–ಭಯಂಕರವಾದ ಹಾವು. ಮುಟ್ಟಗೆ–ಶ್ಮಶಾನದಲ್ಲಿ ಹಾಕಿದ ಸೌದೆಯ ಒಡ್ಡು. ಲೋಗರು–ಜನರು. ಕೃತ್ರಿಮ–ಕೃತಕ, ಅಸಹಜ.

ಪ್ರಶ್ನೆಗಳು :

೧. ಹರಿಶ್ಚಂದ್ರ ಕಾವ್ಯದಲ್ಲಿ ಕರುಣರಸವೇ ಪ್ರಧಾನ—ಹೇಗೆ ?

೨. ಚಂದ್ರಮತಿಯ ಪ್ರಲಾಪವನ್ನು ಕುರಿತು ಬರೆಯಿರಿ.

****

# ಮಹಾಕಾವ್ಯ

—ಟಿ. ಎಸ್. ವೆಂಕಣ್ಣಯ್ಯ

ಕಾವ್ಯಗಳನ್ನು ಸ್ಥೂಲವಾಗಿ ಎರಡು ಪಂಗಡ ಮಾಡಬಹುದು. ಕೆಲವು ಒಬ್ಬ ಕವಿಯ ಮಾತುಗಳು; ಮತ್ತೆ ಕೆಲವು ಒಂದು ದೊಡ್ಡ ಸಂಪ್ರದಾಯದ ಮಾತುಗಳು.

ಒಬ್ಬ ಕವಿಯ ಮಾತುಗಳೆಂದರೆ ಮತ್ತಾರಿಗೂ ತಿಳಿಯತಕ್ಕುವಲ್ಲವೆಂದು ಅರ್ಥವಲ್ಲ. ಹಾಗಾಗುವ ಪಕ್ಷಕ್ಕೆ ಆ ಕವಿಯನ್ನು ಹುಚ್ಚನೆನ್ನಬೇಕಾಗುತ್ತದೆ. ಆ ಮಾತಿನ ಅರ್ಥವಿಷ್ಟೇ— ಕವಿಗೆ ತನ್ನ ಸ್ವಂತ ಸುಖ, ದುಃಖ, ಕಲ್ಪನೆ, ಜೀವನದ ಅಭಿಜ್ಞತೆಗಳ ಮೂಲಕ ಮಾನವಜಾತಿಗೆ ಸಾಮಾನ್ಯವಾದ ಚಿರಂತನ ಹೃದಯಾವೇಗವನ್ನೂ, ಜೀವನದ ಮಾರ್ಮಿಕ ವಿಷಯಗಳನ್ನೂ ವ್ಯಕ್ತಪಡಿಸುವ ಶಕ್ತಿಯು ಇರುತ್ತದೆ.

ಈ ಪಂಗಡದ ಕವಿಗಳಿರುವಂತೆಯೇ ಮತ್ತೊಂದು ಪಂಗಡದ ಕವಿಗಳೂ ಇರುತ್ತಾರೆ. ಅವರ ಕಾವ್ಯಗಳ ಮುಖಾಂತರವಾಗಿ ಒಂದು ಸಮಗ್ರ ದೇಶವು ಅಥವಾ ಕಾಲವು ತನ್ನ ಹೃದಯವನ್ನೂ, ಅಭಿಜ್ಞತೆಯನ್ನೂ ವ್ಯಕ್ತಪಡಿಸಿ ಅದನ್ನು ಮಾನವನ ಶಾಶ್ವತ ಸಾಮಗ್ರಿಯನ್ನಾಗಿ ಮಾಡುತ್ತದೆ.

ಎರಡನೆಯ ಪಂಗಡದ ಕವಿಗೆ ಮಹಾಕವಿಯೆಂದು ಹೆಸರು. ಸಮಗ್ರದೇಶದ ಅಥವಾ ಜನಾಂಗದ ವಾಣಿಯು ಇವರನ್ನು ಆಶ್ರಯಿಸಬಲ್ಲದು. ಇವರು ರಚಿಸುವ ಕಾವ್ಯವು ಒಬ್ಬ ಮನುಷ್ಯನು ರಚಿಸಿದ್ದೆಂದು ಮನಸ್ಸಿಗೆ ತೋರುವುದಿಲ್ಲ. ಅದು ಒಂದು ಮಹಾವೃಕ್ಷದಂತೆ ದೇಶದ ಭೂಗರ್ಭದಿಂದ ಆವಿರ್ಭವಿಸಿ ಆ ದೇಶಕ್ಕೆ ಆಶ್ರಯಚ್ಛಾಯೆಯನ್ನು ದಾನಮಾಡುವಂತೆ ತೋರುತ್ತದೆ. ಶಾಕುಂತಳ, ಕುಮಾರಸಂಭವಗಳಲ್ಲಿ ಕಾಳಿದಾಸನ ಲೇಖನನೈಪುಣ್ಯದ ಪರಿಚಯವನ್ನು ಹೊಂದಬಹುದು. ಆದರೆ ರಾಮಾಯಣ-ಮಹಾಭಾರತಗಳು ಗಂಗಾ-ಹಿಮಾಲಯಗಳಂತೆ ಸಮಗ್ರ ಭರತಖಂಡದವುಗಳು; ವ್ಯಾಸವಾಲ್ಮೀಕಿಗಳು ಉಪಲಕ್ಷ್ಯ ಮಾತ್ರ.

ನಿಜವಾಗಿಯೂ ವ್ಯಾಸ ಅಥವಾ ವಾಲ್ಮೀಕಿ ಎಂಬುದು ಯಾರ ಹೆಸರೂ ಆಗಿರಲಿಲ್ಲ; ಅದು ಒಂದು ಉದ್ದೇಶದಿಂದ ಆದ ನಾಮಕರಣ ಮಾತ್ರ. ಈ ಎರಡು ಗ್ರಂಥಗಳೂ ಎಷ್ಟು ದೊಡ್ಡವು, ಮಹತ್ವವುಳ್ಳವುಗಳು ಎಂದರೆ, ಅವು ಸಮಗ್ರ ಭರತಖಂಡದೊಡನೆ ಒಂದಾಗಿ ತಮ್ಮನ್ನು ರಚಿಸಿದ ಕವಿಗಳ ಹೆಸರನ್ನು ಮರೆಸಿ ಕುಳಿತುಬಿಟ್ಟಿವೆ. ಕವಿಯು ಅಷ್ಟುಮಟ್ಟಿಗೆ ತನ್ನ ಕಾವ್ಯದ ಅಂತರಾಳದಲ್ಲಿ ಬಿದ್ದುಬಿಟ್ಟಿರುತ್ತಾನೆ.

ನಮ್ಮ ದೇಶಕ್ಕೆ ರಾಮಾಯಣ ಮಹಾಭಾರತಗಳು ಹೇಗೋ ಪ್ರಾಚೀನ ಗ್ರೀಸಿಗೆ "ಇಲಿಯಡ್" ಹಾಗೆ ಎಂದು ಹೇಳಬಹುದು. ಅದು ಸಮಗ್ರ ಗ್ರೀಸ್ ದೇಶದ ಹೃದಯ ಕಮಲದಲ್ಲಿ ಆವಿರ್ಭವಿಸಿ ಆ ಹೃದಯ ಕಮಲದಲ್ಲಿಯೇ ವಾಸಮಾಡಿತು. ಹೋಮರ್ ಕವಿಯು ತನ್ನ ದೇಶ ಕಾಲಗಳ ಕಂಠಕ್ಕೆ ಭಾಷೆಯನ್ನು ಒದಗಿಸಿಕೊಟ್ಟನು. ಆ ಕಾವ್ಯವು ಊಟೆಯಂತೆ ತನ್ನ ದೇಶದ ಅಂತಸ್ಥಲದಿಂದ ಹೊರಟು ಪ್ರವಹಿಸಿ ಬಹುಕಾಲದಿಂದಲೂ ಅದನ್ನು ಆರ್ದ್ರವಾಗಿ ಮಾಡಿರುತ್ತದೆ.

ಆಧುನಿಕ ಕಾಲದ ಯಾವ ಕಾವ್ಯದಲ್ಲಿಯೇ ಆಗಲಿ ಇಷ್ಟರಮಟ್ಟಿನ ವ್ಯಾಪಕತೆಯು ಕಂಡುಬರುವುದಿಲ್ಲ. ಮಿಲ್ಟನ್ ಕವಿಯ "ಪ್ಯಾರಡೈಸ್‌ಲಾಸ್ಟ್"ನಲ್ಲಿ ಭಾಷೆಯ ಗಾಂಭೀರ್ಯವೂ, ಛಂದಸ್ಸಿನ ಮಾಹಾತ್ಮ್ಯವೂ, ರಸದ ಗಂಭೀರತೆಯೂ ಬೇಕಾದಷ್ಟು ಇವೆ; ಆದರೆ ಅದು ದೇಶದ ಧನವಲ್ಲ. ಅದೇನಿದ್ದರೂ ಲೈಬ್ರರಿಯ ಆದರದ ಸಾಮಗ್ರಿ.

ಆದಕಾರಣ ಒಂದೆರಡು ಮಾತ್ರವೇ ಇರುವ ಪ್ರಾಚೀನ ಕಾವ್ಯಗಳನ್ನು ಒಟ್ಟುಗೂಡಿಸಿ ಅವೆಲ್ಲಕ್ಕೂ ಒಂದೇ ಹೆಸರನ್ನು ಕೊಡಬೇಕಾದರೆ ಮಹಾಕಾವ್ಯವೆಂಬುದನ್ನಲ್ಲದೆ ಮತ್ತಾವ ಹೆಸರನ್ನು ಕೊಡಬಹುದು ? ಅವು ಪ್ರಾಚೀನಕಾಲದ ದೇವ-ದಾನವರಂತೆ ದೊಡ್ಡ ಪರಿಮಾಣದ ದೇಹವುಳ್ಳವು. ಅವುಗಳ ಜಾತಿ ಈಗ ಲುಪ್ತವಾಗಿ ಹೋಗಿದೆ.

ಪ್ರಾಚೀನ ಆರ್ಯರ ನಾಗರೀಕತೆಯ ಒಂದು ಧಾರೆಯು ಯೂರೋಪಿನಲ್ಲಿಯೂ ಮತ್ತೊಂದು ಧಾರೆಯು ಭರತಖಂಡದಲ್ಲಿಯೂ ಪ್ರವಹಿಸಿತು. ಯೂರೋಪಿನ ಧಾರೆಯು ಎರಡು ಮಹಾಕಾವ್ಯಗಳಲ್ಲಿಯೂ, ಭರತಖಂಡದ ಧಾರೆಯು ಎರಡು ಮಹಾಕಾವ್ಯಗಳಲ್ಲಿಯೂ ತಮ್ಮ ಭಾಷೆಯನ್ನೂ, ಗಾನವನ್ನೂ ಸಂರಕ್ಷಿಸಿಕೊಂಡಿರುತ್ತವೆ.

ನಾವು ವಿದೇಶೀಯರು ; ಆದಕಾರಣ ಗ್ರೀಸ್ ದೇಶವು ತನ್ನ ಸ್ವರೂಪವನ್ನು ತನ್ನ ಎರಡು ಕಾವ್ಯಗಳಲ್ಲಿ ಸಂಪೂರ್ಣವಾಗಿ ಪ್ರಕಾಶಪಡಿಸಿರುವುದೋ ಇಲ್ಲವೋ ನಾವು ನಿಶ್ಚಿತವಾಗಿ ಹೇಳಲಾರೆವು. ಆದರೆ ಭರತಖಂಡವು ಮಾತ್ರ ತನ್ನ ಸ್ವರೂಪವನ್ನು ರಾಮಾಯಣ ಮಹಾಭಾರತಗಳಲ್ಲಿ ಸ್ವಲ್ಪವೂ ಬಿಡದಂತೆ ಪ್ರಕಾಶಿಸಿಕೊಂಡಿರುತ್ತದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಆದುದರಿಂದಲೇ ಶತಮಾನದ ಮೇಲೆ ಶತಮಾನವು ಕಳೆದುಹೋಗಿದ್ದರೂ ರಾಮಾಯಣ ಮಹಾಭಾರತಗಳ ಪ್ರವಾಹವು ನಮ್ಮ ದೇಶದಲ್ಲಿ ಇನ್ನೂ ಲೇಶವಾದರೂ ಶುಷ್ಕವಾಗಿಲ್ಲ. ಜನರು ಈಗಲೂ ನಿತ್ಯವೂ ಗ್ರಾಮಗ್ರಾಮದಲ್ಲಿಯೂ, ಮನೆಮನೆಯಲ್ಲಿಯೂ ಅವನ್ನು ಓದುತ್ತಾ ಇದ್ದಾರೆ. ಅಂಗಡಿಯ ಮಳಿಗೆಯಿಂದ ಹಿಡಿದು ಅರಮನೆಯವರೆಗೆ ಎಲ್ಲ ಕಡೆಯಲ್ಲಿಯೂ ಅವಕ್ಕೆ ಸಮಾನವಾದ ಆದರವು ದೊರೆಯುತ್ತಿದೆ. ಆ ಮಹಾಕವಿಗಳಿಬ್ಬರೂ ಧನ್ಯರು. ಅವರ ಹೆಸರು ಕಾಲದ ವಿಸ್ತಾರವಾದ ಪ್ರಾಂತರದಲ್ಲಿ ಕಣ್ಮರೆಯಾಗಿ ಹೋಗಿದೆ. ಆದರೆ ಅವರ ವಾಣಿಯು ಕೋಟ್ಯನುಕೋಟಿ ಸ್ತ್ರೀ ಪುರುಷರ ಮನೆಗಳ ಬಾಗಿಲುಗಳಲ್ಲಿ ಈಗಲೂ ಶಾಖೋಪ ಶಾಖೆಗಳಾಗಿ ಶಕ್ತಿ ಶಾಂತಿಗಳೊಡನೆ ಪ್ರವಹಿಸುತ್ತಿರುವುದು; ಮತ್ತು ಕಳೆದುಹೋಗಿರುವ ನೂರಾರು ಶತಮಾನಗಳ ಗೋಡುಮಣ್ಣನ್ನು ಒಂದೇ ಸಮನಾಗಿ ಎತ್ತಿಕೊಂಡು ಬಂದು ಭರತಖಂಡದ ಮನೋಭೂಮಿಯನ್ನು ಸಾರವತ್ತಾಗಿ ಮಾಡಿಟ್ಟಿರುವುದು.

ಈ ಸ್ಥಿತಿಯಲ್ಲಿ ರಾಮಾಯಣ ಮಹಾಭಾರತಗಳು ಕೇವಲ ಮಹಾಕಾವ್ಯವೆಂದು ಹೇಳಿದರೆ ಸಾಲದು; ಅವು ಇತಿಹಾಸವೂ ಆಗಿವೆ. ಆದರೆ ಅವು ಸಂಗತಿಗಳ ಇತಿಹಾಸವಲ್ಲ; ಏಕೆಂದರೆ ಅಂತಹ ಇತಿಹಾಸವು ಸಮಯವಿಶೇಷವನ್ನು ಅವಲಂಬಿಸುತ್ತದೆ. ರಾಮಾಯಣ ಮಹಾ ಭಾರತಗಳು ಭರತಖಂಡದ ಶಾಶ್ವತವಾದ ಇತಿಹಾಸಗಳು. ಮಿಕ್ಕ ಇತಿಹಾಸಗಳು ಕಾಲ ಕಾಲಕ್ಕೆ ಎಷ್ಟೋ ವ್ಯತ್ಯಸ್ತವಾಗುತ್ತವೆ; ಆದರೆ ಈ ಇತಿಹಾಸಕ್ಕೆ ಬದಲಾವಣೆಯೆಂಬುದೇ ಇಲ್ಲ. ಏಕೆಂದರೆ ಯಾವುದು ಭರತಖಂಡದ ಸಾಧನೆಯೋ, ಯಾವುದು ಅದರ ಆರಾಧನೆಯೋ, ಯಾವುದು ಅದರ ಸಂಕಲ್ಪವೋ ಅದರ ಇತಿಹಾಸವು ಈ ಎರಡು ದೊಡ್ಡ ಕಾವ್ಯಸೌಧಗಳಲ್ಲಿ ಚಿರಕಾಲದ ಸಿಂಹಾಸನದ ಮೇಲೆ ವಿರಾಜಿಸುತ್ತಿದೆ.

ಆದಕಾರಣ ರಾಮಾಯಣ ಮಹಾಭಾರತಗಳ ಸಮಾಲೋಚನೆಯು ಇತರ ಕಾವ್ಯಗಳ ಸಮಾಲೋಚನೆಯ ಆದರ್ಶದಿಂದ ಭಿನ್ನವಾದದ್ದು. ರಾಮನ ಚರಿತ್ರೆಯು ಉಚ್ಚವಾದದ್ದೇ, ನೀಚವಾದದ್ದೇ; ಲಕ್ಷ್ಮಣನ ಚರಿತ್ರೆಯನ್ನು ನಾವು ಒಪ್ಪುತ್ತೇವೆಯೇ, ಇಲ್ಲವೇ ಎಂಬ ಸಮಾಲೋಚನೆಯನ್ನು ಮಾತ್ರವೇ ಮಾಡಿದರೆ ಸಾಲದು; ಸಮಗ್ರ ಭರತಖಂಡವು ಸಾವಿರಾರು ವರ್ಷಗಳಿಂದಲೂ ಈ ಕಾವ್ಯಗಳನ್ನು ಹೇಗೆ ಗ್ರಹಿಸಿರುತ್ತದೆ ಎಂಬುದನ್ನು ನಾವು ಸ್ತಬ್ಧರಾಗಿಯೂ, ಶ್ರದ್ಧಾಳುಗಳಾಗಿಯೂ ವಿಚಾರ ಮಾಡಬೇಕಾಗುತ್ತದೆ.

## ಟಿಪ್ಪಣಿ

ಕೃತಿ ಮತ್ತು ಕರ್ತೃ :

ಚಿತ್ರದುರ್ಗ ಜಿಲ್ಲೆಯ ತಳುಕು ಎಂಬ ಗ್ರಾಮದಲ್ಲಿದ್ದ ಬಡಕುಟುಂಬವೊಂದರಲ್ಲಿ ಜನಿಸಿದ ತಳುಕಿನ ಸುಬ್ಬಣ್ಣ ವೆಂಕಣ್ಣಯ್ಯನವರು ಮದರಾಸು ವಿಶ್ವವಿದ್ಯಾನಿಲಯದ ಪದವೀಧರರಾಗಿ, ವಿದ್ಯಾಭ್ಯಾಸ ಇಲಾಖೆಯಲ್ಲಿ ಅಧ್ಯಾಪಕವೃತ್ತಿಯನ್ನು ಕೈಗೊಂಡು, ಕನ್ನಡ ಎಂ.ಎ. ಪರೀಕ್ಷೆಯಲ್ಲಿ

ಉತ್ತೀರ್ಣರಾಗಿ. ಬೆಂಗಳೂರು ಸೆಂಟ್ರಲ್ ಕಾಲೇಜಿನ ಕನ್ನಡ ಅಧ್ಯಾಪಕರಾಗಿ, ಉಪಪ್ರಾಧ್ಯಾಪಕರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಮೊಟ್ಟ ಮೊದಲ ಕನ್ನಡ ಪ್ರಾಧ್ಯಾಪಕರಾದವರು. ಕನ್ನಡದ ಏಳಿಗೆಗಾಗಿ ಅವಿಶ್ರಾಂತವಾಗಿ ಹಗಲಿರುಳೂ ದುಡಿದ ಇವರು ಕನ್ನಡ ಇಂಗ್ಲೀಷ್ ಭಾಷಾ ಸಾಹಿತ್ಯಗಳ ವಿಪುಲ ವ್ಯಾಸಂಗದ ಜೊತೆಗೆ ತೆಲುಗು, ಬಂಗಾಳಿ ಭಾಷೆಗಳ ಆಳವಾದ ಜ್ಞಾನವನ್ನು ಸಂಪಾದಿಸಿದ್ದರು. ಇವರು 'ಶ್ರೀರಾಮಕೃಷ್ಣಪರಮಹಂಸ'ರ ಜೀವನಚರಿತ್ರೆಯನ್ನೂ; 'ಬಸವರಾಜದೇವರ ರಗಳೆ'. 'ಹರಿಶ್ಚಂದ್ರಕಾವ್ಯಸಂಗ್ರಹ'. 'ಕಾದಂಬರಿ ಸಂಗ್ರಹ' ಎಂಬ ಕಾವ್ಯಸಂಗ್ರಹಗಳನ್ನೂ ಬರೆದಿರುವುದಲ್ಲದೆ, ರವೀಂದ್ರನಾಥ ಠಾಕೂರರು ಬರೆದಿರುವ ಹಲವು ಸಾಹಿತ್ಯ ವಿಷಯಕ ಲೇಖನಗಳನ್ನೂ ಕನ್ನಡಿಸಿ 'ಪ್ರಾಚೀನಸಾಹಿತ್ಯ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ವಿಶ್ವವಿದ್ಯಾನಿಲಯದ 'ಕನ್ನಡಕೈಪಿಡಿ'ಗೆ ಹಳಗನ್ನಡ ವ್ಯಾಕರಣ ಮತ್ತು ಭಾಷಾಚರಿತ್ರೆಯ ಭಾಗವನ್ನು ಬರೆದಿದ್ದಾರೆ. ಪಂಪ ಮತ್ತು ಕುಮಾರವ್ಯಾಸ ಭಾರತದ ಸಂಪಾದನಾ ಕಾರ್ಯದಲ್ಲಿ ಪ್ರಮುಖಪಾತ್ರ ವಹಿಸಿದ್ದಾರೆ. ರಾಘವಾಂಕನ 'ಸಿದ್ಧರಾಮ ಪುರಾಣ'ವನ್ನು ಶೋಧಿಸಿ ಸಂಪಾದಿಸಿದ್ದಾರೆ. ಶ್ರೀ ರಾಮಕೃಷ್ಣಲೀಲಾ ಪ್ರಸಂಗದ ಒಂದು ಭಾಗವನ್ನು ಬಂಗಾಳಿಯಿಂದ ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಸಾಹಿತ್ಯಚರಿತ್ರೆಯ ಮೇಲೆ ಅನೇಕ ಲೇಖನಗಳನ್ನೂ ಬರೆದಿದ್ದಾರೆ. ಇಲ್ಲಿನ ಪಠ್ಯಭಾಗವನ್ನು ಅವರ 'ಪ್ರಾಚೀನ ಸಾಹಿತ್ಯ'ದ ಮೊದಲನೆಯ ಪ್ರಬಂಧವಾದ 'ರಾಮಾಯಣ'ದಿಂದ ಆಯ್ದುಕೊಳ್ಳಲಾಗಿದೆ. ರವೀಂದ್ರನಾಥ ಠಾಕೂರರ ರಸವಿಮರ್ಶನ ಶಕ್ತಿಯ ರುಚಿಯನ್ನು ನಾವು ಇಲ್ಲಿ ಆಸ್ವಾದಿಸಬಹುದು.

## ಕಠಿಣ ಪದಗಳ ಅರ್ಥ :

ಪಂಗಡ—ಗುಂಪು. ಅಭಿಜ್ಞತೆ—ಜ್ಞಾನ. ಚಿರಂತನ—ಶಾಶ್ವತವಾದ. ಹೃದಯಾವೇಗ—ಹೃದಯ+ಆವೇಗ (ಸ.ದೀ.ಸಂ.) ಮನಸ್ಸಿನ ತೀವ್ರತೆ. ಮಾರ್ಮಿಕ—ರಹಸ್ಯವಾದ. ಸಮಗ್ರ—ಸಂಪೂರ್ಣ, ಅಖಂಡ. ಭೂಗರ್ಭ—ಭೂಮಿಯ ಒಳಭಾಗ. ಛಾಯೆ—ನೆರಳು. ಆವಿರ್ಭವಿಸು—ಜನ್ಮತಾಳು, ಹುಟ್ಟು. ನೈಪುಣ್ಯ—ಜಾಣ್ಮೆ. ಉಪಲಕ್ಷ್ಯ—ಗುರುತು.

ವ್ಯಾಸ :—ಇವನಿಗೆ ಕೃಷ್ಣದ್ವೈಪಾಯನನೆಂದು ಹೆಸರು. ಇವನು ವೇದಗಳನ್ನು ವಿಭಾಗ ಮಾಡಿದುದರಿಂದ ವ್ಯಾಸನೆಂದು ಹೆಸರಾಯಿತು. ಸಂಸ್ಕೃತದಲ್ಲಿ ಮಹಾಭಾರತವನ್ನು ಬರೆದಿದ್ದಾನೆ. ಎಲ್ಲ ಪುರಾಣ ಮತ್ತು ಉಪಪುರಾಣಗಳು ಇವನಿಂದ ರಚಿಸಲ್ಪಟ್ಟವೆಯೆಂದು ಹೇಳುತ್ತಾರೆ.

ವಾಲ್ಮೀಕಿ :—ಪ್ರಾಚೇತಸ ಎಂಬ ಬೇಡರವನು ದರೋಡೆಯಿಂದ ಜೀವಿಸುತ್ತಿದ್ದನು. ಒಮ್ಮೆ ನಾರದನು ಇವನಿಗೆ ರಾಮಮಂತ್ರವನ್ನು ಉಪದೇಶಮಾಡಿದನು. ರಾಮಧ್ಯಾನದಲ್ಲಿ ಕುಳಿತಿರಲು ಅವನ ಮೇಲೆ ಹುತ್ತ ಬೆಳೆಯಿತು. ಸಂಸ್ಕೃತದಲ್ಲಿ ಹುತ್ತಕ್ಕೆ ವಲ್ಮೀಕವೆಂದು

ಹೆಸರು. ಇವನು ವಲ್ಮೀಕದಲ್ಲಿದ್ದುದರಿಂದ ಇವನಿಗೆ ವಾಲ್ಮೀಕಿಯೆಂದು ಹೆಸರಾಯಿತು. ಇವನು ಶ್ರೀಮದ್ರಾಮಾಯಣವನ್ನು ಬರೆದಿದ್ದಾನೆ.

ಇಲಿಯಡ್ :—ಇದು ಗ್ರೀಕ್ ಭಾಷೆಯ ಮಹಾಕಾವ್ಯ. ಇದನ್ನು ಹೋಮರ್ ಎಂಬ ಕವಿಯು ಬರೆದಿದ್ದಾನೆ.

ಮಿಲ್ಟನ್ :—ಇಂಗ್ಲೀಷ್ ಕವಿಗಳಲ್ಲಿ ಅತ್ಯಂತ ಪ್ರಮುಖನಾಗಿರುವ ಈ ಕವಿಯು "ಪ್ಯಾರಡೈಸ್ ಲಾಸ್ಟ್" ಎಂಬ ಮಹಾಕಾವ್ಯವನ್ನು ಬರೆದಿದ್ದಾನೆ.

ಅಂತರಾಳ—ಮಧ್ಯಭಾಗ. ಊಟೆ—ಚಿಲುಮೆ. ಅಂತಸ್ಥಲ—ಒಳಭಾಗ, ಗರ್ಭ. ಆರ್ದ್ರ—ಒದ್ದೆಯಾಗುವುದು. ಪ್ರಾಚೀನ—ಪೂರ್ವದ. ಹಿಂದಿನ. ಪ್ರವಹಿಸಿತು—ಹರಿಯಿತು. ದಾನವ—ರಾಕ್ಷಸ. ಪರಿಮಾಣ—ಪ್ರಮಾಣ ; ಗಾತ್ರ. ಲುಪ್ತ—ಕಣ್ಮರೆ. ಧಾರೆ—ಪ್ರವಾಹ. ಲೇಶ—ಸ್ವಲ್ಪ. ಶುಷ್ಕ—ಒಣಗಿದ. ಶಾಖೋಪಶಾಖೆ—ಶಾಖೆ+ಉಪಶಾಖೆ. ಪ್ರಾಂತರ—ಪ್ರದೇಶ. ಗೋಡುಮಣ್ಣು—ಮಕ್ಕಲುಮಣ್ಣು. ಮನೋಭೂಮಿ—ಮನಸ್ಸೆಂಬ ಭೂಮಿ. ಇತಿಹಾಸ—ಚರಿತ್ರೆ. ಅವಲಂಬಿಸು—ಆಶ್ರಯಿಸು. ವ್ಯತ್ಯಸ್ತ—ವ್ಯತ್ಯಾಸಗೊಂಡ. ಸೌಧ—ಮಹಡಿಮನೆ. ವಿರಾಜಿಸು—ಪ್ರಕಾಶಿಸು. ಸಮಾಲೋಚನೆ—ವಿಚಾರ. ಭಿನ್ನ—ವ್ಯತ್ಯಾಸ. ಉಚ್ಚ—ಶ್ರೇಷ್ಠ. ಗ್ರಹಿಸು—ಅರ್ಥಮಾಡಿಕೊ. ಸ್ತಬ್ಧ—ಮೌನ.

ಪ್ರಶ್ನೆಗಳು :

೧. ಕವಿಗಳಲ್ಲಿ ಎಷ್ಟು ವಿಧವೆಂದು ಇಲ್ಲಿ ಹೇಳಿದೆ ? ಅವರು ಏನನ್ನು ವ್ಯಕ್ತಪಡಿಸುತ್ತಾರೆ ?
೨. ಯಾರನ್ನು ಮಹಾಕವಿಯೆಂದು ಕರೆಯುತ್ತೇವೆ ? ಏಕೆ ?
೩. ಭಾರತದ ಮಹಾಕಾವ್ಯಗಳು ಯಾವುವು ? ಅವು ನಮಗೆ ಏನನ್ನು ತಿಳಿಸುತ್ತವೆ ?
೪. 'ಇಲಿಯಡ್' ವಿಚಾರವಾಗಿ ನೀವೇನು ಬಲ್ಲಿರಿ ? ತಿಳಿಸಿ.

ಸಂದರ್ಭದೊಡನೆ ವಿವರಿಸಿ :

೧. 'ಅವು ಸಮಗ್ರ ಭರತಖಂಡದೊಡನೆ ಒಂದಾಗಿ ತಮ್ಮನ್ನು ರಚಿಸಿದ ಕವಿಗಳ ಹೆಸರನ್ನು ಮರೆಸಿ ಕುಳಿತುಬಿಟ್ಟಿವೆ.'
೨. 'ಹೋಮರ್‌ಕವಿಯು ತನ್ನ ದೇಶ ಕಾಲಗಳ ಕಂಠಕ್ಕೆ ಭಾಷೆಯನ್ನು ಒದಗಿಸಿಕೊಟ್ಟನು.'
೩. 'ಆದರೆ ಅದು ದೇಶದ ಧನವಲ್ಲ, ಅದೇನಿದ್ದರೂ ಲೈಬ್ರರಿಯ ಆದರದ ಸಾಮಗ್ರಿ'.
೪. 'ಅವು ಸಂಗತಿಗಳ ಇತಿಹಾಸವಲ್ಲ.'
೫. 'ಅವರ ಹೆಸರು ಕಾಲದ ವಿಸ್ತಾರವಾದ ಪ್ರಾಂತರದಲ್ಲಿ ಕಣ್ಮರೆಯಾಗಿ ಹೋಗಿವೆ'.

***

# ಸ್ಕೌಟ್ ಪದ್ಧತಿಯ ವೈಶಿಷ್ಟ್ಯ

—ಎಸ್. ವಿ. ರಂಗಣ್ಣ

ಬಾಲಕರಲ್ಲಿ ಆರೋಗ್ಯ, ಗುಣ, ಶೀಲ, ಕರಕೌಶಲಗಳನ್ನು ಬೆಳೆಸುವುದೂ, ಅವರು ಮುಂದೆ ಒಳ್ಳೆಯ ಪೌರರಾಗಿ ನಿಲ್ಲುವುದಕ್ಕೆ ಬೇಕಾದ ತರಪೇತನ್ನು ಕೊಡುವುದೂ ಸ್ಕೌಟ್ ಪದ್ಧತಿಯ ಉದ್ದೇಶ. ಆ ಉದ್ದೇಶಸಾಧನೆಗೆ ಅದು ಬಳಸುವ ವಿಧಾನ ವಿಶಿಷ್ಟವಾದದ್ದು. ನಿತ್ಯಜೀವನದ ಕಾರ್ಯಾವಳಿಯನ್ನು ಬಾಲಕರಿಗೆ ತಕ್ಕುದಾದ ಪ್ರಮಾಣಕ್ಕೆ ಇಳಿಸಿ, ಅಡಕ ಮಾಡಿ, ಅವರು ಅದರಲ್ಲಿ ಆಸಕ್ತರಾಗುವಂತೆ ಪ್ರೋತ್ಸಾಹಿಸಿ. ನಿಜಜೀವನದ ಪೂರ್ವಾನುಭವ ಅವರಿಗೆ ಲಭಿಸುವಂತೆ ಎಸಗುವುದೇ ಆ ವಿಧಾನ. ಬಾಳುವಿಕೆ ಜವಾಬ್ದಾರಿಯ ಕೆಲಸ, ಹಂಗು ಹೊರೆಯುಳ್ಳ ಕೆಲಸ. ಸ್ಕೌಟುಗಳು ಅನುಕರಿಸಿ ನಡೆಸುವ ಬಾಳಿಗೆ ಕ್ರೀಡೆ ಅಥವಾ ಆಟದ ರೂಪವನ್ನು ಹೊಂದಿಸಿರುವುದರಿಂದ ಅವರ ಉಲ್ಲಾಸಕ್ಕೂ, ಉತ್ಸಾಹಕ್ಕೂ ಭಂಗ ಉಂಟಾಗುವುದಿಲ್ಲ. ಅಡಿಗೆ ಮಾಡುವುದಾಗಲಿ. ತಾತ್ಕಾಲಿಕ ಉಪಯೋಗಕ್ಕೆ ಗುಡಿಸಲು ಕಟ್ಟುವುದಾಗಲಿ, ನಕ್ಷೆ ತಯಾರಿಸುವುದಾಗಲಿ, ಯೋಜನೆ ಸಮಾಲೋಚಿಸುವುದಾಗಲಿ, ವೃಂದಸಂಗೀತವಾಗಲಿ, ಕಿರುನಾಟಕದ ಅಭಿನಯವಾಗಲಿ ಸ್ಕೌಟುಗಳಿಗೆ ನಗು ಮುಖದ ಶ್ರದ್ಧೆ. ಎಲ್ಲ ಪ್ರಸಂಗದಲ್ಲೂ ವಯಸ್ಕ ನಾಯಕರು ಹಿಂದಿದ್ದುಕೊಂಡು ಚಿಕ್ಕವರ ಕೈವಾಡಕ್ಕೇ ಹೆಚ್ಚು ಅವಕಾಶ ಕಲ್ಪಿಸುತ್ತಾರಾಗಿ ಸ್ವಯಂ ಶಿಕ್ಷಣವೇ ಸ್ಕೌಟು ಮಾರ್ಗವಾಗುತ್ತದೆ. ಇಪ್ಪತ್ತನೆಯ ಶತಮಾನದ ಶೈಕ್ಷಣಿಕ ಪ್ರಯೋಗಗಳಲ್ಲಿ ಅತ್ಯುತ್ತಮವಾದದ್ದೆಂದು ತಜ್ಞರು ಸ್ಕೌಟ್ ಪದ್ಧತಿಯನ್ನು ಹೊಗಳಿರುವುದು ಆ ಕಾರಣದಿಂದಲೇ.

ತಂಡದ ನಾಯಕರ ಮತ್ತು ತಂಡದ ಸ್ಕೌಟುಗಳ ಸಂಬಂಧ ಬೋಧಕರ ವಿದ್ಯಾರ್ಥಿಗಳ ಸಂಬಂಧದಿಂದ ಬೇರೆ; ಅದು ಹಿರಿಯಣ್ಣ ಕಿರಿಯ ತಮ್ಮಂದಿರ ಸೋದರಭಾವ. ನಾಯಕರಿಂದ ಜರುಗುವುದು ಅಪ್ಪಣೆಯಲ್ಲ. ಹುಕುಂ ಅಲ್ಲ, ಬಲೋದ್ಬಂಧಿಯಲ್ಲ; ಆಗಬೇಕಾಗಿರುವ ಕಾರ್ಯದ ವಿವರಣೆ. ಸೂಕ್ತ ಸಂಕ್ಷಿಪ್ತ ಸಲಹೆ. ಸ್ಕೌಟುಗಳು ಕೈಕೊಳ್ಳುವುದು ಆಜ್ಞಾಪಾಲನೆಯ

ಆಕನೋಳಿಗವಲ್ಲಿ, ತಮ್ಮದೇ ಆದ ಹರ್ಷೋದ್ಯಮ, ತನ್ನ ಸ್ವಂತ ಅಭಿಲಾಷೆಯಿಂದ ಬಾಲಕ ಹತ್ತಿರದ ಸ್ಕೌಟ್ ಗುಂಪಿಗೆ ಸೇರುತ್ತಾನೆಯೇ ಹೊರತು ಮತ್ತಾವ ಪ್ರಲೋಭನೆಯಿಂದಲೂ ಅಲ್ಲ. ಸ್ಕೌಟ್ ಪದ್ಧತಿಯ ಜೀವಾಳವಾದ "ಭಾಷೆ" ಮತ್ತು "ವಿಧಿನೇಮ"ವನ್ನು ತಿಳಿದುಕೊಳ್ಳಿ. ದೇವರಲ್ಲೂ ಸ್ವದೇಶದಲ್ಲೂ ಭಕ್ತಿ, ಪರೋಪಕಾರ, ವಿಧಿನೇಮಕ್ಕೆ ವಿಧೇಯತೆ ಈ ಮೂರನ್ನೂ ಅನುಷ್ಠಾನಗೈಯುತ್ತೇನೆಂದು ಬಾಲಕ ಸ್ಕೌಟಾಗುವಾಗ ಶಪಥ ಮಾಡುತ್ತಾನೆ. ಅದು ಗುಂಪಿನ ನಾಯಕನಿಗೋ, ಜೊತೆ ಸ್ಕೌಟುಗಳಿಗೋ ಒಪ್ಪಿಸುವ ಕರಾರಲ್ಲ. ತನ್ನ ಅಂತಸ್ಸಾಕ್ಷಿಯೊಂದಿಗೆ ಮಾಡಿಕೊಳ್ಳುವ ಒಪ್ಪಂದ. ಒಬ್ಬ ಸ್ಕೌಟು ದಿನವಹಿ ಆಚರಿಸಲೇಬೇಕಾದ ಉಪಕಾರವನ್ನು ಮರೆತುಬಿಟ್ಟರೆ, ವಿನಯ ಕಳೆದುಕೊಂಡು ಒರಟಾಟ ನಡೆಸಿದರೆ, ಗೊತ್ತಾದ ಹೊತ್ತಿಗೆ ಬಾರದೆ ವಿಲಂಬಗೈದರೆ ಅವನಿಗೆ ಯಾರೂ ಯಾವ ಶಿಕ್ಷೆಯನ್ನೂ ಹೊರಿಸುವುದಿಲ್ಲ; ಅವನ ಅಂತಸ್ಸಾಕ್ಷಿಯೇ ಅವನನ್ನು ಎಚ್ಚರಿಸುತ್ತದೆ. "ಹತ್ತು ಅಂಶಗಳ ವಿಧಿನೇಮ"ದಲ್ಲಿ ಇದನ್ನು ಮಾಡತಕ್ಕದ್ದು, ಅದನ್ನು ಮಾಡಲಾಗದು ಎಂಬ ಬಗೆಯ ಸೂತ್ರಗಳ ಉಚ್ಚಾರವಿಲ್ಲ. "ಸ್ಕೌಟು ನಂಬುಗೆಗರ್ಹ". "ಸ್ಕೌಟು ಸರ್ವರಿಗೂ ಮಿತ್ರ", "ಸ್ಕೌಟು ಮಿತವ್ಯಯಿ", "ಸ್ಕೌಟು ಶುಚಿಮನಸ್ಕ" ಇತ್ಯಾದಿ ಸತ್ಪುರುಷನ ಗುಣಲಕ್ಷಣಗಳ ನಿರೂಪಣೆಯಿದೆ. ನೀತಿಪಾಠ ಹೇಳಿ ಹೇಳಿ ಬೇಸರಿಸುವ ಕ್ರಮ ಸ್ಕೌಟು ಪದ್ಧತಿಗೆ ಹೊಲ್ಲ: ನೀತಿ, ಧರ್ಮ ಬಾಲಕರಲ್ಲಿ ಸಹಜವಾಗಿ ಹೂಗಿಡ ಬೆಳೆಯುವಂತೆ ಬೆಳೆಯಬೇಕೆಂಬುದೇ ಅದರ ಗುಟ್ಟು.

ಅವರವರ ವಯಸ್ಸಿಗೂ, ಶಕ್ತಿಸಹಿಷ್ಣುತೆಗಳಿಗೂ ಅನುರೂಪವಾಗಿ ಕೆಲಸಕಾರ್ಯವನ್ನು ಹಂಗಡಿಸಿ ನಿಗದಿ ಮಾಡಿರುವುದು ಸ್ಕೌಟ್ ಪದ್ಧತಿಯ ಮೆಚ್ಚತಕ್ಕ ವಿವೇಕ. ಏಳರಿಂದ ಹನ್ನೊಂದು ಪೂರಾ "ಮರಿಗಳು"; ಹನ್ನೆರಡರಿಂದ ಹದಿನೇಳು ಪೂರಾ "ಸ್ಕೌಟುಗಳು"; ಹದಿನೆಂಟರಿಂದ ಇಪ್ಪತ್ತುಮೂರು ಪೂರಾ "ರೋವರ್ ಸ್ಕೌಟುಗಳು": ಈ ದರ್ಜೆಗಳಿಗೆ ಅಚ್ಚುಕಟ್ಟಾಗಿ ಹೊಂದುವಂತೆ ಆಟಪಾಟ, ದುಡಿಮೆ, ಸಾಹಸಗಳನ್ನು ಹಂಚಲಾಗಿದೆ. ಮನೆಯಿಂದ ದೂರ ಹಸು ಶಿಬಿರ ಹೂಡುವುದು ಮರಿಗಳಿಗೆ ನಿಷಿದ್ಧ. ಸ್ಕೌಟುಗಳಿಗೆ ಅದು ಶುದ್ಧ ಆವಶ್ಯಕತೆ. ಹಾಗೆಯೇ ಇಬ್ಬಿಬ್ಬರಾಗಿ ಹತ್ತೆಂಟು ಮೈಲಿ ಕಾಲ್ನಡಿಗೆಯಲ್ಲಿ ಹೋಗಿ ಬರುವ ಉದ್ಯಮ ರೋವರ್ ಸ್ಕೌಟುಗಳಿಗೆ ಮೀಸಲು. ಮಕ್ಕಳು ಕುಣಿದಾಡಿ ಹಗ್ಗದ ಮೇಲೆ ಕುಪ್ಪಳಿಸಿ ಜಿಗಿದು ನಲಿದಾಡಿದರೆ ನೋಡಲು ಚಂದ. ಯುವಕರು ಪರ್ವತ ಹತ್ತಿ ಇಳಿದು, ಮರಕಡಿದು, ಸೇತುವೆ ಕಟ್ಟಿ, ನದಿ ದಾಟಿ, ಹಿಂದಿರುಗಿ, ಶ್ರಮದಾನದಿಂದ ಹಳ್ಳಿಯನ್ನು ಚೊಕ್ಕಟಗೈದರೆ ಅವರಿಗೆ ಆತ್ಮತೃಪ್ತಿ, ಜನಗಳಿಗೆ ಪ್ರಯೋಜನ. ಮರಿಗಳಿಗೂ, ಸ್ಕೌಟುಗಳಿಗೂ ಕಲಿಕೆಯ ಹಂತದಿಂದ ಮೇಲು ಮೇಲಕ್ಕೆ ಏರಿ ಅತ್ಯುತ್ಕೃಷ್ಟತೆ ಮಟ್ಟವನ್ನು ಮುಟ್ಟುವುದಕ್ಕೆ ಸಾಧ್ಯವಾಗುವಂತೆ ಅಭಿವೃದ್ಧಿ ನಿಚ್ಚಣಿಗೆಯನ್ನು ನಿಯಂತ್ರಿಸಲಾಗಿದೆ. ರೋವರ್ ಸ್ಕೌಟುಗಳಲ್ಲಿ ದರ್ಜೆವ್ಯತ್ಯಾಸ ಸಹಜವಲ್ಲವಾದ್ದರಿಂದ ಅವರೆಲ್ಲರಿಗೂ ಒಂದೇ ಉಚ್ಚಮಟ್ಟದ ಆದರ್ಶ ಇರಬೇಕೆಂದು ಅಂಗೀಕೃತ ನಿಯಮ. ಮನೋವಿಜ್ಞಾನಕ್ಕೂ, ಮಾನವತಾಶಾಸ್ತ್ರಕ್ಕೂ ಸ್ಕೌಟ್ ಪದ್ಧತಿ ವಿರೋಧ ಬರದಂತೆ ಜಾಗ್ರತೆ ಹೊಂದಿದೆ.

ಕಾಲಚಕ್ರ ಹೊರಳುತ್ತ ಹೋಗುತ್ತಿದೆ. ಸಮಯ ಸನ್ನಿವೇಶ ಅಷ್ಟಿಷ್ಟು ಬದಲಾಯಿಸುತ್ತಿದೆ. ಅದಕ್ಕನುಸಾರವಾಗಿ ಸ್ಕೌಟ್‌ಪದ್ಧತಿ ತನ್ನ ವ್ಯವಸ್ಥೆಯಲ್ಲಿ ಅತ್ಯಗತ್ಯವೆನ್ನಿಸಿದ ಬಾಹ್ಯ ಮಾರ್ಪಾಟನ್ನು ರೂಢಿಗೆ ತಂದುಕೊಳ್ಳುತ್ತಲೇ ಬಂದಿದೆ. ಮೊದಲಿದ್ದದ್ದು ಸ್ಕೌಟ್‌ಗುಳ್ಳ ಮಾತ್ರ; ಆಮೇಲೆ ಹೆಣ್ಣುಮಕ್ಕಳಿಗಾಗಿ " ಗೈಡುಗಳು " ಎಂಬ ಪಂಗಡ ಏರ್ಪಾಡಾಯ್ತು; ಆಮೇಲೆ ರೋವರ್ ಸ್ಕೌಟುಗಳು ಉದಯಿಸಿದರು. ಸ್ಕೌಟ್‌ನಾಯಕರ ತರಪೇತಿ ಆರಂಭವಾಗಿ ವಿಶೇಷ ಪರಿಷ್ಕರಣಕ್ಕೆ ಒಳಗಾಗಿ ಒಂದು ಸುವ್ಯವಸ್ಥೆಯನ್ನು ತಳೆದಿದೆ. ಅವಧಿಯನ್ನೂ, ಪರಿಸ್ಥಿತಿಯನ್ನೂ ಸ್ಕೌಟ್ ಪದ್ಧತಿ ಧಿಕ್ಕರಿಸುವುದಿಲ್ಲವೆಂಬುದಕ್ಕೆ ಎರಡು ನಿದರ್ಶನ ಕೊಡಬಹುದು. ೧೯೦೮ ರಿಂದ ೧೯೪೨ ರ ವರೆಗೂ ಸ್ಕೌಟ್‌ವಿಭಾಗ ಹನ್ನೊಂದು ವರ್ಷದಿಂದ ಹದಿನೆಂಟರವರೆಗಿನ ಬಾಲಕರಿಗೆ ಸರಿ ಎಂಬ ಅಭಿಪ್ರಾಯಕ್ಕೆ ಧಕ್ಕೆ ಇರಲಿಲ್ಲ. ಆಗ ಹಲವು ನಾಯಕರಿಗೆ ಅದು ಅಷ್ಟೊಂದು ಸರಿಯಲ್ಲವೆಂದು ತೋರಿಬಂತು. ಹದಿನಾಲ್ಕು ತುಂಬುವವರೆಗೆ " ಸ್ಕೌಟುಗಳು ", ಅನಂತರ ಹದಿನೆಂಟರವರೆಗೆ " ಹಿರಿಯ ಸ್ಕೌಟುಗಳು " ಎಂಬ ಬೇರ್ಪಡೆ ಆಗಬೇಕೆಂದು ಅವರು ವಾದಿಸಿದರು. ವಿಪುಲ ಚರ್ಚೆ ನಡೆಯಿತು. ಒಮ್ಮತ ಉಂಟಾಗದೆ ಎರಡು ಪಕ್ಷಗಳು ಜನಿಸಿದವು. ಎರಡೂ ಅಚ್ಚ ಪ್ರಾಮಾಣಿಕತೆಯ ತೀವ್ರ ಶ್ರದ್ಧಾಳುಗಳ ಗಡಣ. ಆದ್ದರಿಂದ "ಹಿರಿಯ ಸ್ಕೌಟುಗಳು" ಎಂಬುದನ್ನು ಇಚ್ಛೆಯುಳ್ಳ ನಾಯಕರು ಇಟ್ಟುಕೊಳ್ಳಲಿ ಎಂಬ ಉದಾರ ಶಾಸನ ಅಧಿಕೃತವಾಯ್ತು. ಸಮವಸ್ತ್ರದ ವಿಚಾರದಲ್ಲೂ ನಾಡುಗಳಿಗೆ ಸ್ವಲ್ಪ ಸ್ವಾತಂತ್ರ್ಯವುಂಟು. ಇತ್ತೀಚೆಗೆ ಸ್ಕೌಟ್ ಪದ್ಧತಿಯ ತವರಾದ ಇಂಗ್ಲೆಂಡಿನಲ್ಲಿ " ಹೊಸಮುಖ" ರೂಪಿಸಬೇಕೆಂಬ ತರದೂದು ಉಪಕ್ರಮವಾಗಿದೆ. ಅರಣ್ಯದ ಹಿನ್ನೆಲೆಯನ್ನು ತೆಗೆದುಹಾಕಿ ನಗರಸಂಸ್ಕೃತಿಯ ಹಿನ್ನೆಲೆ ಹರಡುವುದು ; ವಿಧಿನೇಮದ ಹತ್ತು ಅಂಶಗಳಲ್ಲಿ ಕೆಲವು ಕೈಬಿಡಬಹುದು ; ರೋವರ್ ಶಬ್ದಕ್ಕೆ ಬದಲಾಗಿ " ಸಾಹಸಿಗ " ಎಂಬುದನ್ನು ಉಪಯೋಗಿಸುವುದು ಇಂಥ ಪ್ರಯತ್ನ ನಡೆಯುತ್ತಿದೆ. ಮೂಲತತ್ತ್ವಗಳ ವಿಷಯಕ್ಕೂ ಇವು ಕೆಲವು ಅನ್ವಯಿಸುವುದರಿಂದ ಏನಾಗುತ್ತದೊ ಕಾದು ನೋಡಬೇಕು.

ಒಟ್ಟಿನಲ್ಲಿ ಸ್ಕೌಟ್ ಪದ್ಧತಿಯ ರುಚಿಯನ್ನು ಕಂಡವರು ಅದನ್ನೆಂದಿಗೂ ಸೇವಿಸದೆ ಬಿಡಲಾರರು. ಕಾಣದವರು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಕಂಡುಕೊಂಡು ಸುಯೋಗಿಗಳಾಗಲಿ ಎಂದು ಅವರ ಮನವಿ.

## ಟಿಪ್ಪಣಿ

ಕರ್ತೃ ಮತ್ತು ಕೃತಿ :—

" ಸ್ಕೌಟ್ ಪದ್ಧತಿಯ ವೈಶಿಷ್ಟ್ಯ "ವನ್ನು ಈ ಪಠ್ಯಪುಸ್ತಕಕ್ಕಾಗಿಯೇ ಬರೆದವರು ಪ್ರೊ|| ಎಸ್. ವಿ. ರಂಗಣ್ಣನವರು ೧೮೯೮ರಲ್ಲಿ, ಹಾಸನಜಿಲ್ಲೆಯ ಸಾಲಿಗ್ರಾಮದಲ್ಲಿ ಜನಿಸಿದವರು. ಅವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ಸೇರಿ

ಉಪಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಮಹಾರಾಜ ಕಾಲೇಜಿನ ಮುಖ್ಯಾಧಿಕಾರಿಗಳಾಗಿ ನಿವೃತ್ತರಾದವರು. ಕೆಲಸದಿಂದ ವಿಶ್ರಾಂತರಾದ ಮೇಲೆ ಅವರು ಕೆಲಕಾಲ ಇಂಗ್ಲಿಷ್—ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ ಕೆಲಸ ಮಾಡುತ್ತಿದ್ದರು. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಉದ್ದಾಮ ಪಂಡಿತರಾದ ಶ್ರೀಯುತರು 'ಶೈಲಿ', 'ಹೊನ್ನಶೂಲ', 'ರುಚಿ' 'ವಿಡಂಬನೆ', 'ನಾಟುನುಡಿ' 'ಕಾಳಿದಾಸನ ನಾಟಕಗಳ ವಿಮರ್ಶೆ' ಇತ್ಯಾದಿ ಗ್ರಂಥಗಳನ್ನು ರಚಿಸಿದ್ದಾರೆ. 'ರಂಗಬಿನ್ನಪ' ಎಂಬ ಅವರ ವಚನಸಂಗ್ರಹಕ್ಕೆ ಸಾಹಿತ್ಯ ಅಕಾಡಮಿಯ ಪ್ರಶಸ್ತಿ ದೊರೆತಿದೆ.

ಪ್ರೊ॥ ರಂಗಣ್ಣನವರು ವಿಶ್ವವಿದ್ಯಾನಿಲಯದ ಸ್ಕೌಟು ಚಳುವಳಿಯ ಮುಖ್ಯಾಧಿಕಾರಿಗಳಾಗಿದ್ದವರು, ಅವರ ಸೇವೆಗಾಗಿ ಅವರಿಗೆ "ರಜತಗಜ" ಪ್ರಶಸ್ತಿ ದೊರೆತಿದೆ. ಅವರು ತಮ್ಮ ಈ ಪ್ರಸ್ತುತ ಲೇಖನದಲ್ಲಿ ಸ್ಕೌಟ್ ಆದವನ ಹೊಣೆ ಹೊರೆಗಳನ್ನೂ, ಸ್ಕೌಟ್ ಚಳುವಳಿಯ ಮಹತ್ವವನ್ನೂ ಸುಂದರವಾಗಿ ನಿರೂಪಿಸಿದ್ದಾರೆ.

**ಕಠಿಣ ಪದಗಳ ಅರ್ಥ :**

ಶೀಲ—ನಡೆವಳಿಕೆ. ಕರಕೌಶಲ—ಕೈಚಳಕ. ಪೌರರು—ನಾಗರಿಕರು. ತರಪೇತು—ಶಿಕ್ಷಣ, ತಯಾರಿಕೆ. ವಿಶಿಷ್ಟ—ವಿಶೇಷವಾದ. ಕಾರ್ಯಾವಳಿ—ಕೆಲಸಗಳು. ಅಡಕಮಾಡು—ಹೊಂದಿಸು. ಪೂರ್ವಾನುಭವ—ಹಿಂದಿನ ಅನುಭವ. ಎಸಗು—ಮಾಡು. ಹಂಗು—ದಾಕ್ಷಿಣ್ಯ. ಪ್ರಸಂಗ—ಸಂದರ್ಭ. ಕೈವಾಡ—ಭಾಗವಹಿಸುವುದು. ತಜ್ಞರು—ಪರಿಣತರು; ಪಾಂಡಿತ್ಯವುಳ್ಳವರು. ಬಲೋದ್ಬಂಧಿ—ಬಲವಂತಕ್ಕೆ ಒಳಗಾಗುವುದು. ಆಳಿನೂಳಿಗವಲ್ಲ—ಆಳಿನ ಕೆಲಸವಲ್ಲ. ಉದ್ಯಮ—ಕೆಲಸ. ಪ್ರಲೋಭನೆ—ದುರಾಸೆ. ಅನುಷ್ಠಾನ—ಆಚರಣೆ. ಆತ್ಮಸಾಕ್ಷಿ—ಆತ್ಮಸಾಕ್ಷಿ. ವಿಲಂಬ—ನಿಧಾನ. ಅರ್ಹ—ಯೋಗ್ಯ. ಮಿತವ್ಯಯಿ—ಹಿಡಿತವಾಗಿ ಖರ್ಚುಮಾಡುವವನು. ಶುಚಿಮನಸ್ಕ—ಶುದ್ಧ ಮನಸ್ಸುಳ್ಳವನು. ಹೊಲ್ಲ—ಸಲ್ಲದು, ಸರಿಹೋಗುವುದಿಲ್ಲ. ಸಹಿಷ್ಣುತೆ—ಸಹನೆ. ಅನುರೂಪವಾಗಿ—ಸರಿ ಹೋಗುವಂತೆ, ಹೊಂದುವಂತೆ. ನಿಗದಿಮಾಡು—ಗೊತ್ತುಮಾಡು. ನಿಷಿದ್ಧ—ತಿರಸ್ಕೃತ. ನಿಚ್ಚಣಿಗೆ—ಏಣಿ. ನಿಯಂತ್ರಿಸು—ನಿಯಮಿಸು. ಬಾಹ್ಯ ಮಾರ್ಪಾಟು—ಹೊರಬದಲಾವಣೆ. ಉದಯಿಸಿದರು—ಹುಟ್ಟಿದರು. ಪರಿಷ್ಕರಣ—ಶುದ್ಧಗೊಳಿಸುವುದು, ಸುಧಾರಿಸುವುದು. ಗಡಣ—ಗುಂಪು. ಸಮವಸ್ತ್ರ—ಗೊತ್ತಾದ ಉಡುಪು, (Uniform).

**ಪ್ರಶ್ನೆಗಳು :**

೧. ತಜ್ಞರು ಸ್ಕೌಟುಪದ್ಧತಿಯನ್ನು ಹೊಗಳಿರುವುದರ ಕಾರಣವೇನು?
೨. ಬಾಲಕ ಸ್ಕೌಟಾಗುವಾಗ ಏನೆಂದು ಶಪಥ ಮಾಡುತ್ತಾನೆ ?
೩. ಸ್ಕೌಟಿನ ಗುಣಲಕ್ಷಣಗಳಾವುವು ?

೪. ಸ್ಕೌಟ್ ಪದ್ಧತಿಯ ಗುಟ್ಟೇನು?

೫. ಯಾವ ಯಾವ ವಯಸ್ಸಿಗೆ, ಶಕ್ತಿಸಹಿಷ್ಣುತೆಗೆ ಅನುರೂಪವಾಗಿ ಕೆಲಸಕಾರ್ಯ ಗಳನ್ನು ನಿಗದಿ ಮಾಡಿದ್ದಾರೆ?

೬. ಸ್ಕೌಟ್ ಪದ್ಧತಿ ತನ್ನ ವ್ಯವಸ್ಥೆಯಲ್ಲಿ ಕಾಲಕಾಲಕ್ಕೆ ತಂದುಕೊಂಡಿರುವ ಮಾರ್ಪಾಡುಗಳೇನು ?

ಸಂದರ್ಭಸಹಿತ ವಿವರಿಸಿ :

೧. 'ಸ್ಕೌಟುಗಳು ಕೈಗೊಳ್ಳುವುದು ಆಜ್ಞಾಪಾಲನೆಯಲ್ಲ, ಆಳಿನೂಳಿಗವಲ್ಲ!'

೨. 'ಮನೋವಿಜ್ಞಾನಕ್ಕೂ, ಮಾನವತಾಶಾಸ್ತ್ರಕ್ಕೂ ಸ್ಕೌಟ್ ಪದ್ಧತಿ ವಿರೋಧ ತಂದಿಡದಂತೆ ಜಾಗ್ರತೆ ಹೊಂದಿದೆ."

೩. 'ಅದು ಗುಂಪಿನ ನಾಯಕನಿಗೋ, ಜೊತೆ ಸ್ಕೌಟುಗಳಿಗೋ ಒಪ್ಪಿಸುವ ಕರಾರಲ್ಲ ತನ್ನ ಅಂತಸ್ಸಾಕ್ಷಿಯೊಂದಿಗೆ ಮಾಡಿಕೊಳ್ಳುವ ಒಪ್ಪಂದ.'

ಈ ಪದಗಳನ್ನು ಬಿಡಿಸಿ ಸಂಧಿಯ ಹೆಸರನ್ನು ತಿಳಿಸಿ :

ಕಾರ್ಯಾವಳಿ; ಪೂರ್ವಾನುಭವ; ಅತ್ಯುತ್ತಮ; ಹರ್ಷೋದ್ಯಮ; ಅತ್ಯುತ್ಕೃಷ್ಟ

ಇವುಗಳಿಗೆ ವಿಗ್ರಹ ಬರೆದು ಸಮಾಸವನ್ನು ಹೇಳಿ :

ಕಿರುನಾಟಕ; ಹಿರಿಯಣ್ಣ; ಆಟಪಾಟ; ಕೈಬಿಡು.

ಇವುಗಳನ್ನು ವಾಕ್ಯಗಳಲ್ಲಿ ಪ್ರಯೋಗಿಸಿ :

ಕರಕೌಶಲ; ಗುಣಶೀಲ; ಪೂರ್ವಾನುಭವ; ಕೈವಾಡ; ಅನುಷ್ಠಾನ; ಅಂತಸ್ಸಾಕ್ಷಿ ಅನುರೂಪ; ಅಚ್ಚುಕಟ್ಟು; ಕಾಲಚಕ್ರ; ಅತ್ಯಗತ್ಯ.

***

# ವೃದ್ಧ ಮಾಹೇಶ್ವರಂ

—ಹರಿಹರ

ಇಂತು ವಿವಾಹತತ್ಪರನಾಗಿ ನಂಬಿಯಣ್ಣಂ ವನದೊಳಗಿರಲಿತ್ತಲು ಕೈಲಾಸಪುರದಲರಮನೆಯ ಲಪರಿಮಿತಪರಿವಾರನಾಗಿ ವಿರೂಪಾಕ್ಷನಿರ್ದು, ಗಿರಿಜೆಗಿಂತೆಂದಂ—ದೇವಿ, ಕೇಳೌ, ನಮ್ಮ ಪುತ್ರಂ ಪುಷ್ಪದತ್ತಂ ನರಲೋಕದೊಳ್ ಪುಟ್ಟಿ, ನಂಬಿಯೆಂಬ ನಾಮನಾಗಿ, ಸಂಸಾರದಿಂ ಕೆಟ್ಟು, ಪೋಗ ಲನುವಾಗಿರ್ದಪಂ. ಆತಂಗೆ ಮುನ್ನಿತ್ತ ನಂಬುಗೆಯ ಬೆಂಬಳಿಗೊಂಡು ಪೋಗಿ, ಮರ್ತ್ಯದೊಳ್ ತೊತ್ತುಗೊಂಡು ಆವು ಕಳುಪಿದ ನಿಮ್ಮಿರ್ಬರು ರುದ್ರಕನ್ನಿಕೆಯರು ಚೋಳದೇಶದ ತಿರುವಾರೂರೊಳಂ, ತಿರುವತ್ತಿಯೂರೊಳಂ ಪರವೆ ಸಂಕಿಲೆಗಳೆಂಬ ನಾಮದಿಂ ಜನಿಯಿಸಿರ್ದ ಪರಮದಿರನಾತನೊಳ್ ನೆರಪಿ, ಸಕಲಸುಖಮಂ ಪೂಜೆಯಾಗಿ ಕೈಕೊಂಡು, ಕೊಂಡು ಬರ್ಪನನ್-ಅನುಂ ನಿಮ್ಮೊಡನೆ ನೋಡುತ್ತುಂ ಬಂದಪೆನೆಂದು ದೇವಿಯರ್ ಬಿನ್ನೈಸೆ, ನೀನತ್ಯಂತಕರುಣಿ, ನಾಂ ಮಾಳ್ಪುದತಿನಿಷ್ಠುರಚರಿತ್ರಂ. ಆದೊಡಂ ನೀಂ ಬಂದು, ಆನಾವೂರೊಳಿರ್ದನೆನಲ್ಲಿಯ ದೇವಾಲಯದೊಳಿರುತ್ತೆ ಬರ್ಪುದೆಂದು ಕರುಣಿಸಿ, ವಿಚಿತ್ರಂ, ಮತ್ತಂ ದೇವಿಯರ್ ನೋಡನೋಡ ಲೊರ್ವ ಶತವೃದ್ಧನಾಗಿ ನಿಂದಿರ್ದನೆಂತೆಂದೊಡೆ—

ಆಪಾದಮಸ್ತಕಂಬರಮುದ್ಧೂಳಿಸಿದ ವಿಭೂತಿಯ ತಲೆಯುಂ ಮಯ್ಯುಂ ನರೆತೆರೆಗಳಾಗೆ, ಜಡೆಯ ಚಂದ್ರಕಳೆ ಕೊಡೆಯಾಗೆ, ಪಿಡಿದ ತ್ರಿಶೂಲಂ ಕೊಡೆಯ ಕಾವಾಗೆ. ಖಟ್ವಾಂಗಂ ಯಷ್ಟಿಯಾಗೆ, ಆಭರಣದೊಳೊಂದು ಸರ್ಪಂ ಪ್ರಮಾಣಪತ್ರಮಾಗೆ, ಕಮಲಜಶಿರಂ ಕಮಂಡಲ ಮಾಗೆ, ಪುಲಿದೊವಲ್ ಗಜಚರ್ಮಂ ಉಟ್ಟ, ಹೊದೆದ ವೇಷ್ಟಿಗಳಾಗೆ, ಮೆಟ್ಟಿದ ಮೊಲೆನಾಗಂ ಪಾದರಕ್ಷೆಗಳಾಗೆ, ಕಟ್ಟಿದ ಶಿರೋಮಾಲೆ ಜಪಮಾಲೆಯಾಗೆ, ಮಹಾವೃದ್ಧನಾಗಿ ಕೈಲಾಸದಿಂ ಚೋಳದೇಶದ ಮಣಮುಂದ ಪುತ್ತೂರ ಮದುವೆಯ ಚಪ್ಪರದ ಮುಂದಿಳಿಹಿದಂತಿರ್ದಂ. ಕಯ್ಯ ಕೊಡೆಯಿಂ, ಮಯ್ಯ ತೆರೆಯಿಂ, ಜೋಲ್ವ ಪುರ್ವಿಂ, ನೇಲ್ವ ತೋಳ ತೊವಲಿಂ, ಇಟ್ಟ ವಿಭೂತಿಯಿಂ, ಊಜಿದ ಯಷ್ಟಿಯ ಕೋಲಿಂ, ಪಿಡಿದ ಕಮಂಡಲದಿಂದಿಳಿದ ಬೆಳುಗಡ್ಡದಿಂ,

ನಡುಗುವ ನರೆದಲೆಯಿಂ, ನರೆತು ಸಡಿಲ್ದ ಸರ್ವಾಂಗದಿಂ, ಪುಣ್ಯಂ ಪಣ್ಣಾದಂತೆ, ಒಮ್ಮೊಮ್ಮೆ ಕೆಮ್ಮುತ್ತೊಮ್ಮೊಮ್ಮೆ ಗೂಹೆಗೊಹೆಗುಟ್ಟುತುಂ, ಶಿಥಿಲಾಕ್ಷರಂಗಳಿಂ " ನಮಃ ಶಿವಾಯ, ನಮಃ ಶಿವಾಯ " ಯೆನುತ್ತೆನಲಾಱದಂತೆ ನಡುಗುತ್ತುಂ, ಹೊಱಗೆ ನೆರೆದ ನೆರವಿಗಳೆಲ್ಲಂ ನೋಡುತ್ತಿರಲು ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡವರ್ ಪೊಗಲೀಯದಿರ್ದೊಡೆ, ಅವಂದಿರಱಿಯದಂತೆ ಪೊಗುತಪ್ಪಾಗಳು—

ದಂಡೆಗಳಂ ಮುಡಿದುಕೊಂಡುಂ ಜನವನೆಚ್ಚಿಕೊಂಡಾಭರಣಮುಂ ತೊಟ್ಟುಕೊಂಡು, ದಿವ್ಯ ವಸ್ತ್ರಮನುಟ್ಟುಕೊಂಡು ಸಂತಸದಿಂ ಸಂದಣಿಗೊಳ್ವ ಸುವಾಸಿನಿಯರಿಂ, ಮಂಟಪದ ನಡುವಣ ವೇದಿಕೆಯ ಹೋಮದ ಪರಿಸ್ತರಣದ ಸುತ್ತಂ ಕುಳ್ಳಿರ್ದ ವಿಪ್ರಸಂಕುಳದಿಂ, ಬಂದು ನೆರೆದ ಬಂಧುಗಳಿಂ, ಮುಂದಿರ್ದ ಮಾನ್ಯವರ್ಗದಿಂ, ಅತ್ತಲಿತ್ತಲೆಡೆಯಾಡುವ ಸಂಭ್ರಮಕಾಱರಿಂ, ಬಾಜಿಸಲಿರ್ದ ಬದ್ದವಣರಿಂ. ಘಳಿಗೆವಟ್ಟಲಂ ಪರಿವೇಕ್ಷಿಸಿರ್ದ ನಕ್ಷತ್ರಪಾಠಕರಿಂ, ಕಿಕ್ಕಿಱಿಗಿಱಿದ ವಿವಾಹಮಂಟಪಮಂ ಪೊಗುತಿರ್ಪ್ಪ ತಮ್ಮನಾರುಮಱಿಯದೆ, ಕಾಣದೆ, ಲೆಕ್ಕಿಸದ ಸಂಭ್ರಮದೊಳಿರೆ, ಮೆಲ್ಲಮೆಲ್ಲನೆಲ್ಲವ ನೋಡುತುಂ, ಮನದೊಳ್ ನಗುತುಂ, ಕೋಲ ನೂಱುತೆ ಕೆಮ್ಮಿ ಕುಮ್ಮುತ್ತೆ, ಸಾಲ್ಗೊಂಡಿರ್ದ ತುಪ್ಪದ ಕೊಡಂಗಳೊಳ್ ನಾಲ್ಕೆರಡನೆಡಹಿ ನಮಃ ಶಿವಾಯಯೆಂಬ ವೃದ್ಧಧ್ವನಿ ಪುಟ್ಟೆ, ಕೊಡಂಗಳ ಮೇಲೊಡೆಬಿಳ್ದು, ಕುಳ್ಳಿರ್ದರ ಮುಖದೊಳು, ಕಣ್ಣೊಳಂ, ಮಯ್ಯೊಳಂ ತುಪ್ಪಂ ಚೆಲ್ಲೆ ಎಲ್ಲರೆರ್ದು ಮಲ್ಲಳಿಗೊಂಡು, ಘೊಳ್ಳೆಂದು ಬಿಳ್ದ ವೃದ್ಧ ಮಾಹೇಶ್ವರನು ಮುತ್ತಿಕೊಂಡೆತ್ತಲನುವಾಗಿ, ಮೆಲ್ಲನೆ ನೆಗಪಿ ನಿಂದಿರಿಸಲ್, ಒಂದೆರಡಡಿಯಿಟ್ಟು ದಡದಡಿಸಿ, ನೋಡುವ ಜನವೆಲ್ಲಂ ಎಲೆಲೆ ವೃದ್ಧನಾ ಬಿದ್ದನೆಂಬಲ್ಲಿ ಮುನ್ನಂ ನಿಲಲಾಱದೆ ಹಳಿಲನೆ ಘಳಿಗೆವಟ್ಟಲ ಮೇಲೆ ಬೀಳೆ, ಕಳಸಿಗೆಯೊಡೆದು ಘಳಿಗೆವಟ್ಟಲು ಮುಱಿದು, ತಂಡುಲಂ ಚೆಲ್ಲಿ ಜೋಯಿಸರೆಲ್ಲಂ ಕೆದಱಿ ಪೋಗೆ, ಬಿದ್ದೇಳಲಾಱದೆ ಹಮ್ಮೈಸಿದಂತಿರೆ ಪರಿತಂದು, ಕಣ್ಣೊಳಂ, ಬಾಯೊಳಂ ನೀರಂ ತಳಿದೆಂತಕ್ಕೆಚ್ಚಱಿಸೆ, ಎತ್ತುವರ ಕಯ್ಯ ಬಾಯೊಳ್ ಜೀವಂ ಹಿಡಿಯಬಾರದು, ಮುಟ್ಟಬಾರದು. ನೋಡಬಾರದು, ನುಡಿಸಲರಿದು. ಪಿಡಿದು ಬಿಟ್ಟಡೆ ತುಪ್ಪದ ಕೊಡನ ಮೇಲಲ್ಲದೆ ಬೀಳಂ. ಈ ವೃದ್ಧ ಬ್ರಾಹ್ಮಣನನೀ ಮುಪ್ಪಿನ ಮರುಳನನೀ ಗೌತಮನ ಗೋವನೀ ಬ್ರಹ್ಮೇತಿಕಾಱನನಾರ್ ಪೊಗಿಸಿದರಾರ್ ತಂದರ್—ಇದೆ ಅವಶಕುನವಿನ್ನೇನೀ ಮದುವೆ ಹಸನಾಗದೆನುತ್ತೆಲ್ಲರುಂ ಮೆಲ್ಲನೆ ಕಯ್ಯುಮಂ, ಕಾಲುಮಂ ಪಿಡಿದೆತ್ತಿಕೊಂಡು ಹೋಗಿ ತಮ್ಮಾಯುಷ್ಯ ಭಾಷೆಗಳಂ ಪೊಱಗಿಡುವಂತೆ ಚಪ್ಪರದ ಪೊಱಗೆ ಮೆಲ್ಲನಿಳುಪಿ, ಈ ವಿಪ್ರನಂ ಪೊಗಲೀಯದಿರೀ ವೃದ್ಧನಂ ಪೊಗಿಸದಿರೆಂದು ಬಾಗಿಲವನನದುಹುತ್ತ ಕದವನಿಕ್ಕಿ ಒಳಗಂ ಪೊಗುವ್ವಸಕ್ಕೆ ಅವಱಿಂ ಮುನ್ನವೆಯ್ತಂದೊಳಗಂ ಪೊಕ್ಕು, ತೋರಣದ ತಳಿರ ಪಱಿದು ಶಿವದಿಡುತ್ತಿರಲ್—ಅವರ್ ಕಂಡು ಬೆಱಗಾಗಿ, ಈಗಳಿಂತು ಪೊಱಗಿರಿಸಲಾಗಳಂತೆ ಬಂದು ಮುಂದಿರ್ದಪನೀ ವೃದ್ಧಂ ಕಿಱುಕುಳನಲ್ಲ, ಕಾರಣಿಕನಾಗಲೆವೇಳ್ಕುಮೆಂದು ನೋಡುತ್ತಿರೆ—

ಯಷ್ಟಿಯ ಕೋಃಲಿಂ ಭಿಂಗಾರಿಗಳನಿಱಿದೊಡೆವುತ್ತುಂ, ಜಗಲಿಯುಂ ದರಿಗೆಡಹುತುಂ ಮಂಗಳವೆಲ್ಲವನವುಂಗಳವು ಮಾಡುತ್ತಿರಲ್—ಅಲ್ಲಿಯ ಪಿರಿಯರುಂ ಮಾನ್ಯರುಂ ಕಂಡೆಲೆ ಜಪ್ಪರೆ, ಇತ್ತ ಬಿಜಯಂ ಗೆಯ್ವುದೆನೆ, ಕೇಳದಂತೆ ಮತ್ತೆ ಮತ್ತೆ ಶಿವದಿಡುತ್ತೆ—ಎನ್ನ ತೊತ್ತಿನ ಮಗನಂ ಕುಮಾರನೆಂದುಃ, ಸತ್ಕುಲಜನೆಂದು ಬಗೆದು, ಹೆಣ್ಣಂ ಕೊಟ್ಟು, ನಿಮ್ಮ ಕುಲಮಂ ಕಿಡಿಸಿ ಕೊಳ್ಳದಿರಿ; ನಾನಪ್ಪಡೆ ಮದುವೆಯನಾಗಲೀಯೆಂ; ನೀವಿದಱಾದ್ಯಂತವನೇನೆಂದಱಿಯಿರಿ. ಅವಂ ನರಸಿಂಗ ಮೊನೆಯರ್ ಪೆತ್ತ ಮಗನಲ್ಲಂ, ಕೊಂಡು ಸಾಕಿದ ದತ್ತಪುತ್ರನವಂ, ಶಿವಬ್ರಾಹ್ಮಣಂ ಸೌಂದರಪೆರುಮಾಳೆಯುಲ್ಲಂ, ನಂಬಿಯೆಂದು ಎನ್ನ ತೊತ್ತಿನ ಮಗಂ. ಅದಕ್ಕೆ ಪ್ರಮಾಣಪತ್ರ ಮುಂಟೆಂದಾ ಸುರಂ ಮಸಗಲಾ ತಾಯ್ತಂದೆಗಳ್ ಕಂಡು ಕೌತುಕಂಬಟ್ಟು, ಎಮಗೀ ಮದುವೆಯುಂತಿರ್ಕೆ, ಮುನ್ನವೀ ಬ್ರಾಹ್ಮಣನ ಬ್ರಹ್ಮಹತ್ಯಾದೋಷಂ ತಪ್ಪಿತಿದೆ ಸಾಲ್ಗುಂ, ಎಲೆ ಅಯ್ಯಾ, ಚಿತ್ತೈಸೆಮ್ಮ ಮಾತಂ ಸೀಂತಡೊಳಗಾಗಿ ಮಹಾಪ್ರತಿಷ್ಠೆಗಳಂ ಮಾಣ್ದು ಕಳೆವರಲ್ಲದೆ ಪ್ರತ್ಯಕ್ಷ ಶಿವನಂತಿರ್ದ ನೀವೆ ಬಂದು ತುಪ್ಪದ ಕೊಡನನೊಡೆದು ಕೆಡಹಿ, ತೋರಣದ ತಳಿರಂ ಪಱಿದು, ತಿಱಿದು, ಘಳಿಗೆವಟ್ಟಲನೊಡೆದು ಕೆಡಹಿ, ಮೊಱೆಯಿಟ್ಟು ಶಿವದಿಟ್ಟು ವೇದಿಕೆಯುಂ ಕೆಡಹಿ, ಕುಲಂ ಪೊಲ್ಲಮೆಂದ ಬಳಿಕ್ಕಿನ್ನಾವ ಮೂಗು ಮುಂದಿಟ್ಟು ಮದುವೆಯ ಮಾತನಾಡಿದಪೆವು. ಅದುತಿರ್ಕೆ. ನೀವಿಲ್ಲಿಂದು ಹದುಳಹೋದಡೆ ಸಾವಿರ ಮದುವೆಯ ಮಾಡಿದ ಸಂತಸಂ. ಅದಲ್ಲದೆ ನೀವಱಿಸುವ ನಂಬಿಯಣ್ಣಂ ಬನದೊಳೈದನೆ ಅವನೊಡನಾಡಿಕೊಂಬುದುಃ, ಎಮ್ಮಿಂ ನಡಲಾಗದು, ನಿಮ್ಮಡಿಗಳು ಬಿಜಯಂಗೈಯ್ವುದು ಸ್ವಾಮಿ ಎನಲ್—

ಅಲ್ಲಿಂ ತಳರ್ದು ಮೋನದಿಂ ಸಾಧುಬ್ರಾಹ್ಮಣನಂತೆ ಚಪ್ಪರದಿಂ ಪೊಱಮಟ್ಟು, ಸೌಂದರಪೆರುಮಾಳೆಯಿರ್ದ ವನಕ್ಕೆ ಬಂದು. ಅಲ್ಲಿ ಮುಂದೆ ನೆರೆದಿರ್ದ ನೆರವಿಯಂ ಬಗಿದು—ತನ್ನ ಭಕ್ತನ ಕೂಡಿಕೊಂಡಿರ್ದವರೆಲ್ಲಂ ಕೃತಾರ್ಥರಾಗವೇಳ್ಕೆಂಬಂತೆ, ಕುಳ್ಳಿರ್ದೋಲಗದ ಮಕುಟ ವರ್ಧನರನೆಡಹುತುಂ ತಾಗುತುಂ, ಮೇಲಂಗಳು ಸಿಡಿಯೆ ಕೆಮ್ಮುತುಂ, ನಡುಗುತುಂ, ಕೊಡೆಯುಂ, ಕೋಲುಂ, ಕಮಂಡಲಮುಂ, ಪ್ರಮಾಣಪತ್ರಮುಂ, ಸಹಿತಂ ಬಂದು. ನಂಬಿಯಣ್ಣನ ಸಿಂಹಾಸನದ ಮುಂದೆ ನಿಲೆ, ಕುಮಾರಂ ಕಂಡು ಎಲೆ ಅಯ್ಯ, ಏನನೆಳಸಿ ಬಂದಿರೊಳ್ಳಿತಪ್ಪ ಸಮಯ ವೇನಾದೊಡಂ ಬೇಡಿಕೊಳ್ಳಿಮೆನಲಾ ಮಾತಿನೊಡನೆ ನಾಲಗೆಯ ಕೀಲುಚ್ಚಿದಂತೆ, ಎಲವೋ ನಾಂ ಬೇಡಿ ಬರ್ಪವಂ, ನೀಂ ಕೊಡುವವಂ, ಏಕೆ ? ಕೊಡುವುದಕ್ಕಕ್ಕು ನಡೆನಡೆ, ನಿನ್ನಂ ಬೇಡಿ ಬಂದುದುಂಟುಂಟು. ನೀನೆಮ್ಮ ತೊತ್ತಿನಮಗಂ, ನಿನ್ನ ಪೆಸರು ನಂಬಿಯೆಂಬುದು. ಇನಿತು ದಿನಂ ಶುಶ್ರೂಷೆಗೆ ಸಮರ್ಥನಲ್ಲದ ಕಾರಣದಿಂ ಬಾರದಿರ್ದೆವು—ಈಗಳು ಪತ್ತೆಂಟು ಹರೆಯದ ಗಂಡುದೊತ್ತಾದೆ. ಏಳೇಳು, ಕೊಡೆಯುಮಂ, ಕಮಂಡಲಮುಮಂ ಪಿಡಿಪಿಡಿಯೆಂದು ಸಿಂಹಾಸನ ದೊಳಗಿರ್ದ ಕುಮಾರಂಗೆ ನೀಡೆ, ಕುಳ್ಳಿರ್ದ ಸಭೆ ಕೌತುಕಂಬಟ್ಟು ಮುಟ್ಟಬಾರದ ಮಾಹೇಶ್ವರ ಪಾರ್ಗರ್ಪಂ—ಎಂತು ಮಾಡುವವನೆನುತ್ತಮಿರೆ ಸೌಂದರಪೆರುಮಾಳೆ ಪಿರಿದು ಕೋಪದಿಂ, ಹಾಱಿ ನೂಂಕಿ ಮೀಱಿ ನುಡಿವುತ್ತೀ ಪಿಚ್ಚ ಬ್ರಾಹ್ಮಣನನೀ ಹೆಡ್ಡ ವೃದ್ಧನಂ ತಂದವರಾರೊ ಪಿಡಿದು ನೂಂಕೆನಲಲ್ಲಿಯ ಪಡಿಯಱರು ಪಿಡಿದು ನೂಂಕೆ, ಮುಟ್ಟದ ಮುನ್ನವೆ ತೊಟ್ಟನೆ ಬಿದ್ದು

ಬೆನ್ನುಳಿಕಿದಂತುಸುರು ಪಿಡಿವುತುಂ, ಕಾಲು ನೊಂದಂತೆ ನೀಡಿ ನರಳುತುಂ, ನಮಃ ಶಿವಾಯ ನಮಃ ಶಿವಾಯಯೆನುತಿರ್ದ ವೃದ್ಧನನೆತ್ತಿ ತಂದು ತೋಪಿನ ಪೊಱಗಿಳುಪಿ ಬರಲ್—

ಅತಿವೇಗದೊಳಿರ್ದು ನಾಲ್ಕೆರಡಾಳುದ್ದದದೊಂದು ಕಾಣಲ್‌ಬಪ್ಪ ದಿಣ್ಣೆಯಂ ಗಳಗಳನೇಱಿ ಕಣಿಗಿಲೆಯ ಸೊಪ್ಪಂ ಪಿಡಿದು, ಸಿಂಹಧ್ವನಿಯಿಂ ಶಿವದಿಟ್ಟು. ಇವಂ ನರಸಿಂಗಮೊನೆಯರ್ ಪುತ್ರ ಮಗನಲ್ಲಂ, ಕೊಂಡು ಸಾಕಿದವಂ—ಇವನ ಪೆಸರು ಸೌಂದರಪೆರುಮಾಳೆಯಲ್ಲ, ನಂಬಿಯೆಂಬುದು, ತಂದೆತಾಯ್ಗಳು ಶಿವಬ್ರಾಹ್ಮಣರು, ಜಡೆಯ ನಾಯನಾರು ಯಸ್ಯಜ್ಞಾನಿ ದೇವಿಯರೆಂಬ ಪೆಸ ಮಂದಿರೆನಗೆ ಕುಲವಳಿಯ ಬಳಿದೊತ್ತಿರಪ್ಪುದಱಿಂದೀ ನಂಬಿಯನೆನಗೆ ತೊತ್ತಿನ ಮಗನಾಗಿ ಕೊಟ್ಟರದಕ್ಕೆ ಪ್ರಮಾಣಪತ್ರಮುಂ, ಸಾಕ್ಷಿಗಳುಂಟು ಇವಂ ದೊಡ್ಡಿಯಾಳ್ಕುದುರೆಯಂ ತೋಱಿ ಮೀಱಿ ಕಾಡಿದಡೆ—ಎನ್ನ ಸತ್ತ ಸಾವುಂ, ಕೆಟ್ಟ ಕೇಡುಂ ನಂಬಿಯುಮುಂ ನರಸಿಂಗ ಮೊನೆಯರುಮುಂ ತಾಗುವುದು—ಇದು ಚೋಳದೇಶದ ಮಹಾಗಣಂಗಳಱಿವುದೆಂದು ಕಯ್ಯೆತ್ತಿ ಶಿವದಿಡುತ್ತಿರಲ್—

ಇತ್ತ ಮಣಮಂದ ಪುತ್ತೂರೀದೊರ್ವಂ ಪರಿತಂದು ಮಯ್ಯಿಕ್ಕಿ, ದೇವ ಇಂದೀಗಳೊರ್ವ ವೃದ್ಧ ಮಾಹೇಶ್ವರರು ಬಂದು ಚಪ್ಪರವಂ ಮುಱಿದು, ತೋರಣಮಂ ಪಱಿದು, ವೇದಿಕೆಯ ಕೆಡಹಿ ಬಾಯ್ಗೆ ಬಂದುದನೆಂದು, ಕಯ್ಗೆ ಬಂದುದಂ ಮಾಡಿದಂ, ಇದೆಮಗಪಶಕುನ. ಈ ಬಾರಿಯ ಮದುವೆಯಳವಡದೆನುತ್ತೆ—ಅವಂ ಪೋಗಲದಂ ಕೇಳ್ದು ತುಂಬುರಂ ಮೊದಲಾದ ಮಂತ್ರಿಗಳಿದ್ದು ದೇವ, ಈ ಬ್ರಾಹ್ಮಣನಲ್ಲಿ ಇಂತು ಮಾಡಿ ಬಂದಂ—ಇಲ್ಲಿ ಪ್ರಮಾಣಪತ್ರ ಮುಂಟೆಂದು ಶಿವದಿಡುತ್ತಿರ್ದಪಂ—ಆತನಂ ಕರಸಿ ಕೇಳ್ದು ಮುನ್ನೀ ತತ್ತ ಕಾರ್ಯಮಂ ತೀರ್ಚಿ ಕೊಂಬುದು. ಅದಲ್ಲದೆಯುಂ ಮಾಹೇಶ್ವರ ಸಮಯವತಿಬಲ್ಲಿತ್ತಿಲ್ಲಿ ಚೋಳಾದಿಗಳಿಗಂಬ್ಬನ್ನ ಇಂದ್ರಾದಿಗಳು ಮೀಱಲಮ್ಮರು—ಅದುಕಾರಣಂ ಉದಾಸೀನಂ ಬೇಡ, ಇದಂ ಮೀಱಿದೊಡೆ ನರಸಿಂಗಮೊನೆಯರ್ ಮುನಿವರು—ಅವರಂ ಕರೆದು ವಿಚಾರಿಸುವುದೆನುತ್ತೆ—ಆ ವೃದ್ಧ ಮಾಹೇಶ್ವರನಂ ಕುಮಾರನಲ್ಲಿಗೊಡಗೊಂಡು ಬರ್ಪಾಗಳು, ತಾನೆಮ್ಮ ತೊತ್ತಿನ ಮಗಂ; ತನ್ನ ಭವಮಂ ಮಱಿದನೆ. ಎನ್ನ ಪರಿಯೆಲ್ಲವನೀಗಳೆ ತೋಱಿಕೊಟ್ಟಪೆಂ, ತನ್ನೆರವಿನ ಸಿರಿಯಂ ನಂಬಿ ಎನ್ನಂ ಮಱೆದಡಾಂ ಬಿಡುವನಲ್ಲೆಂದು ಕೆಲಬಲದವರ್ ಕೇಳ್ವಂತೆ ಗುಜಗುಜುಗೊಳುತುಂ ಬಂದು ಕುಮಾರನ ಮುಂದೆ ನಿಂದಿರ್ದು, ಮಾಣದೆ ಗೊಡವೆಗುಟ್ಟುತ್ತಿರಲ್, ಎಲೆಲೆ ಪಿಚ್ಚ ಬ್ರಾಹ್ಮಣ ನಾನೇ ನಿನಗೆ ತೊತ್ತಿನ ಮಗ? ನಾನೆ ನಾನೆಯೆನೆ. ನೀನೆ ನೀನೆಯೆಂದು ಕೈವಿಡಿದೆಳೆವುದುಂ ಕೆರಳ್ದು ಕುಮಾರಂ ಕೆಂಪಡರ್ದ ಕಂಗಳಿಂ, ಕೆತ್ತುವ ಮೀಸೆಯಿಂ, ನಡುಗುವ ಸರ್ವಾಂಗ ದಿಂದೆದ್ದು ವೃದ್ಧನಂ ಕೊಲುವೆನಾದುದಕ್ಕೆಂದು ಕೈನೀಡಿ ತಿವಿಯಲುವ್ವಳಿಸೆ ತುಂಬುರಾದಿಗಳ ಪೊಕ್ಕು ಇರ್ವರುಮಂ ಬೇಱೆ ಬೇಱೆ ನಿಲಿಸಿ, ಕುಮಾರನಂ ಬುಜ್ಜಯಿಸಿ ಕೈಮುಗಿದು, ಹೇ ಎಲೆಯಯ್ಯಾ, ನಿಮ್ಮ ಪ್ರಮಾಣಪತ್ರಮಂ ತೋಱಿಂದೀಸಿಕೊಂಡೊರ್ವ ಗಣಕನ ಕಯ್ಯೊಳು ಕುಡಲವನೋದಿದನದೆಂತೆಂದೊಡೆ.

ಮೊದಲ ಈಶ್ವರ ಸಂವತ್ಸರದ ಮಾಘ ಬಹುಳ ಚತುರ್ದಶಿಯ ಸೋಮವಾರದಂದು, ಛತ್ರಪುರದ ಶ್ಮಶಾನಶಯನಭಟ್ಟರಿಗೆ ಶಿವಬ್ರಾಹ್ಮಣರಪ್ಪ ಜೆಡೆಯ ನಾಯನಾರುಂ ಯಸ್ವ ಜ್ಞಾನಿದೇವಿಯರುಂ ತಾವಿವರ್ಗೆ ವಂಶಾವಳಿಯಾಗಿ ಬಂದ ಬಳಿದೊತ್ತಿರ ಮಕ್ಕಳಾದ ಕಾರಣದಿಂ, ತಮ್ಮ ಪುತ್ರ ನಂಬಿಯಂ ಬಳಿದೊತ್ತಾಗಿ ಕೊಟ್ಟರು. ಇಂತಪ್ಪುದಕ್ಕೆ ಸಾಕ್ಷಿಗಳು ತಿರುವೆಣ್ಣೆನಲ್ಲೂರ ರುದ್ರಭಟ್ಟರು, ಈಶಾನಭಟ್ಟರು, ಮಾಹೇಶ್ವರಭಟ್ಟರು, ರುದ್ರ ಪಶುಪತಿಗಳು, ಸಹಸ್ರವೇದಿಗಳು ಮೊದಲಾದ ಮಹಾಸಭ್ಯರ ಸಾಕ್ಷಿ. ಆವೂರ ಗಣಕ ತಿರುಚಿಟ್ಟಂ ಬಲಮಳಘೆಯರ ಲಿಖಿತಮೆಂದುಮಿರಲದಂ ಕೇಳ್ದು ತುಂಬುರನಿಂತೆಂದು—ಈ ವೃತ್ತಾಂತಮಂ ನರಸಿಂಗಮೊನೆಯರ್ಗಱುಪವೇೞ್ಕುಮೆಂದೊರ್ವ ಚಾರನ ಕಯ್ಯೊಳು ಬಿನ್ನವಿಸಿ ಕಳುಪಲ್—

ಆವಂ ವಾಯುವೇಗದಿಂ ಬಂದರಸನ ಚರಣದೊಳು ಬಿದ್ದು ದುಃಖಾಕುಳನಾಗುತ್ತೆ, ಕಣ್ಣನೀರಿಂ ಬಿಗಿದ ಸೆರೆಯಿಂ ಮುಂದುಗೆಡಿಸಿ, ದೇವದೇವಾ, ಕುಮಾರಂ ತೊತ್ತಿನ ಮಗಂ, ತೊತ್ತಿನ ಮಗನೆನುತ್ತಿರಲ್—ಇದೇನಿದೇನೆನುತ್ತವನಂ ಸಂತೈಸಿ ತಿಳಿಯ ಬಿನ್ನವಿಸೆನೆ, ದೇವ ಒರ್ವ ವೃದ್ಧ ಮಾಹೇಶ್ವರಂ ಬಂದು ಮದುವೆಯಂ ಕೆಡಿಸಿ ಕುಮಾರನಂ ನಿಮ್ಮ ಮಗನಲ್ಲ, ತನ್ನ ತೊತ್ತಿನ ಮಗನೆಂದೊಂದು ಪತ್ರಮಂ ಪಿಡಿದು ಶಿವದಿಡುತ್ತಿರ್ದಪಂ –ಆ ಮಹಾವೃದ್ಧನಂ ಮುಟ್ಟಬಾರದು, ನುಡಿಯಬಾರದು, ಸೋಂಕಬಾರದು ; ಪರೆಯುವಂಬಡೆ ನೂಱುವರುಷ. ಅದಟೆಂಬಡಖಂಡಿತ, ಇದಕ್ಕೆಂತು ಮಾಡುವವೆಂಬ ಮಱುಮಾತಂ ಕರುಣಿಪ್ಪುದೆಲ್ಲರುಂ ಮುಂದುಗೆಟ್ಟಿರ್ದಪರೆನೆ, ನರಸಿಂಗಮೊನೆಯರ್ ತಾಂ ಭಕ್ತನಪ್ಪುದಱಿಂದಿಂತೆಂದಂ ; ಮಾಹೇಶ್ವರಸಮಯದೊಳು ಪುಸಿಯ ನುಡಿಯಲಾಗದು–ಎಂತಪ್ಪುದೆಂದಱಿಯಲ್ಬಾರದು ; ಎಂತುಂ ನಾವು ಪೆತ್ತ ಮಗನಲ್ಲ, ಕೊಂಡು ಸಾಕಿದ ಮಗನಪ್ಪುದಿದಕ್ಕೆ ಧರ್ಮಮೆಂತಿರ್ದುದಂತೆ ಮಾಡುವುದೆಂದು ಬೆಸಸಿ ಕಳುಪಲ್—

ಆವಂ ಕುಮಾರನಲ್ಲಿಗೆಯ್ತಂದು ನ್ಯಾಯಮೇನಂ ಪೇೞ್ದೊಡಂ ಮಾೞ್ಪುದೆಂದು ಬೆಸಸಿದರೆನಲ್— ಇದು ಇಂತಾದುದೇವೆನೆನುತುಂ ನಂಬಿಯಣ್ಣನಾ ವೃದ್ಧನಿರವಂ ನೋಡಿ, ಒಮ್ಮೊಮ್ಮೆ ಶಂಕಿಸುತ್ತುಂ, ಒಮ್ಮೊಮ್ಮೆ ಕೋಪಿಸುತ್ತುಂ, ಒಮ್ಮೊಮ್ಮೆ ಉಮ್ಮಳಿಸುತ್ತುಂ, ಒಮ್ಮೊಮ್ಮೆ ಬೆಱಗಾಗುತ್ತುಂ, ಎಲೆಯಯ್ಯ ನಿನ್ನ ಸಾಕ್ಷಿಗೀಕ್ಷಿಗಳ ನೋಡಿಕೊಂಬೆವೆನುತ್ತುಂ ತಿರುವೆಣ್ಣೆನಲ್ಲೂರ್ಗೆ ಪೊರಮಟ್ಟಾಗಳು ||

## ಟಿಪ್ಪಣಿ

### ಕೃತಿ ಮತ್ತು ಕರ್ತೃ :—

ಹಂಪೆಯ ವಿರೂಪಾಕ್ಷನ ಸದ್ಭಕ್ತರಾದ ಮಹದೇವಭಟ್ಟ–ಶರ್ವಾಣಿ ಎಂಬ ಸಾತ್ವಿಕ ದಂಪತಿಗಳ ಹಿರಿಯಮಗ ಹರಿಹರ. ಈತನು ಮಾಯಿದೇವನೆಂಬ ಗುರುವಿನಲ್ಲಿ ವಿದ್ಯಾಭ್ಯಾಸ ಮಾಡಿ ಕೆಲಕಾಲ ದ್ವಾರಸಮುದ್ರದ ಹೊಯ್ಸಳರಾಜ ನರಸಿಂಹ ಬಲ್ಲಾಳನಲ್ಲಿ ಕರಣಿಕನಾಗಿದ್ದ. ಹೀಗೆ ಕರಣಿಕನಾಗಿದ್ದವನು ಕಾರಣಾಂತರಗಳಿಂದ ಹಂಪೆಗೆ ಹಿಂದಿರುಗಿ ಕಾರಣಪುರುಷನಾದನು.

ಮಹಾ ಭಗವದ್ಭಕ್ತನಾದ ಈ ಸಂತಕವಿಯು ಪಂಪಾಶತಕ, ರಕ್ಷಾಶತಕಗಳೆಂಬ ಎರಡು ಶತಕಗಳನ್ನೂ, ಗಿರಿಜಾಕಲ್ಯಾಣವೆಂಬ ಒಂದು ಚಂಪೂಗ್ರಂಥವನ್ನೂ, ನೂರಾರು ರಗಳೆಗಳನ್ನೂ ಬರೆದಿದ್ದಾನೆ. ಈತನ ಕಾಲ ಸುಮಾರು ಕ್ರಿ. ಶ. ೧೨೦೦.

ಕನ್ನಡ ಸಾಹಿತ್ಯದ ಉದ್ದಾಮಕವಿಗಳ ವಿರಳಪಂಕ್ತಿಯಲ್ಲಿ ಹರಿಹರನಿಗೆ ಒಂದು ಪ್ರಮುಖವಾದ ಸ್ಥಾನವಿದೆ. ಈತನ ಪ್ರತಿಭೆ, ಕಲ್ಪನಾಶಕ್ತಿಗಳು ಅಸಾಧಾರಣವಾದುವು. ಇವಕ್ಕೂ ಹೆಚ್ಚಾಗಿ ಈತನೊಬ್ಬ ಸ್ವತಂತ್ರ ಮನೋವೃತ್ತಿಯ ಕ್ರಾಂತಿಕಾರ. ಕನ್ನಡ ಸಾಹಿತ್ಯದಲ್ಲಿ ಪ್ರಾರಂಭದಿಂದಲೂ ಬಳಕೆಯಲ್ಲಿ ಬಂದಿದ್ದ ಚಂಪೂಶೈಲಿಗೆ ಬದಲಾಗಿ ಶುದ್ಧ ದೇಶೀಯ ಛಂದಸ್ಸಿನ ರಗಳೆಯಲ್ಲಿ ಕಾವ್ಯಸೃಷ್ಟಿಗೆ ಕೈಹಾಕಿದ. ಕನ್ನಡ ಸಾಹಿತ್ಯದಲ್ಲಿ ಎಲ್ಲೋ ಕ್ವಚಿತ್ತಾಗಿ ಬಳಕೆಯಲ್ಲಿದ್ದ ಈ ಛಂದಸ್ಸನ್ನು ಇಡೀ ಕಾವ್ಯಸೃಷ್ಟಿಗಾಗಿ ಬಳಸಿಕೊಂಡ ದಿಟ್ಟತನ ಈತನದು. ಜನರ ಮಾತಿನಲ್ಲಿ, ಜನರ ಛಂದಸ್ಸಿನಲ್ಲಿ ಕಾವ್ಯಸೃಷ್ಟಿ ಮಾಡಿದ ಕೀರ್ತಿ ಆತನದು.

ಹರಿಹರನ ರಗಳೆಗಳು ಹಲವು ಪುರಾತನ ಮತ್ತು ನೂತನ ಶಿವಶರಣರ ಜೀವನ ಚರಿತೆಗಳನ್ನು ಒಳಗೊಂಡಿವೆ. ಅಂತಹವುಗಳಲ್ಲಿ ನಂಬಿಯಣ್ಣನ ರಗಳೆಯೂ ಒಂದು. ತಿರುನಾವಲೂರು ಎಂಬ ಪಟ್ಟಣದಲ್ಲಿದ್ದ ಶಿವಭಕ್ತ ದಂಪತಿಗಳಾದ ಜಡೆಯ ನಾಯನಾರ-ಇಸೈಜ್ಞಾನಿದೇವಿಯರ ಪುಣ್ಯಗರ್ಭದಲ್ಲಿ ಜನಿಸಿದ ಸೌಂದರನಂಬಿಯು, ಅಪುತ್ರವಂತನಾದ ಆವೂರಿನ ರಾಜ ನರಸಿಂಹ ಮೊನೆಯರ ಸಾಕುಮಗನಾಗಿ ಬೆಳೆದು ಯೌವನವನ್ನು ಪಡೆದನು. ರಾಜನು ತನ್ನ ಈ ಸಾಕುಮಗನಿಗೆ ವಿವಾಹ ಮಾಡಬೇಕೆಂದು ಹವಣಿಸುತ್ತಿರುವಾಗ ಪರಮೇಶ್ವರನು ಶತವೃದ್ಧನ ವೇಷದಿಂದ ಕಾಣಿಸಿಕೊಂಡು, ನಂಬಿಯು ತನ್ನ ತೊತ್ತಿನಮಗನೆಂದು ಹೇಳಿ, ಅದಕ್ಕೆ ತಕ್ಕ ಪ್ರಮಾಣಪತ್ರವನ್ನು ತೋರಿಸಿ ಮದುವೆಯನ್ನು ತಪ್ಪಿಸುತ್ತಾನೆ. ಇದು ಪಠ್ಯ ಭಾಗದಲ್ಲಿ ಬಂದಿರುವ ಕಥೆ. ಒಟ್ಟು ಹತ್ತೊಂಬತ್ತು ಸ್ಥಲಗಳಲ್ಲಿ ಹರಡಿರುವ ನಂಬಿಯಣ್ಣನ ಜೀವನ ವೃತ್ತಾಂತದಲ್ಲಿ ಆರನೆಯ ಸ್ಥಲವನ್ನು ಇಲ್ಲಿ ಆಯ್ದುಕೊಂಡಿದೆ. ಸುದೀರ್ಘವಾದ ಜೀವನ ಚರಿತ್ರೆಯನ್ನು ಬರೆಯುವಾಗ ಅದನ್ನು ಬೇರೆ ಬೇರೆ ಸ್ಥಲಗಳಾಗಿ ವಿಂಗಡಿಸಿ, ಒಂದು ಸ್ಥಲವನ್ನು ರಗಳೆಯಲ್ಲಿಯೂ, ಮತ್ತೊಂದನ್ನು ಗದ್ಯದಲ್ಲಿಯೂ ಅನುಕ್ರಮವಾಗಿ ಬರೆದುಕೊಂಡು ಹೋಗುವುದು ಹರಿಹರ ಕವಿಯ ಪದ್ಧತಿ. ಆತನ ಕೈಯಲ್ಲಿ ಗದ್ಯಸಾಹಿತ್ಯ ಮೈದುಂಬಿಕೊಂಡು ಕಳೆಗೊಂಡಿತು. ಕನ್ನಡ ಗದ್ಯಸಾಹಿತ್ಯ ಚರಿತ್ರೆಯಲ್ಲಿ ಆತನೊಂದು ಮೈಲಿಗಲ್ಲು.

ಕಠಿಣ ಪದಗಳ ಅರ್ಥ :

ತತ್ಪರ—ಆಸಕ್ತ. ಪರಿಮಿತ—ಮಿತಿಯಾದ, ಗೊತ್ತಾದ. ಪರಿವಾರ—ಸುತ್ತಮುತ್ತಲ ಜನ. ಮುನ್ನಿತ್ತ—ಮುನ್ನ+ಇತ್ತ (ಸ್ವ.ಲೋ.ಸಂ.) ಮುಂಚಿತವಾಗಿ ಕೊಟ್ಟ. ಬೆಂಬಳಿಗೊಂಡು—ಹಿಂಬಾಲಿಸಿ. ತೊತ್ತುಗೊಂಡು—ಸೇವಕನನ್ನಾಗಿ ಮಾಡಿಕೊಂಡು. ಆವು—ನಾವು. ಅವಂದಿರ್—ಅವರು. ನೆರಪು—ಒಟ್ಟುಗೂಡಿಸು, ಜೊತೆಗೂಡಿಸು. ಬರ್ಪೆಂ—ಬರುತ್ತೇನೆ. ಆನುಂ—ನಾನೂ. ಬಿನ್ನೈಸು—ನಿವೇದಿಸು, ಹೇಳು. ಶತವೃದ್ಧ—ನೂರುವರ್ಷ ತುಂಬಿದ ಮುದುಕ.

ಆಪಾದಮಸ್ತಕಂಬರಂ—ಪಾದದಿಂದ ತಲೆಯುವರೆಗೂ. ಉದ್ಧೂಳಿಸಿದ-ಲೇಪಮಾಡಿದ, ಬಳಿದ. ನರೆ ತೆರೆ—ಮುಪ್ಪಿನಿಂದ ಬರುವ ಬಿಳಿಗೂದಲು. ಚರ್ಮದ ಸುಕ್ಕು. ಖಟ್ವಾಂಗ—ತಲೆಯು ಓಡು, ಬ್ರಹ್ಮಕಪಾಲ. ಯಷ್ಟಿ—ದೊಣ್ಣೆ. ಪ್ರಮಾಣಪತ್ರ—ಸತ್ಯವನ್ನು ಸಾರುವ ಕಾಗದ. ಕಮಲಜಶಿರ—ಬ್ರಹ್ಮನ ತಲೆ. ಪುಲಿದೊವಲ್—ಪುಲಿಯ + ತೊವಲ್ (ತ.ಸ.) ಹುಲಿಯ ಚರ್ಮ. ವೇಷ್ಟ—ಹೊದಿಕೆ. ಮೊಲೆನಾಗ—ಗಜಾಸುರ. ಶಿರೋಮಾಲೆ—ಕಪಾಲಗಳ ಸರ. ಪುರ್ಪು—ಹುಬ್ಬು. ನೇಲ್ವ—ನೇತಾಡುವ. ತೊವಲ್—ಚರ್ಮ. ಬೆಳುಗಡ್ಡ--ಬಿಳಿಯ ಗಡ್ಡ. ಗೂಹೆಗೂಹೆಗುಟ್ಟು—ಗೊರ್ ಗೊರ್ ಎಂದು ಶಬ್ದಮಾಡು. ಶಿಥಿಲಾಕ್ಷರ—ತೊದಲು ಮಾತು. ನೆರವಿ—ಸೇರಿದ ಜನ. ಪೋಗಲೀಯದೆ—ಹೋಗಲು ಬಿಡದೆ. ಪುಗು—ಪ್ರವೇಶಿಸು. ದಂಡೆ—ಹೂವಿನ ಹಾರ. ಅಂಜನ—ಕಣ್ಣಿಕಪ್ಪು. ಸಂತಸ—ಸಂತೋಷ (ತ್ಸ). ಸಂದಣಿಗೊಳ್—ಗುಂಪುಸೇರು. ಸುವಾಸಿನಿಯರು—ಮುತ್ತೈದೆಯರು. ವೇದಿಕೆ—ಯಜ್ಞದ ಜಗುಲಿ. ಪರಿಸ್ತರಣ—ಸುತ್ತಲೂ ಇಟ್ಟ ದರ್ಭೆ. ವಿಪ್ರಸಂಕುಳ—ಬ್ರಾಹ್ಮಣರ ಗುಂಪು. ಮಾನ್ಯವರ್ಗ—ಮನ್ನಣೆಗೆ ಅರ್ಹವಾದ ಜನ. ಎಡೆಯಾಡು—ಓಡಾಡು. ಬಾಜಿಸು—ಧ್ವನಿಮಾಡು, ಬಾರಿಸು. ಬದ್ದವಣರು—ಮಂಗಳವಾದ್ಯಕಾರರು. ಘಳಿಗೆವಟ್ಟಲು—ಘಳಿಗೆಯನ್ನು ಸೂಚಿಸುವ ಬಟ್ಟಲು. (ಒಂದು ಬಟ್ಟಲಿಗೆ ತಳದಲ್ಲಿ ಸಣ್ಣ ಒಂದು ರಂಧ್ರವನ್ನು ಮಾಡಿ ಮತ್ತೊಂದು ಬಟ್ಟಲ ಮೇಲೆ ಇಡುತ್ತಿದ್ದರು; ಮೇಲಿನ ಬಟ್ಟಲಿನ ನೀರೆಲ್ಲವೂ ಸೋರಿಹೋಗಲು ಒಂದು ಘಳಿಗೆ ಕಾಲವಾಗುತ್ತಿತ್ತು. ಮುಹೂರ್ತವನ್ನು ಸಾಧಿಸಲು ಈ ಸಾಧನವನ್ನು ಬಳಸುತ್ತಿದ್ದರು.) ನಕ್ಷತ್ರಪಾಠಕರು—ಪುರೋಹಿತರು. ಕಿಕ್ಕಿರಿಗಿರಿದ—ದಟ್ಟವಾಗಿ ಸೇರಿದ. ಮಲ್ಲಳಿಗೊಂಡು—ಗುಂಪುಗೂಡಿ. ನೆಗಪು—ಕೆರು. ದಡದಡಿಸು—ಎಡವು ಹಳಿಲನೆ—ದೊಪ್ಪನೆ. ತಂಡುಲ—ಅಕ್ಕಿ. ಪಮ್ಮೈಸು—ಮೈಮರೆ, ಮೂರ್ಛೆಹೋಗು. ಪರಿತಂದು—ಮುಂದೆ ಬಂದು. ಮರುಳ—ಹುಚ್ಚ. ಗೌತಮನ ಗೋವು—ಬ್ರಾಹ್ಮಣನ ಆಕಳು, ಬಡಕಲಾದ ಹಸು. ಬ್ರಹ್ಮೇತಿಕಾಜಿ--ಬ್ರಾಹ್ಮಣನನ್ನು ಕೊಲೆ ಮಾಡುವವನು. ಪೊಗಿಸು—ಪ್ರವೇಶಿಸುವಂತೆ ಮಾಡು. ಅದುಹು—ಸಂಶಯಪಡು. ಐಸು—ಅಷ್ಟು. ಶಿವದಿಡು—ಶಿವಾ ಎಂದು ಕೂಗು. ಕಾರಣಿಕ—ಅಸಾಧಾರಣ ಪುರುಷ; ಕಾರಣಪುರುಷ. ಭಿಂಗಾರಿ—ಚಿನ್ನದ ಕಲಶ. ಅಪ್ಪರೆ—ಅಯ್ಯಾ. ಬಿಜಯಂಗೆಯ್—ದಯಮಾಡಿಸು. ತೊತ್ತು—ಸೇವಕ. ಸತ್ಕುಲಜ—ಉತ್ತಮವಂಶದಲ್ಲಿ ಹುಟ್ಟಿದವನು. ಆದ್ಯಂತ—ಆದಿ + ಅಂತ (ಯ. ಸಂ.) ಮೊದಲು ಮತ್ತು ಕೊನೆ; ಮೊದಲಿಂದ ಕೊನೆಯುವರೆಗೆ. ಮಸಗು—ರೇಗು. ಕೌತುಕ—ಆಶ್ಚರ್ಯ. ಸಾಲ್ಗುರಿ—ಸಾಕು. ಚಿತ್ತೈಸು—ಕೇಳು. ಸೀಂತ—ಸೀನಿದ. ಮಾಣು—ಹೋಗಲಾಡಿಸು. ಹದುಳ—ಕ್ಷೇಮ. ತಳರ್—ಹೊರಡು. ಓಲಗ—ಸಭೆ. ಮಕುಟವರ್ಧನರು—ಕಿರೀಟ ಧರಿಸಿದವರು, ರಾಜರು. ಸಿಡಿ—ಚಿಮ್ಮು. ಎಳಸು—ಬಯಸು. ಕೀಲುಚ್ಚಿದಂತೆ—ಕೀಲು ಬಿಚ್ಚಿದ ಹಾಗೆ, ಬಾಯಿಗೆ ಬಂದಂತೆ. ಹತ್ತೆಂಟುಹರೆಯ—ಹದಿನೆಂಟು ವರುಷದ ಯೌವನ. ನೀಡು—ಕೊಡು. ನಾಲ್ಕೆರಡು—ನಾಲ್ಕು+ಎರಡು—ಆರು. ಕುಲವಳಿ—ವಂಶಪರಂಪರೆ. ಪಿಚ್ಚ—ಹುಚ್ಚ. ಬಳಿದೊತ್ತು—ವಂಶದ ಆಳು. ದೊಡ್ಡಿ—ದನ ಕೂಡುವ ಮನೆ. ಕೊಟ್ಟಿಗೆ.

ಪಡಿಯಱರು—ಬಾಗಿಲು ಕಾಯುವವರು. ತತ್ತ—ಸತ್ಯ; ತಥ್ಯ. ಮಾಹೇಶ್ವರಸಮಯ—ಶೈವಧರ್ಮ. ಮೀಱಲಮ್ಮರು—ಮೀರಿ ನಡೆಯಲು ಶಕ್ತರಾಗರು. ಭವ—ಹುಟ್ಟು, ಜನ್ಮಾಂತರ. ಎರವು—ಸಾಲ. ಗೊಡವೆಗುಟ್ಟು—ಗೋಣಗುಟ್ಟು. ಅಡರ್ದ—ಏರಿದ. ಹತ್ತಿದ. ಕೆತ್ತು—ಕುಣಿ. ಬುಜ್ಜಯಿಸು—ಸಮಾಧಾನಮಾಡು. ಗಣಕ—ಲೆಕ್ಕ ಬರೆಯುವವನು. ಗುಮಾಸ್ತ. ಬಿಱಪ ವೇಳ್ಕುಂ—ನಿವೇದಿಸಬೇಕು. ಹೇಳಬೇಕು. ಬಿಗಿದ ಸೆರೆ—ಉಬ್ಬಿದ ಗಂಟಲ ನರ. ಅಖಂಡಿತ—ಸಂಪೂರ್ಣವಾದ. ಪುಸಿ—ಸುಳ್ಳು. ಉಮ್ಮಳಿಸು—ತಳಮಳಗೊಳ್ಳು.

ಪ್ರಶ್ನೆಗಳು :

೧. ವಿರೂಪಾಕ್ಷನು ಶತವೃದ್ಧನಂತೆ ವೇಷ ಧರಿಸಲು ಕಾರಣವೇನು ?
೨. ಶಿವನ ರೂಪು ಶತವೃದ್ಧನಾಗಿ ಪರಿವರ್ತನೆಗೊಂಡದ್ದು ಹೇಗೆ ?
೩. ವೃದ್ಧನು ಮದುವೆಯ ಮನೆಯಲ್ಲಿ ಏನೇನು ಅವಾಂತರ ಮಾಡಿದನು ? ತಿಳಿಸಿ.
೪. ವೃದ್ಧನು ಮದುವೆ ಚಪ್ಪರದಲ್ಲಿದ್ದ ಹಿರಿಯರಿಗೆ ಏನೆಂದು ಹೇಳಿದನು ?
೫. ನಂಬಿಯಣ್ಣನು ವೃದ್ಧನನ್ನು ಏನೆಂದು ಪ್ರಶ್ನಿಸಿದನು ? ಅದಕ್ಕೆ ವೃದ್ಧನ ಉತ್ತರ ವೇನು ?
೬. ಸೌಂದರಪೆರುಮಾಳೆಯು ವೃದ್ಧನನ್ನು ನೂಕಿಸಲು ವೃದ್ಧನು ಏನೆಂದು ಶಿವದಿಟ್ಟನು?
೭. ಪ್ರಮಾಣಪತ್ರದಲ್ಲಿ ಏನೆಂದು ಬರೆದಿದ್ದಿತು ?
೮. ಚಾರನ ಬಿನ್ನಹಕ್ಕೆ ನರಸಿಂಗಮೊನೆಯರ ಉತ್ತರವೇನು ?
೯. ವೃದ್ಧ ಮಾಹೇಶ್ವರನು ಬರಿಯ ವೃದ್ಧನಲ್ಲ, ಕಾರಣಿಕಪುರುಷ—ಎಂಬುದು ಇಲ್ಲಿ ಹೇಗೆ ಸೂಚಿತವಾಗಿದೆ ? .

ಸಂದರ್ಭದೊಡನೆ ಸ್ಪಷ್ಟೀಕರಿಸಿರಿ :

೧. "ಸಂಸಾರದಿ ಕೆಟ್ಟುಪೋಗಲನುವಾಗಿರ್ದಪಂ."
೨. "ತಮ್ಮಾಯುಷ್ಯಭಾಷೆಗಳಂ ಪೊರಗಿಡುವಂತೆ."
೩. "ಮುನ್ನಮೀ ಬ್ರಾಹ್ಮಣನ ಬ್ರಹ್ಮಹತ್ಯಾದೋಷಂ ತಪ್ಪಿತಿದೆ ಸಾಲ್ಗುಂ."
೪. "ಬಳಿಕಿನ್ನಾವ ಮೊಗಂ ಮುಂದಿಟ್ಟು ಮದುವೆಯ ಮಾತನಾಡಿದಪೆವು."
೫. "ಎನ್ನ ಸತ್ತ ಸಾವುಂ, ಕೆಟ್ಟ ಕೇಡುಂ ನಂಬಿಯುಮಂ ನರಸಿಂಗ ಮೊನೆಯರುಮು ತಾಗುವುದು".

ಈ ಪದಗಳನ್ನು ಬಿಡಿಸಿ ಸಂಧಿಯ ಹೆಸರನ್ನು ತಿಳಿಸಿ :

ದೇವಾಲಯ; ಪುಲಿದೊವಲ್ : ಸರ್ವಾಂಗ : ಶಿಥಿಲಾಕ್ಷರ

ಇವುಗಳ ವಿಗ್ರಹ ಬರೆದು ಸಮಾಸವನ್ನು ಹೇಳಿ :—

ಬೆಳುಗಡ್ಡ : ವೃದ್ಧಬ್ರಾಹ್ಮಣ ; ತಾಯ್ತಂದೆ : ಕೈಯೆತ್ತು.

ಇವುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಪ್ರಯೋಗಿಸಿ :

ಬಿಜಯಂಗೈ ; ಮೈಯಿಕ್ಕು ; ಗೊಹೆಗೊಹೆಗುಟ್ಟು ; ಕೌತುಕಂಬಡು.

****

# ಪಂಜರಪರೀಕ್ಷೆ

—ಕೆಂಪು ನಾರಾಯಣ

ಇತ್ತಲಾ ಪಾರ್ವತೇಯರ ಪಟ್ಟಣದಿಂದ ಹೊರಟಿದ್ದ ಪಂಜರದವರು ಕೆಲವು ದಿವಸಗಳ ಮೇಲೆ ಪಾಟಲೀಪುರಕ್ಕೆ ಬಂದು, ಆಸ್ಥಾನದ ಬಳಿಯಲ್ಲಿ ಆ ಪಂಜರವನ್ನಿಳುಹಿ ವಾದ್ಯಸಮೇತವಾಗಿ —ಈ ಪುರದಲ್ಲಿ ಯಾರಾದರೂ ಜಾಣರಿದ್ದರೆ ಅಮಾನುಷಕೃತವಾದ ಈ ಪಂಜರವನ್ನು ಛೇದಿಸದೆ ಇದರಲ್ಲಿರುವ ಸಿಂಹವನ್ನು ಜೀವಸಹಿತವಾಗಿ ಹೊರಗೆ ತೆಗೆಯುವವರಾಗಲಿ. ಅಂಥವರು ಇಲ್ಲದಿದ್ದರೆ ಈಗ ನೋಡಿದ ದೇಶಗಳ ಜನದಂತೆ ನಮಗೆ ಸನ್ಮಾನಮಂ ಮಾಡಿ ಮುಂದಕ್ಕೆ ಅಪ್ಪಣೆಯುಂ ಕೊಡುವವರಾಗಲಿ ಎಂದು ಭುಜಗಳನ್ನೆತ್ತಿಕೊಂಡು ಸಾರುತ್ತಿರಲು. ಆ ವಾಕ್ಯಮಂ ಕೇಳಿ ಪುರದ ಜನರೆಲ್ಲಾ ನೆರೆದು ನೋಡಿ ಅದರ ರಹಸ್ಯಮಂ ತಿಳಿಯಲಾರದೆ ಹೋಗುತ್ತಿದ್ದರು. ಆಗ ಅದಂ ಕಂಡು ರಾಜಭಟರು ಆಸ್ಥಾನದಲ್ಲಿ ಕುಳಿತಿರ್ದ ನಂದರಿಗೆ :—

ಜೀಯಾ. ಕೆಲವು ಜನರು ಅಖಂಡವಾದ ಪಂಜರದಲ್ಲಿ ಜೀವಸಿಂಹವಂ ಕೂಡಿಕೊಂಡು ದೇಶಾಂತರದಿಂದ ಇಲ್ಲಿಗೆ ಬಂದು ಆಸ್ಥಾನದ ಬಳಿಯಲ್ಲಿ ಅದನ್ನು ಇಳುಹಿ—ಈ ಊರಲ್ಲಿ ಪ್ರೌಢರಿದ್ದರೆ ಪಂಜರಮಂ ಖಂಡಿಸದೆ ಸಿಂಹವನ್ನು ಜೀವಸಹಿತವಾಗಿ ಹೊರಗೆ ತೆಗೆಯುತಕ್ಕದೆಂದು ಸಾರಿ ಹೇಳುತ್ತಿರುವುದನ್ನು, ಈ ಊರಲ್ಲಿರುವ ಜನರೆಲ್ಲಾ ಕೇಳಿ ಬಂದು ಆ ಪಂಜರಮಂ ನೋಡಿ ಅದರ ವಿವರವು ತಿಳಿಯಲಾರದೆ ಸುಮ್ಮನೆ ಹಿಂದಿರುಗಿ ಹೋದರಲ್ಲದೆ ಅದರ ಪರೀಕ್ಷಕರು ಒಬ್ಬರೂ ಕಾಣಲಿಲ್ಲವೆಂದು ತಿಳಿಸಲು, ನಂದರು ಅದಂ ಕೇಳಿ ತಮ್ಮ ಮಂತ್ರಿಗಳೆಲ್ಲಾ ಹೋಗಿ ನೋಡಿ ಬರಲಿ ಎಂದು ಆಜ್ಞಾಪಿಸಿದರು. ಆ ಪ್ರಕಾರವೇ ಅಮಾತ್ಯ ರಾಕ್ಷಸನೊಬ್ಬನ ಹೊರತು ಮಿಕ್ಕವರೆಲ್ಲರೂ ಆ ಪಂಜರದ ಬಳಿಗೆ ಹೋಗಿ ನೋಡಿ ಅದರ ವಿವರವು ತಮಗೂ ತಿಳಿಯದೆ ಸುಮ್ಮನೆ ಹಿಂದಿರುಗಿ ಬಂದು ನಂದರ ಬಳಿಯಲ್ಲಿ ನಿಂತರು. ಆಗ ಅಮಾತ್ಯ ರಾಕ್ಷಸನು ನಂದರು ಕುರಿತು :—

ಅಯ್ಯಾ. ರಾಜಕುಮಾರರುಗಳಿರಾ. ಸಿಂಹಸಮೇತವಾದ ಪಂಜರವು ಅಮಾನುಷಕೃತವಾದುದು. ಮತ್ತೇನೆಂದರೆ ಇದು ನಮ್ಮೆಲ್ಲರ ಬುದ್ಧಿಪರೀಕ್ಷಾರ್ಥವಾಗಿ ಕಪಟಿಗಳಾದ ಪರರಾಜರು

ನಿರ್ಮಿಸಿ ಕಳುಹಿಸಿರುವ ಕಪಟಶಿಲ್ಪವೆಂದು ತೋರುತ್ತಿದೆ. ಆಗಲಿ, ಈ ಪುರದ ಜನರು ಬಹಳವಾಗಿ ಇರುವರು. ಯಾರಲ್ಲಿ ಬುದ್ಧಿಕೌಶಲ್ಯವು ಹೇಗಿರುವುದೋ ? ನಮ್ಮ ಭಟರುಗಳ ಹೋಗಿ ರಾಜಬೀದಿಗಳಲ್ಲಿ ಸಾರುತ್ತಾ ಬರಲಿ. ಆದರ ಪರೀಕ್ಷಕರು ಯಾರಾದರೂ ದೊರೆತಾರು. ಎಲ್ಲರೂ ನೋಡಿದ ಬಳಿಕ ಆ ಪಂಜರವಂ ತರಿಸಿ ನಾವೇ ನೋಡೋಣ ಎಂದು ಹೇಳಿ ದೂತರ ಮುಖವನ್ನು ನೋಡಿ—ಎಲೈ, ಇದರ ಪರೀಕ್ಷಕರು ಈ ಪಟ್ಟಣದಲ್ಲಿ ಇದ್ದರೆ ಅವರಿಗೆ ರಾಜ ಸನ್ಮಾನವು ಆದೀತೆಂದು ನೀವು ಸಾರುತ್ತಾ ಇರುವಾಗ ಯಾರಾದರೂ ದೊರೆತರೆ ಅವರನ್ನು ಕರಕೊಂಡುಬನ್ನಿರಿ ಎಂದು ಆಜ್ಞಾಪಿಸಲಾಗಿ, ಅದೇ ಪ್ರಕಾರ ಅವರು ರಾಜಬೀದಿಯಲ್ಲಿ ಕೂಗುತ್ತಾ ಬರುತ್ತಿರಲು ಸೆರೆಮನೆಯ ಬಾಗಿಲಲ್ಲಿ ನಿಂತಿದ್ದ ಚಂದ್ರಗುಪ್ತನು ಆ ದೂತರಂ ಕರೆದು :—

ಎಲೈ ದೂತರುಗಳಿರಾ, ಈ ಪಟ್ಟಣದಲ್ಲಿ ಆ ಪಂಜರಪರೀಕ್ಷಕರು ಯಾರೂ ದೊರಕಲಿಲ್ಲವೇ ! ಎಂದು ಹೇಳಿದಾಗ್ಯೂ ಆ ದೂತರು ಆತನಿಗೆ ಪ್ರತ್ಯುತ್ತರವಂ ಹೇಳದೆ ಪುನಃ ನಂದರ ಸನ್ನಿಧಿಗೆ ಬಂದು ಕೈಮುಗಿದು : —

ಬುದ್ಧೀ, ಅಪ್ಪಣೆಯ ಮೇರೆಗೆ ಪಟ್ಟಣದಲ್ಲೆಲ್ಲಾ ಸಾರಿದೆವು. ಈ ಪುರದ ಆಬಾಲವೃದ್ಧರೆಲ್ಲರೂ ಬಂದು ನೋಡಿ ಒಬ್ಬರಿಗೂ ಆದರ ಪರೀಕ್ಷೆ ತಿಳಿಯದೆ ಇದು ಅಮಾನುಷಕೃತವೇ ಸರಿ ಎಂದು ಹೇಳಿಕೊಂಡು ಹೋದರೆಂದು ಬಿನ್ನವಿಸಲು. ನಂದರು ಆಶ್ಚರ್ಯಪಟ್ಟು ತಾವೇ ಆ ಪಂಜರವ ತರಿಸಿ. ನೋಡಿ ತಮಗೂ ಆದರ ವಿವರ ತಿಳಿಯದೆ ಪುನಃ ಆ ದೂತರಂ ಕುರಿತು – ಇಷ್ಟು ದೊಡ್ಡದಾದ ಪಟ್ಟಣದಲ್ಲಿ ಇದರ ಪರೀಕ್ಷಕರು ಯಾರೂ ಇಲ್ಲದೆ ಹೋದರೇ ? ಎಂದು ಕೇಳಲಾಗಿ– ಸ್ವಾಮೀ. ಯಾರೂ ಇಲ್ಲ. ಅವನಾರೋ ಕಾರಾಗೃಹದ ಬಾಗಿಲಲ್ಲಿ ನಿಂತಿದ್ದ ಒಬ್ಬನು ನಮ್ಮನ್ನು ಕುರಿತು—ಈ ಊರಲ್ಲಿ ಯಾರೂ ಆದರ ಪರೀಕ್ಷಕರು ದೊರಕಲಿಲ್ಲವೇ ? ಎಂದು ಕೇಳಿದನಲ್ಲದೆ ಮತ್ತಾರೂ ಹೀಗೆ ಹಾಗೆ ಎಂಬುದಾಗಿ ಕೇಳಲಿಲ್ಲವೆಂದು ಬಿನ್ನೈಸಿದರು.

ಆ ಮಾತಿಗೆ ನಂದರು—ಅವನು ಬಲ್ಲವನಾಗಿರಬೇಕು. ಆದರ ಪರೀಕ್ಷೆಯಂ ಅವನು ತಿಳಿದು ಹೇಳಿದರೆ ಕಾರಾಗೃಹದಿಂದ ತಾನು ಬಿಡಿಸಲ್ಪಟ್ಟು ವಿಶೇಷ ಸನ್ಮಾನಕ್ಕೆ ಪಾತ್ರನಾಗುವನು. ಅವನಂ ಕರೆದುಕೊಂಡು ಬನ್ನಿರಿ ಎನ್ನಲು, ಅಪ್ಪಣೆ ಎಂದು ಭಟರು ಅಲ್ಲಿಗೆ ಹೋಗಿ ಸೆರೆಮನೆಯಲ್ಲಿರುವ ಚಂದ್ರಗುಪ್ತನಂ ಕಂಡು ಮಹಾರಾಜರ ಅಪ್ಪಣೆಯಾಗಿದೆ. ಪಂಜರಪರೀಕ್ಷೆಯು ಮಾಡುವುದಕ್ಕೆ ಬನ್ನಿರಿ ಎಂಬುದಾಗಿ ಕರೆಯಲು. ಅವರ ಮಾತಿಗೆ—ಒಳ್ಳೆಯದು ಎಂದು ಚಂದ್ರಗುಪ್ತನು ಬರುತ್ತಿದ್ದನು. ಅಷ್ಟರೊಳಗೆ ರಾಕ್ಷಸನು ದೂರದಿಂದಲೇ ಆ ಪಂಜರವನ್ನು ನೋಡಿ ತನ್ನ ಮನಸ್ಸಿನಲ್ಲಿ ಆಲೋಚಿಸುತ್ತ :—

ನಾನು ಈಗಲೇ ಇದನ್ನು ನೋಡಿ ಇದರ ಪರೀಕ್ಷೆಯು ನನ್ನಿಂದ ಆಗದೆ ಹೋಗಿ ಆಮೇಲೆ ಮತ್ತೊಬ್ಬನು ಬಂದು ತಿಳಿದು ಹೇಳಿದರೆ ಆಗ ನನಗೆ ಬಹಳ ಅವಮಾನ ಉಂಟಾಗುವುದು. ಆದಕಾರಣ ಈಗ ಹೋಗಿ ನೋಡುವುದು ಯುಕ್ತವಲ್ಲ. ಪ್ರಕೃತದಲ್ಲಿ ಯಾವನೋ

ದುರಾಗ್ರಹದಿಂದ ಬರುತ್ತಾನಷ್ಟೆ ! ಅವನು ಬಂದು ನೋಡಿ ತಿಳಿದು ಅದರ ಪರೀಕ್ಷೆಯಂ ಮಾಡಿ ಸನ್ಮಾನಿತನಾಗಿ ಹೋದರೆ ಹೋಗಲಿ. ಅದು ಅವನಿಂದಲೂ ಆಗದ ಪಕ್ಷಕ್ಕೆ ಆಮೇಲೆ ನಾನು ಹೋಗಿ ತಿಳಿದು ಹೇಳಿದರೆ ವಿಶೇಷ ಬಹುಮಾನ ಉಂಟಾಗುವುದು. ತಿಳಿಯದ ಪಕ್ಷದಲ್ಲಿ ಎಲ್ಲರಂತೆ ನಾನೂ ಆಗುವೆನೇ ಹೊರತು ಅಪಮಾನ ಬೇರೆ ಇಲ್ಲವೆಂದು ನಿಶ್ಚಯಿಸಿ ಸುಮ್ಮನೆ ಇದ್ದನು. ಅಷ್ಟರಲ್ಲೇ ನಂದರು ಮತ್ತೊಂದು ಸ್ಥಾನಕ್ಕೆ ಹೋದರು.

ಆಗ ಚಂದ್ರಗುಪ್ತನು ಬಂದು ಆ ಪಂಜರವಂ ನೋಡಿ ತನ್ನೊಳಗೆ. ಈ ಪಂಜರವು ಅಖಂಡವಾದ ಏಕವಾಗಿದೆ. ಇದರಲ್ಲಿರುವ ಸಿಂಹವು ಪೋಷಕನು ಕೊಟ್ಟ ಮಾಂಸಕ್ಕೆ ಎರಗುತ್ತ ಹೊರಗಡೆಯಲ್ಲಿ ಅವನು ಪಂಜರವಂ ಬಳಸಿ ಬಂದರೆ ಅವನು ಬಂದ ಕಡೆಯಲ್ಲೆಲ್ಲಾ ಮಾಂಸಾಪೇಕ್ಷೆಯಿಂದ ಒಳಗೆ ತಾನೂ ಬಳಸಿ ಬರುತ್ತಿದೆ. ಪಂಜರವು ಅಖಂಡವಾಗಿಯೂ, ಒಳಗಿನ ಸಿಂಹವು ಮಾಂಸಾಭಿಲಾಷಿಯಾಗಿಯೂ ಇರುವುದರಿಂದ ಇದು ಅಮಾನುಷಕೃತವೆಂದು ಹೇಳುವುದಕ್ಕೆ ಆಸ್ಪದವಾಯಿತು ಎಂದು ಯೋಚಿಸಿ. ಅದರ ರಕ್ಷಕರು ಮಾಂಸಕೊಡುವುದನ್ನೂ, ಆ ಸಿಂಹವು ಗ್ರಹಿಸುವುದನ್ನೂ ನೋಡಿ ಅದರ ಭಾವವಂ ತನ್ನ ಮನಸ್ಸಿಗೆ ತಂದುಕೊಂಡು, ಸಮೀಪದಲ್ಲಿದ್ದ ರಾಜಭಟನಿಗೆ ಹೇಳಿ ಮಾಂಸಖಂಡವಂ ತರಿಸಿ ಅವರಂತೆ ತಾನೂ ಅದಂ ಸಿಂಹಕ್ಕೆ ನೀಡಿ ಕೊಡಲಾಗಿ, ಆ ಸಿಂಹವು ಆ ಮಾಂಸಾಭಿಮುಖವಾಗದೆ ಸುಮ್ಮನೆ ಇರಲು, ಆ ಪಂಜರರಕ್ಷಕರಂ ನೋಡಿ—

ಏನಿರೈ, ನಾನು ಕೊಟ್ಟ ಮಾಂಸವನ್ನು ಈ ಸಿಂಹವು ಏಕೆ ಗ್ರಹಿಸಲಿಲ್ಲ ? ಎಂದು ಕೇಳಲು ಆ ಮಾತಿಗೆ ಪಂಜರರಕ್ಷಕರು ತಮ್ಮ ಮನದಲ್ಲಿ ಆತಂಕಪಡುತ್ತ :—

ಅಯ್ಯಾ, ನೋಟಕರೇ, ಸಿಂಹವು ಅಮಾನುಷಕೃತವಾದುದರಿಂದ ತನ್ನ ಉಪಾಸಕರ ಹಸ್ತಾಹಾರವಂ ಗ್ರಹಿಸುವುದಲ್ಲದೆ ಅನ್ಯರಂ ಭಾವಿಸುವುದುಂಟೆ? ಎಂದು ಕಪಟೋಕ್ತಿಯಂ ನುಡಿಯಲು, ಚಂದ್ರಗುಪ್ತನು—ಇದು ಅಪಲಾಪವಾಕ್ಯವೆಂದು ತಿಳಿದು ಪುನಃ ಯೋಚಿಸುತ್ತ :—

ಈ ಪಂಜರವು ಅಖಂಡವಾದುದರಿಂದ ಇದರೊಳಗೆ ಜೀವಸಿಂಹವು ಹೇಗೆ ಹೋಗುವುದು ? ಈ ಪಂಜರರಕ್ಷಕನು ಪಂಜರವಂ ಬಳಸಿ ಬರುತ್ತಿದ್ದರೆ ಈ ಸಿಂಹವು ಮಾಂಸವಂ ಕೊಡುವವನಲ್ಲಿ ಮಾಂಸಾಭಿಲಾಷೆಯಿಂದಲೋ ಎಂಬಂತೆ ಅವನು ಬಂದ ಕಡೆಗೆ ತಾನೂ ತಿರುಗುತ್ತಿರುವುದರಿಂದಲೂ, ಅವನು ದೂರಸ್ಥನಾದರೆ ತಿರುಗುವ ಆಯಾಸದಿಂದಲೋ ಎಂಬುವ ಹಾಗೆ ಕಂಠವನ್ನಲುಗಿಸುತ್ತ ಶ್ವಾಸವನ್ನು ಬಿಡುವಂತೆ ಇರುವುದರಿಂದಲೂ. ಪಂಜರರಕ್ಷಕನು ನೀಡಿ ಕೊಟ್ಟ ಮಾಂಸದಲ್ಲಿ ಆಸಕ್ತಿಯಿಂದಲೋ ಎಂಬಂತೆ ಬಾಲದ ತುದಿಯಂ ತಲೆಯಲ್ಲಿ ಕುಣಿಸುತ್ತ ಮಾಂಸವಂ ಕಚ್ಚುವುದರಿಂದಲೂ ಜೀವಸಿಂಹವೇ ಸರಿಯೆಂದು ತೋರುತ್ತಿದೆ. ಹೀಗಿದ್ದರೂ ಇದು ಜೀವಸಿಂಹವಾಗಲಾರದು. ಇದು ಅರಗು, ಮೇಣ ಈ ಮುಖ್ಯವಾದ ಸರಿಗಳಿಂ ತೊಡೆಯುಲ್ಪಟ್ಟ ಬಟ್ಟೆಗೆ ಸಿಂಹದ ರೋಮಗಳಂ

ಹತ್ತಿಸಿ ಅದಂ ಚರ್ಮದಂತೆ ಮಾಡಿ ಹೊರಗಿದ್ದ ಪುರುಷನ ಕೌಶಲ್ಯದಿಂದ ಮಾಂಸವಂ ಕೊಡುವ ರಂಧ್ರಮುಖವಂ ಹಿಡಿದು ಅದರ ಅಸ್ಥಿಸ್ಥಾನಕ್ಕೆ ಕಬ್ಬಿಣದ ಸಲಾಕಿಗಳಂ ಜೋಡಿಸಿ. ಬಾಲ ಕತ್ತುಗಳ ರೋಮಸಹಿತವಾದ ಉಕ್ಕಿನ ತಂತಿಗಳಂ ಜೊತೆಗೊಳಿಸಿ ಅಲ್ಲಿಗಲ್ಲಿಗೆ ಬಣ್ಣವಂ ಬರೆದು ಪೂರೈಸಿದ ಕೃತ್ರಿಮಸಿಂಹವಾಗಿರಬಹುದು. ಆದಾಗ್ಯೂ ಇನ್ನೊಂದು ಪರೀಕ್ಷೆಯಂ ಮಾಡುವೆನೆಂದು ದೂತರಂ ಕರೆದು ಅವರು ಆನೆಯ ಲಾಯಕ್ಕೆ ಕಳುಹಿಸಿ ಒಂದು ಮರಿಯಾನೆಯಂ ತರಿಸಿ ಅದು ಕಣ್ಣುಗಳಂ ಕಟ್ಟಿಸಿ ಪಂಜರವಂ ಬಳಸಿ ಬರುವಂತೆ ಮಾಡಲು ಅದನ್ನು ನೋಡಿ ಆ ಸಿಂಹವು ಆರ್ಭಟಿಸದೇ ಇದ್ದುದರಿಂದ ಇದು ಕಪಟಸಿಂಹವೆಂದು ನಿಸ್ಸಂದೇಹವಾಗಿ ತಿಳಿದುದಲ್ಲದೆ ಆ ಸಿಂಹವು ಚಲಿಸುವುದಕ್ಕೂ. ಮಾಂಸವಂ ಚುಚ್ಚಿಕೊಡುವುದಕ್ಕೂ ಸಾಧನವಾದ ಸಲಾಕಿಯಂ ಹಿಡಿದಿರುವ ಪಂಜರರಕ್ಷಕನಂ ನೋಡಿ—ಇದರ ತುದಿಯ ಮಾಂಸಕ್ಕೆ ಸಿಂಹವದು ಕಚ್ಚುವುದರಿಂದಲೂ. ಸಲಾಕಿಯಂ ಹಿಡಿದಿರುವ ಈ ಪುರುಷನು ತಿರುಗಿದ ಕಡೆಗೆಲ್ಲಾ ಒಳಗೆ ಈ ಸಿಂಹವು ತಾನೂ ತಿರುಗುವುದರಿಂದಲೂ ಈ ಕೈಸಲಾಕಿಯು ಸೂಜಿಗಲ್ಲಿನ ಸತ್ವದಿ ಮಾಡಿರಬೇಕು. ಕಬ್ಬಿಣವನ್ನು ಹಿಡಿಯುವ ಧರ್ಮವು ಸೂಜಿಗಲ್ಲಿನ ಸ್ವಭಾವವು ಎಂದು ನಿಶ್ಚಯಿಸಿ ಆ ಪಂಜರರಕ್ಷಕನಂ ಕುರಿತು—

ಎಲೈ. ನಿನ್ನ ಕೈಸಲಾಕಿಯಂ ಬಿಟ್ಟು ಪಂಜರವಂ ಬಳಸಿ ಬಾರೆನಲು ಅವನು ಆ ವಾಕ್ಯವಂ ಕೇಳಿ ತನ್ನ ಮನಸ್ಸಿನಲ್ಲಿ ಯಾರಿಗೂ ತಿಳಿಯದಿರುವ ಸಲಾಕಿಯ ಪರೀಕ್ಷೆಯಂ ಇವನು ತಿಳಿದನು! ಈತನು ಕಪಟ ಶಿಲ್ಪೋಪಾಯ ಪರೀಕ್ಷೆಯಲ್ಲಿ ಸಮರ್ಥನೆಂದು ತೋರುತ್ತಿದೆ! ನಮ್ಮ ಕಪಟವು ಈತನಿಂದ ಬಯಲಾಗುವುದು! ಈತನ ಆಕ್ಷೇಪಕ್ಕೆ ಹೀಗೆ ಹೇಳಬೇಕು ಎಂದು ನಿಶ್ಚಯಿಸಿ ಚಂದ್ರಗುಪ್ತನಂ ಕುರಿತು :—

ಅಯ್ಯಾ. ನೋಟಕರೇ. ಜನ್ಮಾರಭ್ಯ ಈ ಸಲಾಕಿಯ ತುದಿಯ ಮಾಂಸದಿಂದಲೇ ಬದುಕುವ ಈ ಸಿಂಹವು ಸಲಾಕಿಯಂ ಬಿಟ್ಟರೆ ಮಾಂಸದ ಆಸೆಯಂ ಬಿಟ್ಟು, ಬರಿಗೈಯಿಂದಿರುವ ನನ್ನನ್ನು ನೋಡಿ ಪೋಷಕವಿಶ್ವಾಸಮಂ ತೊರೆದು ಸುಮ್ಮನಿರುವುದು. ಆದರಿಂದ ಸಲಾಕಿಯು ಬಿಡಕೂಡದು ಎಂದು ಹೇಳುವ ಪಂಜರರಕ್ಷಕನಂ ನೋಡಿ :—

ಎಲೈ, ಪ್ರಿಯನೆದುರಿಗೆ ವಿಲಾಸವಂ ತೋರುವ ಜಾರಸ್ತ್ರೀಯಂತೆ ಸೂಜಿಗಲ್ಲಿನೆದುರಿಗೆ ಉಕ್ಕು. ಕಬ್ಬಿಣ, ಸಲಾಕಿ ಇವುಗಳ ಸಮೂಹದಿಂದ ಯುಕ್ತವಾದ ಈ ಕಪಟಸಿಂಹವು ಹಲವು ಪರಿಯಿಂ ಚಲಿಸುವುದು ಆಶ್ಚರ್ಯವೇನು ? ಇದರಂತೆ ಅರಗು. ಮೇಣಗಳು ಬೆಂಕಿಯ ಸೆಖೆಗೆ ಕರಗುವುದೆಂಬ ಅರ್ಥವು ಲೋಕಪ್ರಸಿದ್ಧವಲ್ಲವೇ ? ಇನ್ನು ಈ ಕಪಟವಾಕ್ಯವಂ ಹೇಳುವುದನ್ನು ಸಾಕುಮಾಡು ಎಂದು ಚಂದ್ರಗುಪ್ತನು ಹೇಳಲಾಗಿ, ಆ ಮಾತನ್ನು ಕೇಳಿ ಪಂಜರರಕ್ಷಕನು ನಾಚಿಕೆಯಿಂದ ತಲೆವಾಗಿ ಕೈಮುಗಿದು, ತಾವು ಜಿತರಾದೆವೆಂದು ಹೇಳುತ್ತ ಸಲಾಕಿಯಂ ಚಂದ್ರಗುಪ್ತನಿಗೆ ಒಪ್ಪಿಸಲು :—

ಆಗ ಚಂದ್ರಗುಪ್ತನು ತನ್ನ ಮನಸ್ಸಿನಲ್ಲಿ—ಇಂಥಾ ಕಪಟಶಿಲ್ಪವಾದ ಪಂಜರವಂ ದೇಶಾಂತರದಿಂದ ಪ್ರಯತ್ನಪೂರ್ವಕವಾಗಿ ತಂದು ಈ ಆಸ್ಥಾನದ ಬಳಿಯಲ್ಲಿ ಇಳುಹಿ ಸಾರುವುದಕ್ಕೆ ನಿಮಿತ್ತವನ್ನು ಯೋಚಿಸಿದರೆ—ನಂದರು ಕಪಟೋಪಾಯದಿಂದ ಮೌರ್ಯರಂ ಸಂಹರಿಸಿದರೆಂಬ ವಾರ್ತೆಯು ದೇಶಾಂತರಗಳಲ್ಲಿ ಪ್ರಸಿದ್ಧವಾದುದರಿಂದ, ಅದಂ ಕೇಳಿ ಯಾರೋ ಪರರಾಜರು ಕಪಟಿಗಳಾದ ನಂದರ ವಿಡಂಬನಾರ್ಥವಾಗಿ ಅಶಕ್ಯವಾದ ಕಪಟಶಿಲ್ಪವಂ ರಚಿಸಿ ಅಲ್ಲಿನ ಜನರ ಬುದ್ಧಿಪರೀಕ್ಷಾರ್ಥವಾಗಿ ಕಳುಹಿಸಿದವರಾಗಿರಬೇಕು. ಇದರಿಂದ ನಂದರಂ ನಿಂದಿಸುವ ಪರರಾಜರುಂಟಾಗಿರುವರು. ಆ ಕಪಟವು ಇಲ್ಲಿ ಬಯಲಾದುದರಿಂದ ಕಪಟಿಗಳಾದ ಪರರಾಜರು ದಣಿಸುವುದಕ್ಕೆ ಶಕ್ತನಾದ ಅಮಾತ್ಯರಾಕ್ಷಸನು ಅವರ ಮುಖಭಂಗವಂ ಮಾಡುವುದಕ್ಕೆ ಈ ಪಂಜರರಕ್ಷಕರು ಅಮಾನುಷಕೃತವೆಂದು ರಾಜಾಸ್ಥಾನದಲ್ಲಿ ಸುಳ್ಳು ಹೇಳಿದುದನ್ನೇ ಅಪರಾಧವಾಗಿ ಎಣಿಸಿ ಇವರಿಗೆ ದಂಡನೆಯುಂ ಮಾಡಿಸುವನು. ಅವರ ಈ ಪಂಜರದ ನಿಮಿತ್ತವಾಗಿ ನನಗೆ ಬಂಧವಿಮೋಚನವಾಗುವುದೆಂದು ತೋರುತ್ತಿದೆ. ಆದುದರಿಂದ ಈ ದೂತರ ದೇಶವಂ ತಿಳಿದು ಇವರಂ ಈಗಲೇ ಇಲ್ಲಿಂದ ಚದರಿ ಹೋಗುವಂತೆ ಮಾಡಬೇಕು. ಈ ಜನಗಳ ಭೂಷಣಗಳನ್ನೂ, ಆಕಾರಗಳನ್ನೂ ನೋಡಿದರೆ ಪಾರ್ವತೇಯರಂತೆ ಕಾಣುವರೆಂದು ತನ್ನಲ್ಲಿ ನಿಶ್ಚಯಿಸಿ—ನಿಮ್ಮ ದೇಶ ಯಾವುದು ? ಎಂದು ಕೇಳಲು :—

ಸ್ವಾಮಿ, ಗಟ್ಟ ಬೆಟ್ಟವಂ ಸೇರಿ, ಪರರಿಂ ಜೀವಿಸುತ್ತ ಕಾಡಿನ ಜೋಗಿಗಳಂತೆ ತಿರುಗುವವರಿಗೆ ಇಂಥಾ ದೇಶವೆಂದು ಹೇಗೆ ಹೇಳೋಣ ? ಎಂದರು.

ಅದು ಕೇಳಿ ಚಂದ್ರಗುಪ್ತನು—ಇವರ ಮಾತಿನ ಗೂಢಾರ್ಥವನ್ನು ಯೋಚಿಸಿದರೆ ತಾವು ಪಾರ್ವತೇಯರೆಂದು ಸೂಚಿಸಿದಂತಾಯಿತು ಎಂದು ನಿಶ್ಚಯಿಸಿ. ಆ ದೂತರ ಮುಖವಂ ಚೆನ್ನಾಗಿ ನೋಡಿ ಈಗಲೇ ಹೊರಟುಹೋಗಿರೆಂದು ಕಣ್ಣುಸನ್ನೆಯಿಂದ ಸೂಚಿಸಿದನು.

ಅದು ತಿಳಿದು ಆ ಪಂಜರರಕ್ಷಕರು—ತಾವು ಇಲ್ಲಿದ್ದರೆ ತಮಗೇನೋ ತೊಂದರೆ ಸಂಭವಿಸುವ ಹಾಗಿದೆಯೆಂದೂ, ಇವನು ಚಂದ್ರಗುಪ್ತನಾಗಿರಬೇಕೆಂದೂ ನಿಶ್ಚಯಿಸಿ ಆ ಜನರ ಸಂದಣಿಯಲ್ಲಿ ತಮ್ಮ ಸಾಮಗ್ರಿಗಳಂ ಬಿಟ್ಟು ಬೈರಾಗಿಗಳ ವೇಷವನ್ನು ಧರಿಸಿ ಹೊರಟುಹೋದರು.

ಆಗ ಚಂದ್ರಗುಪ್ತನು ರಾಜಭಟರಂ ನೋಡಿ—ಈ ಸಿಂಹವು ಪರೀಕ್ಷಿತವಾಯಿತು. ಕೃತ್ರಿಮವಾದುದರಿಂದ ಇದು ಜಡಸಿಂಹವು. ಈ ಅರ್ಥವಂ ಪ್ರಭುಗಳಿಗೆ ಬಿನ್ನೈಸಿರಿ ಎಂದು ಹೇಳಲು. ಅದಂ ಕೇಳಿ ದೂತರು ಹೋಗಿ ಅಲ್ಲಿ ಚಂದ್ರಗುಪ್ತನಿಂದ ನಡೆದುದನ್ನೂ, ಆ ಪಂಜರ ರಕ್ಷಕರು ಜಿತರಾದರೆಂದು ಹೇಳಿದುದನ್ನೂ ನಂದರಿಗೆ ಅರುಹಲು, ಅವರು ಅಲ್ಲಿಗೆ ಬಂದು ಪಂಜರಪರೀಕ್ಷಕನಂ ನೋಡಿ ಚಂದ್ರಗುಪ್ತನೆಂದು ತಿಳಿದು—

ಎಲೈ ಚಂದ್ರಗುಪ್ತನೇ, ಇದು ಜಡಸಿಂಹವೆಂದು ನೀನು ತಿಳಿದ ಬಗೆ ಹೇಗೆ ? ಎನಲು ಬುದ್ಧಿ, ಪರಾಂಬರಿಸಬೇಕೆಂದು ಬೆಂಕಿಯನ್ನು ಉರಿಮಾಡಿಸಿ ಅದರ ಸಮೀಪದಲ್ಲಿ ಆ ಪಂಜರವನ್ನು

ಇಡಿಸಿದ ಕೂಡಲೇ ಸಿಂಹದ ಮೇಲೆ ತೊಡೆದಿದ್ದ ಅರಗು. ಮೇಣಗಳು ಕರಗಿಹೋಗಿ ಅಚ್ಚ ಕಬ್ಬಿಣದ ಸಲಾಕಿಗಳು ಮಾತ್ರ ನಿಲ್ಲಲು. ನಂದರು ಆಶ್ಚರ್ಯಪಟ್ಟು ತಮ್ಮ ನಗರದಲ್ಲಿ ಪಂಜರಪರೀಕ್ಷೆ ಆಯಿತೆಂಬುದರಲ್ಲಿ ಸಂತೋಷವೂ, ಅದು ಚಂದ್ರಗುಪ್ತನಿಂದ ಆದುದಕ್ಕಾಗಿ ಮಹಾಬುದ್ಧಿಶಾಲಿಯಾದ ಶತ್ರುವು ಉಳಿದನೆಂಬುದರಲ್ಲಿ ವ್ಯಸನವೂ ಉಂಟಾಗಿ ಇವರಡರಿಂದ ಆಕುಲಿತವಾದ ಹೃದಯ ಉಳ್ಳವರಾಗಿರಲು. ವೃದ್ಧಮಂತ್ರಿಯಾದ ವಕ್ರನಾಸನು ನಂದರು ನೋಡಿ :—

ಜೀಯಾ. ಯಾರಿಂದಲೂ ಶಕ್ಯವಾಗದ ಈ ಪಂಜರಪರೀಕ್ಷೆಯು ತಮ್ಮ ಮಗನಿಂದಲೇ ಆಯಿತೆಂದು ತಮ್ಮ ಕುಲಕ್ಕೆ ಲೋಕದಲ್ಲಿ ಬಹಳ ಖ್ಯಾತಿಯುಂಟಾಯಿತು. ಇಂಥಾ ಬುದ್ಧಿಶಾಲಿಯೂ. ನಿಮ್ಮ ಬಂಧುವೂ ಆಗಿರುವ ಇವನನ್ನು ಕಾರಾಗೃಹದಿಂದ ಬಿಡಿಸಿ ಯಥೋಚಿತಾಧಿಕಾರಮಂ ಕೊಡಿಸಿ ಸಂರಕ್ಷಿಸಿದರೆ ಮುಂದೆ ತಮ್ಮ ಕೆಲಸಕ್ಕೆ ಬಂದಾನು. ತಾವು ಸಭೆಯಲ್ಲಿ ನುಡಿದ ಮಾತೂ ಸತ್ಯವಾಗುವುದು, ಎನಲು ಅದಕ್ಕೆ ನಂದರು ತಮ್ಮ ಮನದಲ್ಲಿ—ಇವನು ಹೇಳಿದಂತೆ ಮಾಡಿದರೆ ಶತ್ರುಶೇಷಮುಳಿಯುವುದು. ಮಾಡದಿದ್ದರೆ ನಂದರು ಆಡಿದ ಮಾತಿಗೆ ತಪ್ಪಿದರೆಂಬ ಜನಾಪವಾದಮುಂಟಾಗುವುದು ಎಂದು ಯೋಚಿಸುತ್ತಾ ಸುಮ್ಮನೆ ಇರಲು, ಸುಮತಿ ಎಂಬ ಮತ್ತೊಬ್ಬ ಮಂತ್ರಿಯು ತನ್ನ ಮನದಲ್ಲಿ :—

ಈ ನಂದರ ಮನಸ್ಸು ವೃದ್ಧಮಂತ್ರಿವಾಕ್ಯದಿಂದ ಅರ್ಧಾಂಗೀಕಾರವಾಗಿದೆ. ನಾನು ಇವರ ಮನೋನುಸಾರವಾಗಿ ಸದ್ಯಕ್ಕೆ ಇವರ ಮಾತು ಉಳಿಯುವಂತೆಯೂ. ಮುಂದೆ ಚಂದ್ರಗುಪ್ತನು ನಾಶವಾಗುವ ಸೂಚನೆಯು ತೋರುವಂತೆಯೂ ಹೇಳದಿದ್ದರೆ ಪುನಃ ಚಂದ್ರಗುಪ್ತನಿಗೆ ಕಾರಾಗೃಹವನ್ನೇ ನೇಮಿಸುವರು. ಈ ದುಷ್ಟರು ಯಾತಕ್ಕೂ ಹೇಸರೆಂದು ನಿಶ್ಚಯಿಸಿ ನಂದರು ಕುರಿತು :—

ಸ್ವಾಮಿ, ಈ ಚಂದ್ರಗುಪ್ತನನ್ನು ಕಾರಾಗೃಹದಿಂ ಬಿಡಿಸಿ ಅವನಿಗೆ ಇನ್ನಾವ ಅಧಿಕಾರವನ್ನೂ ಕೊಡಕೂಡದು. ಬ್ರಾಹ್ಮಣಭೋಜನದ ಅನ್ನಸತ್ರಾಧಿಕಾರವಂ ಕೊಡಿಸಬೇಕೆಂದು ಹೇಳಲಾಗಿ. ನಂದರು ಆ ಮಾತಿಗೆ ಇದರ ಅಭಿಪ್ರಾಯವೇನೆಂದು ರಾಕ್ಷಸನ ಮುಖವಂ ನೋಡಲು. ಆತನು ನಂದರುಂ ಕುರಿತು ರಹಸ್ಯವಾಗಿ :—

ಎಲೈ ರಾಜಪುತ್ರರುಗಳಿರಾ. ಈ ಚಂದ್ರಗುಪ್ತನು ವೃದ್ಧರಾಜನ ಪೌತ್ರನಾದುದರಿಂದ ಈ ಸ್ವಲ್ಪಾಧಿಕಾರದಲ್ಲಿ ಉದಾಸೀನನಾಗಿ ಬ್ರಾಹ್ಮಣರ ಸಂತರ್ಪಣೆಯಂ ಚೆನ್ನಾಗಿ ವಿಚಾರಿಸದೇ ಹೋಗುವನು. ಆಗ ತಮಗೆ ಅಪವಾದವುಂಟಾಗದೆ ಬ್ರಾಹ್ಮಣರ ಶಾಪದಿಂದ ತಮ್ಮ ಶತ್ರುಶೇಷವು ಪರಿಹಾರವಾಗುವುದೆಂಬುವುದೇ ಸುಮತಿಯ ಮನೋಗತವು ಎಂದು ಹೇಳಿದನು. ಅದಕ್ಕೆ ನಂದರು ಸಮ್ಮತಿಪಟ್ಟು ಅದೇ ಪ್ರಕಾರವಾಗಿ ಚಂದ್ರಗುಪ್ತನಂ ಕಾರಾಗೃಹದಿಂ ಬಿಡಿಸಿ ಅನ್ನಸತ್ರಾಧಿಕಾರದೊಳ್ ನೇಮಿಸಿದರು.

ಆಗ ರಾಕ್ಷಸನು—ಪಂಜರರಕ್ಷಕರಂ ನಾವು ದಂಡಿಸದೆ ಇದ್ದರೆ ನಮ್ಮ ಅವಹೇಳನಾರ್ಥವಾಗಿ ಈ ಕಪಟಸಿಂಹವಂ ಕಳುಹಿಸಿದವರಿಗೆ ಮುಖಭಂಗವಾಗದೆಂದು, ಅವರಂ ಕರೆತರುವುದಕ್ಕಾಗಿ ದೂತರಿಗೆ ನೇಮಿಸಲು. ಆ ದೂತರು ಅವರನ್ನು ಹುಡುಕಿ ಎಲ್ಲೂ ಕಾಣದೆ ಬಂದು ರಾಕ್ಷಸನಿಗೆ—ಅವರು ತಮ್ಮ ಸಾಮಗ್ರಿಗಳಂ ಬಿಟ್ಟು ಓಡಿಹೋಗಿರುವರು ಎಂದು ಹೇಳಲಾಗಿ ರಾಕ್ಷಸನು ತನ್ನ ಮನೆಗೆ ಹೋದನು.

ಆಗ ಚಂದ್ರಗುಪ್ತನು ಗಂಗಾನದಿಯಲ್ಲಿ ಸ್ನಾನವಂ ಮಾಡಿ ತಂದೆ ತಮ್ಮಂದಿರಿಗೆಲ್ಲಾ ತಿಲೋದಕವಂ ಕೊಟ್ಟು, ಅನ್ನಸತ್ರಾಧಿಕಾರವಂ ಮಾಡಿಕೊಂಡಿದ್ದನು.

## ಟಿಪ್ಪಣಿ

ಕೃತಿ ಮತ್ತು ಕರ್ತೃ :—

ಇಲ್ಲಿನ 'ಪಂಜರಪರೀಕ್ಷೆ' ಎಂಬ ಭಾಗವನ್ನು ಕೆಂಪುನಾರಾಯಣ ಕವಿಯ 'ಮುದ್ರಾಮಂಜೂಷ'ವೆಂಬ ಗದ್ಯಕಾವ್ಯದಿಂದ ಎತ್ತಿಕೊಂಡಿದೆ. ಈ ಕವಿಯು ಮುಮ್ಮಡಿ ಕೃಷ್ಣರಾಜರ (೧೭೯೪–೧೮೬೮) ಆಶ್ರಯದಲ್ಲಿದ್ದನು. ವಿಶಾಖದತ್ತನೆಂಬ ಕವಿ ಸಂಸ್ಕೃತದಲ್ಲಿ ಬರೆದಿರುವ 'ಮುದ್ರಾರಾಕ್ಷಸ' ಎಂಬ ನಾಟಕ ಈತನ ಗ್ರಂಥಕ್ಕೆ ಆಧಾರ. ಆಧುನಿಕ ಕಾದಂಬರಿಗಳು ಇನ್ನೂ ಹುಟ್ಟದಿದ್ದ ಕೆಂಪುನಾರಾಯಣನ ಕಾಲದಲ್ಲಿ, ಕಾದಂಬರಿಯನ್ನು ಹೋಲುವ ಮುದ್ರಾಮಂಜೂಷವು ಅತ್ಯಂತ ಜನಪ್ರಿಯವಾದುದು ಸಹಜವಾಗಿಯೇ ಇದೆ. ರಾಜತಂತ್ರ ನಿಪುಣನಾದ ಚಾಣಕ್ಯನು ಮದಾಂಧರಾದ ನವನಂದರನ್ನು ಸಂಹರಿಸಿ, ಮೌರ್ಯನಾದ ಚಂದ್ರಗುಪ್ತನನ್ನು ಪಟ್ಟಕ್ಕೇರಿಸಿದುದು ಈ ಕತೆಯ ತಿರುಳು. ಕೆಂಪುನಾರಾಯಣನ ಗದ್ಯ ಪ್ರೌಢವಾಗಿದ್ದರೂ ಲಲಿತವಾಗಿದೆ, ಶಕ್ತಿಯುತವಾಗಿದೆ. ಗದ್ಯಸಾಹಿತ್ಯದ ಬೆಳವಣಿಗೆಯಲ್ಲಿ ಈ ಗ್ರಂಥದ ಪಾತ್ರವು ಗಮನಾರ್ಹವಾದುದು.

ಪಾಟಲೀಪುರದ ಸರ್ವಾರ್ಥಸಿದ್ಧಿರಾಯನಿಗೆ ಇಬ್ಬರು ಹೆಂಡತಿಯರು. ಇವರಲ್ಲಿ ಪಟ್ಟದ ರಾಣಿಯಲ್ಲಿ ಜನಿಸಿದವರು ನವನಂದರು; ಪ್ರೇಮದ ಮಡದಿ ಮುರೆಯಿಂದ ಜನಿಸಿದವರು ಚಂದ್ರಗುಪ್ತನೇ ಮೊದಲಾದ ನೂರ್ವರು ಮಕ್ಕಳು. ಶೂರರಾದ ಈ ಮೌರ್ಯರನ್ನು ನಾಶ ಮಾಡುವುದಕ್ಕಾಗಿ ನವನಂದರು ಅವರನ್ನು ನೆಲಮಾಳಿಗೆಯಲ್ಲಿ ಸೆರೆಹಾಕಿದರು. ಸಾಕಷ್ಟು ಆಹಾರವಿಲ್ಲದೆ ಅವರೆಲ್ಲ ಸತ್ತುಹೋದರು. ಚಂದ್ರಗುಪ್ತನೊಬ್ಬನು ಮಾತ್ರ ಅರೆಜೀವವಾಗಿ ಉಳಿದುಕೊಂಡಿದ್ದನು. ಈ ಸನ್ನಿವೇಶದಲ್ಲಿ ಪರ್ವತರಾಜನು ಪಾಟಲೀಪುರದವರ ಬುದ್ಧಿಶಕ್ತಿಯನ್ನು ಪರೀಕ್ಷಿಸುವುದಕ್ಕಾಗಿ, ಅಖಂಡವಾದ ಪಂಜರದಲ್ಲಿ ಜೀವಸಿಂಹದಂತೆ ಕಾಣುವ ಕಪಟಸಿಂಹವೊಂದನ್ನು ಶಿಲ್ಪಿಗಳಿಂದ ಮಾಡಿಸಿ, ಅದನ್ನು ತಕ್ಕ ರಕ್ಷಕರೊಡನೆ ಪಾಟಲೀಪುರಕ್ಕೆ ಕಳುಹಿಸಿಕೊಟ್ಟನು. ಈ ಸಿಂಹವನ್ನು ಜೀವಂತವಾಗಿ ಹೊರಕ್ಕೆ ತೆಗೆಯುವ ಜಾಣರಾರಾದರೂ ಇರುವರೇ ಎಂದು ಊರಿನಲ್ಲಿ ಆ ರಕ್ಷಕರು ಸಾರುತ್ತಾ ಬಂದರು. ಅದರ ಮರ್ಮ ಯಾರಿಗೂ

ಗೋಚರವಾಗದಿರಲು ಸೆರೆಮನೆಯಲ್ಲಿದ್ದ ಚಂದ್ರಗುಪ್ತನು ಅದರ ಮರ್ಮವನ್ನು ಭೇದಿಸಿ ಬಂಧಮುಕ್ತನಾದನು. ಇದೇ ಇಲ್ಲಿ ನಾವು ಕಾಣುವ ಕಥಾಭಾಗ.

ಕಠಿಣಪದಗಳ ಅರ್ಥ :

ಅಮಾನುಷಕೃತ--ಮನುಷ್ಯಾತೀತರು ಮಾಡಿದ ; ಮನುಷ್ಯರಿಗಿಂತಲೂ ಹೆಚ್ಚು ಶಕ್ತರಾದವರು (ದೇವತೆಗಳೇ ಮೊದಲಾದವರು) ಮಾಡಿದ. ಭೇದಿಸು—ಕತ್ತರಿಸು. ನೆರೆ--ಒಟ್ಟುಗೂಡು. ರಹಸ್ಯ—ಗುಟ್ಟು. ದೇಶಾಂತರ--ಬೇರೆ ದೇಶ. ದೊರೆತಾರು---ಸಿಗಬಹುದು. (ಸಂಭಾವನಾರ್ಥ) ಸನ್ಮಾನ--ಗೌರವ. ಸನ್ನಿಧಿಗೈದಿ--ಹತ್ತಿರಕ್ಕೆ ಹೋಗಿ. ಬಿನ್ನವಿಸು—ವಿಜ್ಞಾಪಿಸು. ಉಪಾಸಕರು-ಆರಾಧನೆ ಮಾಡುವವರು. ಹಸ್ತಾಹಾರ--ಹಸ್ತ + ಆಹಾರ—ಕೈಯಿಂದ ಬಂದ ಆಹಾರ. ಕಪಟೋಕ್ತಿ--ಕಪಟ + ಉಕ್ತಿ(ಗು.ಸಂ.) ಮೋಸದ ಮಾತು. ಅಪಲಾಪ—ವ್ಯರ್ಥವಾದ ಮಾತು. ದೂರಸ್ಥ—ದೂರದಲ್ಲಿರುವ. ಸರಿ—ಅಂಟು ; ಜಿಗಟುಪದಾರ್ಥ. ರೋಮ—ಕೂದಲು. ಕೌಶಲ್ಯ—ಜಾಣ್ಮೆ. ಅಸ್ಥಿ—ಮೂಳೆ. ಶಿಲ್ಪೋಪಾಯ—ಶಿಲ್ಪ + ಉಪಾಯ—ಜಾಣತನದಿಂದ ಮಾಡಿದ ಯಂತ್ರವಿಶೇಷ. ಜನ್ಮಾರಭ್ಯ—ಜನ್ಮ+ಆರಭ್ಯ (ಸ. ದೀ. ಸಂ.) ಹುಟ್ಟಿದಂದಿನಿಂದ ಮೊದಲುಗೊಂಡು. ಜಾರಸ್ತ್ರೀ—ವೇಶ್ಯೆ. ಜಿತರಾದೆವು—ಗೆಲ್ಲಲ್ಪಟ್ಟೆವು. ನಿಮಿತ್ತ—ಕಾರಣ. ಸಾರು—ಡಂಗುರಹೊಡೆ. ವಿಡಂಬನ—ಹಾಸ್ಯ. ಬಯಲಾಗು—ಹೊರಬೀಳು ; ಪ್ರಕಟವಾಗು. ದಂಡಿಸು—ಶಿಕ್ಷೆಮಾಡು. ವಿಮೋಚನೆ--ಬಿಡುಗಡೆ. ಭೂಷಣ---ಅಲಂಕಾರ. ಗೂಢಾರ್ಥ —ಗೂಢ + ಅರ್ಥ—ಒಳಗುಟ್ಟು. ಸಂದಣಿ --ಗುಂಪು. ಪರಾಂಬರಿಸು—ಕೇಳು ; ವಿಮರ್ಶೆ ಮಾಡು. ..ಆಕುಲಿತ—ದುಃಖದಿಂದ ಕೂಡಿದ. ಶಕ್ಯ—ಸಮರ್ಥ. ಖ್ಯಾತಿ—ಕೀರ್ತಿ. ಯಥೋಚಿತ—ಯಥಾ + ಉಚಿತ ; ಯಥೋಚಿತ + ಅಧಿಕಾರ—ವ್ಯಕ್ತಿಗೆ ಯೋಗ್ಯವಾದ ಜವಾಬ್ದಾರಿ. ಬಂದಾನು—(ಸಂಭಾವನಾರ್ಥ) ಬರಬಹುದು. ಹೇಸು—ಅಸಹ್ಯಪಡು. ಪೌತ್ರ —ಮೊಮ್ಮಗ. ಮನೋಗತ—ಅಭಿಪ್ರಾಯ. ಅವಹೇಳನ—ನಿಂದೆ, ಅಪಮಾನ . ಮುಖಭಂಗ-ಅವಮಾನ.

ಪ್ರಶ್ನೆಗಳು :

೧. ಪಂಜರದವರು ಪಾಟಲಿಪುರದಲ್ಲಿ ಏನೆಂದು ಸಾರಿದರು ?

೨. ಚಂದ್ರಗುಪ್ತನು ಪಂಜರದ ಸಿಂಹವನ್ನು ಹೇಗೆ ಪರೀಕ್ಷೆಮಾಡಿದನು ?

೩. ಚಂದ್ರಗುಪ್ತನು ಪಂಜರರಕ್ಷಕರನ್ನು ಪಾರ್ವತೇಯರೆಂದು ಹೇಗೆ ತಿಳಿದನು ?

೪ ಪಾರ್ವತೇಯರು ಪಾಟಲಿಪುರದಿಂದ ಹೇಗೆ ತಪ್ಪಿಸಿಕೊಂಡರು ?

೫. ಚಂದ್ರಗುಪ್ತನು ನಂದರಿಗೆ ಪಂಜರದಲ್ಲಿದ್ದ ಸಿಂಹವು ಜಡಸಿಂಹವೆಂದು ಹೇಗೆ ತೋರಿಸಿಕೊಟ್ಟನು ?

೬. ಚಂದ್ರಗುಪ್ತನನ್ನು ಅನ್ನಸತ್ರಾಧಿಕಾರಿಯಾಗಿ ನೇಮಿಸಿದುದಕ್ಕೆ ಸುಮತಿ ನೀಡಿದ ಕಾರಣವೇನು ?

ಇವುಗಳನ್ನು ಸಂದರ್ಭಸಹಿತ ಸ್ಪಷ್ಟೀಕರಿಸಿರಿ :

೧. 'ಈ ಊರಲ್ಲಿ ಪ್ರೌಢರಿದ್ದರೆ ಪಂಜರವಂ ಖಂಡಿಸದೆ ಸಿಂಹವನ್ನು ಜೀವಸಹಿತವಾಗಿ ಹೊರಗೆ ತೆಗೆಯತಕ್ಕದ್ದು'

೨. 'ಈಗ ಹೋಗಿ ನೋಡುವುದು ಯುಕ್ತವಲ್ಲ'

೩. 'ಸಿಂಹವು ಅಮಾನುಷಕೃತವಾದುದರಿಂದ ತನ್ನ ಉಪಾಸಕರ ಹಸ್ತಾಹಾರವಂ ಬಯಸುವುದಲ್ಲದೆ ಅನ್ಯರಂ ಭಾವಿಸುವುದುಂಟೆ ?'

೪. 'ಕಬ್ಬಿಣವನ್ನು ಹಿಡಿಯುವ ಧರ್ಮವು ಸೂಜಿಗಲ್ಲಿನ ಸ್ವಭಾವ'

೫. 'ಗಟ್ಟ ಬೆಟ್ಟವಂ ಸೇರಿ ಪರರಿಂ ಜೀವಿಸುತ್ತ ಕಾಡಿನ ಜೋಗಿಗಳಂತೆ ತಿರುಗುವವರಿಗೆ ಇಂತಹ ದೇಶವೆಂದು ಹೇಗೆ ಹೇಳೋಣ ?'

ಪದಗಳನ್ನು ಬಿಡಿಸಿ ಸಂಧಿಯ ಹೆಸರನ್ನು ತಿಳಿಸಿ :

ದೇಶಾಂತರ ; ಪರೀಕ್ಷಾರ್ಥ ; ಪ್ರತ್ಯುತ್ತರ ; ಮಾಂಸಾಪೇಕ್ಷೆ ; ಕಪಟೋಕ್ತಿ ; ಕಪಟೋಪಾಯ.

ಇವುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬರೆಯಿರಿ :

ಆಜ್ಞಾಪಿಸು ; ಬಿನ್ನೈಸು ; ಪಾತ್ರನಾಗು ; ಅಖಂಡ ; ಗ್ರಹಿಸು ; ಆತಂಕಪಡು ; ಬಯಲಾಗು ; ಪ್ರಯತ್ನಪೂರ್ವಕ ; ಕಣ್ಣುಸನ್ನೆ.

ಇವುಗಳ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ :

ನಿಸ್ಸಂದೇಹ ; ಅಪರಾಧಿ ; ಶಕ್ಯ ; ಸತ್ಯ ; ಲೋಪ ; ಸಮ್ಮತಿ ; ಆತಂಕ ; ಆಸಕ್ತಿ ; ಧರ್ಮ ; ಸಮರ್ಥ ; ಯುಕ್ತ.

* * * *

# ಗಂಭೀರೆ

—ಶಿವಕೋಟ್ಯಾಚಾರ್ಯ

ಹರಿಪುರಿಯೆಂಬ ಪೊೞಲೊಳ್ ಗಂಭೀರೆಯೆಂಬೊಳೊರ್ವಳ್ ಬಿರ್ದ್ದಿಯಾಕೆಯ ಮಗಳ್ ಹರಿಣೆಯೆಂಬೊಳಾಕೆಯುಂ ಜಯಂತಮೆಂಬ ಪೊೞಲೊಳ್ ವಸುದತ್ತನೆಂಬ ಪರದಂಗೆ ಕೊಟ್ಟೊಡಾಕೆಗೆ ಗರ್ಭಮಾಗಿ ಮೋದಗೆಯ ಮೇಗೆ ಬಯಕೆಯಾದೊಡೆ ತಾಯ್ ಪಲವುಂ ತೆಱದ ಲಡ್ಡುಗೆಗಳ್ ಮಂಡಗೆಗಳುಂ ಮೊದಲಾಗೊಡೆಯ ಪಲವುಂ ಭಕ್ಷ್ಯರೂಪಂಗಳುಮಂ ಕೊಂಡು ಗಂಭೀರೆಯೆಂಬ ಬಿರ್ದ್ದಿ ಹರಿಪುರದಿಂ ಪೊಱಮಟ್ಟು ಮಗಳಿರ್ದ್ದೂರ್ಗ್ಗೆ ಪೋಪಳನ್ನೆಗವೆಡೆಯೊಳೆಣ್ಬರ್ ಕಳ್ಳರು ಕಂಡವರೊಳಗೊರ್ವನಃ ಪಿಡಿದಟ್ಟಿನ್ನಮಗಂ ನಿನ್ನನೆ ಪೋಲ್ಕುಂ ಪನ್ನೆರಟ್ಬರಿಸಂ ಪೋದೊನ್ತ ಪೋದನೆಂದಱಿಯೆನಾತನಂ ಕಾಣದಿರುಳುಂ ಪಗಲುಂ ನೆನೆದಟ್ಟು ಕಣ್ಗಳ್ ಬಾತಿರ್ಪ್ಪವಿಂದೆನಗೆ ಆತು ಬಂದಂತಿರೆ ನಿನ್ನಂ ಕಂಡು ಸಂತಸಮಾಯ್ತು ಮಗನೆ ನೀಮೆಲ್ಲಂ ಬನ್ನಿಂ ಪೋಪಂ ಸಾರೆಯೂರು ಮಿಂದುಂಡುಟ್ಟು ವಿಶ್ರಮಿಸಿ ನಾಳೆ ಪೋಪಿರೆಂದೊಡಗೊಂಡು ಪೋಗಿ ಮಗಳ ಮನೆಯನೆಯ್ದಿ ಅವರ್ಗೆಲ್ಲಂ ನೀರಸಿಡಿಸಿ ತಲೆಯುಂ ಪೂಸಿಸಿಯೊಲ್ಲಣಿಗೆಯನುಡಿಸಿ ತಲೆಯೊಳ್ ಕಱಿಯ ಪೊಯ್ದಾಗಳ್ ಬಿರ್ದ್ದಿ ಮನೆಯ ಮೇಗೇಱಿ ಕಳ್ಳರೆಂದು ಪೊಯ್ಯಲಿಟ್ಟಾಗಳನಿಬರುಂ ತ್ರಸ್ತೀಭೂತರಾಗಿ ಪಟ್ಟನೆ ಪಾಱಿಯೋಡಿ ಕೆಟ್ಟೋಳ್ಳಿ ತೆಮ್ಮಂ ಬಿರ್ದ್ದಿ ಛಿದ್ರಿಸಿದಳೆಂದು ಪಗೆಸಾಱಿರ್ದ್ದರಿತ್ತ ಬಿರ್ದ್ದಿಯುಂ ನೆಟ್ಟನಿಂದಿರುಳ್ ಕಳ್ಳರ್ ಬರ್ಪರೆಂದಱಿದು ಕೂರಿತಪ್ಪ ಬಾಳಂ ಪಿಡಿದಿರ್ದಳನ್ನೆಗಮಿರುಳ್ ಕಳ್ಳರ್ ವಂದಾಕೆಯ ಉಂದಿದ ಮನೆಯೊಳ್ ಕನ್ನಮಿಕ್ಕಿದೊಡೆ ಕನ್ನದ ಬಾಗಿಲೊಳ ಬಾಳನಡ್ಡಮಿಟ್ಟು ಪಿಡಿದಿರ್ದ್ದು ಪುಗುವ ಕಳ್ಳನ ಮೂಗನರಿದೊಡವಂ ಪೊಱಮಟ್ಟು ತನಗೆ ಪುಗಲ್ ಪಾಂಗಿಲ್ಲ ನೀಂ ಪುಗೆಂದು ಪೆಱನೊರ್ವನಂ ಪುಗಿಸಿದೊಡಾತನ ಮೂಗುಮಂ ಕೊಱೆದೊಡಾತನುಂ ಪೆಱನೊರ್ವನುಂ ಪುಗಿಸೆ ಸೂಱುಸೂಱಿನೊಳೆ ಪೊಕ್ಕೊಡನಿಬರ ಮೂಗುಮಂ ಕೊಱೆದಿಕ್ಕಿದೊಡನಿಬರುಂ ಮೂಗರಿಯೆಪಟ್ಟು ಪೊಱಮಟ್ಟು ಪೋಗಿಯೊರ್ವನಿಂದ್ರಜಾಲಿಗನ ಮನೆಯೊಳ್ ಕನ್ನಮಿಕ್ಕಿ ಪುಡುಕೆಯುಂ ತೆಗೆದು ಪೊತ್ತುಪೋಗಿ ಪೊಱವೊೞಲೊಳ್ ಶ್ಮಶಾನ

ದೊಳೞಿಪಿ ಕುಱಿಯುಂ ಕಳ್ದುತಂದಱುವರ್ ಕಳ್ಳರುಂ ಮಱಿಲುಂದಿದರೊರ್ವನಾ ಕುಱಿಯುಂ ಕೊಂದು ಜಾವಮಿರ್ದು ಮಸಣದ ಕಿಚ್ಚಿನೊಳ್ ಪಿಶಿತಮಂ ಮಾಡುತ್ತಿರ್ದ್ದು ಪ್ರಡುಕೆಯುಂ ಕೞಿದು ನೋೞ್ಪನ್ನೆಗಮದಱೊಳಗಿರ್ದ ಇಂದ್ರಜಾಲಿಗರ ಪಾವೆಗಳುಂ ಸೀರೆಗಳುಂ ಝುಣಂಬಮುಂ ಕೊಂಡೊಂದು ಪ್ರತಿಮುಖಮಂ ಕೊಂಡು ತನ್ನ ಮುಖದೊಳಿಟ್ಟು ಪುಲಿಯ ಝುಣಂಬಮುಮಂ ತೊಟ್ಟು ಶ್ಮಶಾನದೊಳುರಿವ ಕಿಚ್ಚಿನ ಪಕ್ಕದೆ ನಿಂದಿರ್ದನನ್ನೆಗಮೆೞ್ಚತ್ತು ಕುಡುಱುವರುಂ ಕಳ್ಳರುಂ ಬೇತಾಳನೆಂದಂಜಿ ಪ್ರಾಣಭಯದಿಂದೋಡಿ ಕೆಟ್ಟರಾತನುಮವರೋಡುವುದಂ ಕಂಡು ಪಿಶಿತಮಂ ಕೊಂಡು ಬೞಿಯಂ ತಗುಳೆ ಎನಿತನಿತಾತನಂ ಕಾಣ್ಬರನಿತನಿತನೆ ಬೇತಾಳಂ ಬೞಿಯಂ ತಗುಳ್ದನೆಂದೋಡೆ ಪ್ರತಿಮುಖಮುಮಂ ಝುಣಂಬಮುಮಂ ಕಳೆದೀಡಾಡಿ ತನ್ನ ಪೆಸರಂ ಪೇೞ್ದವರಂ ಮಾಣಿಸಿಯೊಡಗೂಡಿ ತನ್ನ ಮಾಡಿದ ಪಿಶಿತಮನವರ್ಗ್ಗೆಲ್ಲಂ ಪೞ್ಚಿಗೊಟ್ಟುಮನಿಬರುಮೊಂದಾಗಿ ಪೋಪನ್ನೆಗಂ.

ಇತ್ತ ಗಂಭೀರೆಯೆಂಬ ಬಿದ್ದಿ ಬೈಗಿರುಳಿನೊಂದು ಜಾವಮುಂಟೆನೆ ಎಟ್ಟಿ ಪೊಱಲಂ ಪೊಱಮಟ್ಟು ತನ್ನೂರ್ಗ್ಗೆವೋಪಳ್ ನೆರಂಬೆಱಿದಂಜಿ ವಂದಾಲದ ಮರನನೇಱಿರ್ದಳನ್ನೆಗಮಾ ಕಳ್ಳರಾಕೆಯೇಱಿರ್ದ್ದ ಮರಕ್ಕೆ ವಂದವರೊಳೊರ್ವಂ ಬಟ್ಟೆಯೊಳ್ ಬರ್ಪ ಜನಮಂ ನೋಡಲ್ವೇಡಿ ಮರದ ತುತ್ತತುದಿಯನೇಱಿ ನೋೞ್ಪನ್ನೆಗಂ ಮರದ ಮೇಗಿರ್ದ ವೃದ್ಧಸ್ತ್ರೀಯುಂ ಕಂಡು ನೀನಾರ್ಗೆಂದಾತಂ ಬೆಸಗೊಂಡೊಡಾಕೆಯಾನೀ ಮರದೊಳಿರ್ಪ್ಪ ಯಕ್ಷದೇವತೆಯೆಂದೊಡಾತನೆನಗೆ ಪೆಂಡತಿಯಪ್ಪಾ ಎಂದು ಬೆಸಗೊಂಡೊಡೊಂದು ಪಾಂಗಿನೊಳಪ್ಪೆನೀ ಪಿಶಿತದ ಖಂಡಮಂ ನಾಲಗೆಯಿಂ ಪಿಡಿದೆನ್ನ ಬಾಯೊಳಿಡುವೊಡೆ ನಿನಗಾಂ ಪೆಂಡತಿಯಪ್ಪೆನೆಂದು ನುಡಿದೊಡಾತನುಂ ನಾಲಗೆಯಿಂದಂ ಪಿಶಿತದ ಖಂಡಮಂ ಬಾಯೊಳಿಡೆ ನಾಲಗೆಯುಂ ಪಱಿಯೆ ಕಚ್ಚಿದೊಡವಂ ಪೊಯ್ಯಲಿಟ್ಟಂಜಿ ಬೀೞೆ ಅನಿಬರುಂ ಭಯದಿಂದೋಡೆ ವೃದ್ಧಸ್ತ್ರೀಯೆಂದಳ್ ಎನಗೆ ನಿಮ್ಮ ಕಳ್ವಲ್ಲಿಯೆಲ್ಲಮಂಟನೆಯ ಭಾಗಮಂ ತಂದೀ ಪೊಱಲೊಳಿಟ್ಟು ಪೋಪೊಡೆ ಬಾೞ್ವಿರಲ್ಲದಾಗಳ್ ಸತ್ತಿರ್ ನಿಮ್ಮೆಲ್ಲರುಮಂ ತಿಂದಪ್ಪೆನೆಂದೊಡಂಜಿ ಕಳ್ಳರಂತೆಗೆಯ್ವೆಮೆಂದೊಡಂಬಟ್ಟು ಕಳ್ವಲ್ಲಿಯೆಲ್ಲಮಂಟನೆಯ ಭಾಗಮಂ ಮರದ ಪೊಱಲೊಳಿಟ್ಟು ದಿವಸಕ್ಕಂ ಪೋಪರಾವೃದ್ಧಸ್ತ್ರೀಯುಂ ತನ್ನೂರಿಂದಂ ಬಂದು ಕಸವರಮಂ ಕೊಂಡು ಪೋಕುಂ.

## ಟಿಪ್ಪಣಿ

ಕರ್ತೃ ಮತ್ತು ಕೃತಿ :

ಇಲ್ಲಿನ ಕಥಾಭಾಗವನ್ನು ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ'ಯಿಂದ ತೆಗೆದುಕೊಂಡಿದೆ. ಆದಿಕವಿ ಪಂಪನಿಗಿಂತ ಪೂರ್ವದಲ್ಲಿಯೆ ಸುಮಾರು ಕ್ರಿ.ಶ. ೯೨೦—೯೩೦ರಲ್ಲಿ ಈ ಕಾವ್ಯ ಹುಟ್ಟಿರಬಹುದೆಂದು ಪಂಡಿತರು ಅಭಿಪ್ರಾಯಪಡುತ್ತಾರೆ. ವಡ್ಡಾರಾಧನೆ—ವೃದ್ಧಾರಾಧನೆ—ಹಿರಿಯರ ಪೂಜೆ ಎಂಬರ್ಥದ ಈ ಗ್ರಂಥ ಪ್ರಾಚೀನ ಜೈನಮಹಾತ್ಮರುಗಳ ಜೀವನವನ್ನು

ನಿರೂಪಿಸುವ ಹತ್ತೊಂಬತ್ತು ಕಥೆಗಳನ್ನು ಒಳಗೊಂಡಿದೆ. ಅವುಗಳಲ್ಲಿ ಮೊದಲನೆಯದು 'ಸುಕುಮಾರಸ್ವಾಮಿ' ಯ ಕಥೆ. ಸುಕುಮಾರಸ್ವಾಮಿಯು ತನ್ನ ಹಿಂದಿನ ಜನ್ಮದಲ್ಲಿ ನಾಗಶ್ರೀ ಯೆಂಬ ಹೆಣ್ಣಾಗಿ ಹುಟ್ಟಿ ತನ್ನ ತಂದೆಯೊಡನೆ ತಾನು ಸೂರ್ಯಮಿತ್ರಾಚಾರ್ಯರಿಂದ ಪಡೆದ ವ್ರತಗಳನ್ನು ಹಿಂದಿರುಗಿಸಲು ಹೋಗುತ್ತಿರುವಾಗ ದಾರಿಯಲ್ಲಿ ರಾಜಭಟರು ಒಬ್ಬನನ್ನು ಹೆಡೆಮುರಿಕಟ್ಟಿ ಎಳೆದುಕೊಂಡು ಹೋಗುತ್ತಿರಲು, ಅದನ್ನು ಕಂಡು ಆಕೆ ತನ್ನ ತಂದೆಯನ್ನು ಕುರಿತು 'ಹೀಗೇಕೆ ಎಳೆದುಕೊಂಡು ಹೋಗುತ್ತಿದ್ದಾರೆ ?' ಎಂದು ಕೇಳಲು, ತಂದೆಯು ತಳಾರ ನನ್ನು ಕೇಳಿ ತಿಳಿದುಕೊಂಡು ಮಗಳಿಗೆ ಈ ಕಥೆಯನ್ನು ಹೇಳಿದನು.

ಕಠಿಣಪದಗಳ ಅರ್ಥ :

ಪೊೞಲ್—ಪಟ್ಟಣ. ಯೆಂಬೊಳ್—ಎಂಬುವವಳು. ಬಿದ್ದಿರ್—ಮುದುಕಿ. ಪರದ—ವ್ಯಾಪಾರಿ. ಮೋದಗೆ ಒಂದು ಬಗೆಯ ಭಕ್ಷ್ಯ; ಕಡುಬು. ಮಂಡಗೆ—ಒಂದು ವಿಧವಾದ ಭಕ್ಷ್ಯ. ಮೊದಲಾಗೊಡೆಯ—ಮುಂತಾದ. ಪೊಱಮಡು—ಹೊರಡು. ಅನ್ನೆಗಂ—ಅಷ್ಟರಲ್ಲಿ. ಎಡೆಯೊಳ್—ಮಾರ್ಗಮಧ್ಯದಲ್ಲಿ. ಎಣ್ಬರ್—ಎಂಟುಜನ. ('ಎಂಟು' ಎಂಬುದಕ್ಕೆ 'ಎಣ್' ಎಂಬ ಆದೇಶ ಬಂದು, ಅದಕ್ಕೆ 'ಬರ್' ಎಂಬ ಬಹುವಚನ ಪ್ರತ್ಯಯ ಬಂದಿದೆ.) ಅೞ್ತು—ಅತ್ತು. ಪೋಲ್ಕುಂ—ಹೋಲುತ್ತಾನೆ. ಪನ್ನೆರಟ್ಬರಿಸಂ—ಹನ್ನೆರಡು ವರುಷ (ಬರಿಸ—ದ್ಭ) ಪೋದಂ - ಹೋದನು. ಬಾತಿರ್ಪುವು—ಊದಿಕೊಂಡಿವೆ. ಸಾರ ಯೂರಂ—ಸಾರೆ+ಊರಂ (ಯ. ಆ. ಸಂ.) ಸಮೀಪದ ಊರನ್ನು. ಮಿಂದು—ಸ್ನಾನಮಾಡಿ (ಮೀ—ಧಾತು). ಇಡಿಸಿ—ಕೊಡಿಸಿ. ತಲೆಯಂ ಪೂಸಿ—ಎಣ್ಣೆ ಮಜ್ಜನಮಾಡಿಸಿ. ಒಲ್ಲಣಿಗೆ—ಧೋತ್ರ. ಪುಯ್ಯಲಿಡು—ಕೂಗಿಕೊಳ್ಳುವುದು. ಅನಿಬರ್—ಅಷ್ಟುಜನರು. ತ್ರಸ್ತಾಭಿಭೂತ—ಹೆದರಿಕೆಯಿಂದ ಅಪಮಾನಿತರಾಗಿ. ಪಟ್ಟನೆ—ಕೂಡಲೇ. ಪಾಱಿಯೋಡಿ—ಪಾಱಿ+ಓಡಿ—ಓಡಿಹೋಗಿ. ಪಗೆಸಾರಿರ್ದರ್—ದ್ವೇಷಸಾಧಿಸುವುದಾಗಿ ನಿಶ್ಚಯಿಸಿದರು. ಛಿದ್ರಿಸು—ಮೋಸಮಾಡು. ನೆಟ್ಟನೆ—ನೇರವಾಗಿ. ಇಂದಿರುಳ್—ಇಂದಿನ+ಇರುಳ್—ಈ ರಾತ್ರಿ. ಕೂರಿತ್ತು—ಹರಿತವಾದ. ಬಾಳ್—ಕತ್ತಿ. ಲುಂದಿದ—ಮಲಗಿದ. ಪುಗುವ—ಪ್ರವೇಶಿಸುವ. ಅರಿ—ಕತ್ತರಿಸು. ಪಾಂಗು—ರೀತಿ; ಅವಕಾಶ. ಕೊಱೆ—ಕತ್ತರಿಸು. ಸೂಱ್—ಸರದಿ. ಮೂಗರಿಯೆಪಟ್ಟು—ಮೂಗುಕತ್ತರಿಸಿ ಹೋಗಿ. ಇಂದ್ರಜಾಲಿಗ—ಮಾಂತ್ರಿಕ. ಪುಡುಕೆ—ಪೆಟ್ಟಿಗೆ. ಪೊಱವೊಳಲ್ ಪೊಳಲ+ಪೊರಗೆ—ಊರಹೊರಗೆ, ಇೞಿಪು—ಕೆಳಕ್ಕೆ ಇಳಿಸು. ಕಳ್ದು—ಕದ್ದು. ಅಱುವರ್—ಆರುಜನ. ಮಱಲುಂದು—ಮೈಮರೆತು ಮಲಗು. ಜಾವಮಿರು—ಕಾಯ್ದುಕೊಂಡಿರು. ಮಸಣ—ಶ್ಮಶಾನ. (ತ್ಸ). ಕಿಚ್ಚು—ಬೆಂಕಿ. ಪಿಶಿತಮಂ ಮಾಡು—ಮಾಂಸ ಬೇಯಿಸು. ನೋೞ್ಪಿ—ನೋಡುವ. ಪಾಪೆ—ಬೊಂಬೆ. ಝುಣಂಬ—ಚರ್ಮದಿಂದ ಮಾಡಿದ ರವಕೆ. ಪ್ರತಿಮುಖ—ಮುಖವಾಡ. ಎಚ್ಚತ್ತು—ಎಚ್ಚರಗೊಂಡು. ಬೞಿಯಿಂ ತಗುಳೆ—ಹಿಂದೆ ಅಟ್ಟಿಸಿಕೊಂಡು ಹೋಗಲು. ಎನಿತೆನಿತು—ಎಷ್ಟು ಎಷ್ಟು

ಅನಿತನಿತು—ಅಷ್ಟು ಅಷ್ಟು. ಈಡಾಡು—ಬಿಸಾಡು. ಪೆಸರು—ಹೆಸರು. ಮಾಣಿಸು—ನಿಲ್ಲಿಸು; ತಡೆಗಟ್ಟು. ಪರ್ಚಿ—ಹಂಚಿ. ಬೈಗಿಲುಳ್—ಮುಂಜಾನೆ. ಜಾವ (ದ್ಭ)—ಯಾಮ; ಗಳಿಗೆ. ನೆರಂಬೆರದೆ—ನೆರಂ+ಪೆರದೆ; ಸಹಾಯವನ್ನು ಪಡೆಯದೆ (ಸಹಾಯಕರಿಲ್ಲದೆ). ಎಟ್ದಿ—ಎದ್ದು. ವಂದಾಲದ—ವಂದು+ಆಲದ (ಸ್ವ. ಲೋ.ಸು.) ವಂದು-ಒಂದು. ಬಟ್ಟೆ—ದಾರಿ. ಬರ್ಪ—ಬರುವ. ನೋಡಲ್ವೇಡಿ—ನೋಡಲ್+ಬೇಡಿ (ವಕಾರಾದೇಶ ಸಂಧಿ) ನೋಡಲು ಬಯಸಿ. ತುತ್ತತುದಿ—ತುದಿತುದಿ; ಅತ್ಯಂತ ಕೊನೆ. ನೀನಾರ್ಗೆ—ನೀನು ಯಾರವಳು. ಪೆಂಡತಿಯಪ್ಪಾ—ಹೆಂಡತಿಯಾಗುವಿಯಾ. ಪಾಂಗು—ರೀತಿ. ಖಂಡ—ತುಂಡು. ಪರಿ—ಹರಿ; ಕತ್ತರಿಸು. ಕಳ್ವಲ್ಲಿ—ಕದಿಯುವ ಕಡೆ. ಪೊಟಿಲ್—ಮರದ ಪೊಟರೆ. ಬಾಟ್ವಿರ್—ಬದುಕುವಿರಿ. ದಿವಸಕ್ಕಂ—ಪ್ರತಿದಿವಸವೂ. ಕಸವರ—ಚಿನ್ನ; ಐಶ್ವರ್ಯ. ಪೋಕುಂ—ಹೋಗುತ್ತಿದ್ದಳು.

ಪ್ರಶ್ನೆಗಳು :

೧. ಮುದುಕಿಯು ಕಳ್ಳರನ್ನು ಕಂಡಾಗ ಎಲ್ಲಿಗೆ ಹೊರಟಿದ್ದಳು ? ಏಕೆ ಹೊರಟಿದ್ದಳು ? ಕಳ್ಳರಿಂದ ತಪ್ಪಿಸಿಕೊಳ್ಳಲು ಅವಳು ಮಾಡಿದ ಉಪಾಯವೇನು ?
೨. ಮನೆಗೆ ಕನ್ನವಿಟ್ಟ ಕಳ್ಳರನ್ನು ಬಿದ್ದಿಯು ಹೇಗೆ ಶಿಕ್ಷಿಸಿದಳು ?
೩. ಮುದುಕಿಯು ಆಲದ ಮರವನ್ನೇಕೆ ಏರಿದಳು ?
೪. ತನ್ನನ್ನು ಮದುವೆಯಾಗು ಎಂದ ಕಳ್ಳನಿಂದ ಮುದುಕಿಯು ಹೇಗೆ ಪಾರಾದಳು ?
೫. ಕಳ್ಳರು ಮುದುಕಿಗೆ ತಾವು ಕದ್ದದ್ದರಲ್ಲಿ ½ ಭಾಗಕೊಡಲು ಕಾರಣವೇನು ?
೬. ಈ ಕಥೆಯಿಂದ ತಿಳಿದುಬರುವ ನೀತಿಯೇನು ?

ಈ ಮಾತುಗಳ ಸ್ವಾರಸ್ಯವನ್ನು ಸಂದರ್ಭಸಹಿತ ವಿವರಿಸಿ:

೧. "ಇರುಳುಂ ಪಗಲುಂ ನೆನೆದಟ್ಟು ಕಣ್ಗಳ್ ಬಾತಿರ್ಪುವು."
೨. "ತನಗೆ ಪುಗಲ್ ಪಾಂಗಿಲ್ಲ; ನೀಂ ಪುಗು."
೩. "ಈ ಪೊಟಿಲೊಳಿಟ್ಟು ಪೋಪೊಡೆ ಬಾಟ್ವಿರಲ್ಲದಾಗಳೆ ಸತ್ತಿರ್"

ಇವು ಯಾವ ವಿಭಕ್ತಿಗಳಲ್ಲಿವೆ ತಿಳಿಸಿರಿ :

ಪೊಟಿಲೊಳ್, ಹರಿಪುರದಿಂ, ತಲೆಯುಂ, ಕಳ್ಳನ, ಪರದಂಗೆ, ಮರಕ್ಕೆ,

ಈ ಕಥೆಯನ್ನು ನಿಮ್ಮ ಸ್ವಂತಮಾತಿನಲ್ಲಿ ಬರೆಯಿರಿ.

ಈ ಮಾತುಗಳನ್ನು ವಾಕ್ಯಗಳಲ್ಲಿ ಪ್ರಯೋಗಿಸಿರಿ:

ಪೊಣಮಡು, ಸೂಟ್, ಪೊಱದಿಕ್ಕು, ಮಱಲುಂದು, ತುತ್ತತುದಿ, ಪಾಂಗು, ಒಡಂಬಡು, ಕಸವರ.

****

# ನರಿಯುಂ ಭೇರಿಯುಂ

—ದುರ್ಗಸಿಂಹ

ಮದಗಜಸಂಕುಳದಿಂ ಶ್ವಾ
ಪದದಿಂದಂ ಗಿರಿಗುಹಾಳಿಯಿಂದಧಿಕಭಯ
ಪ್ರದಮೆನಿಪ ಘೋರಕಾಂತಾ
ರದೊಳೆ ಮಹಾಭೀರುವೆಂಬ ಜಂಬುಕನಿರ್ಕುಂ

ಆ ಜಂಬುಕನೊಂದು ದಿವಸಂ ಆಹಾರವಿಹಾರಕಾಂಕ್ಷೆಯಿಂಡವಿಯೆಲ್ಲಮಂ ತೊೞಲ್ದು ಎಲ್ಲಿಯುಮೇನುಮಂ ಪಡೆಯದೆ ತನಗೆ ಸಹಾಯನಪ್ಪುದೊಂದು ವಾಯಸನಿರ್ದಲ್ಲಿಗೆ ಬರ್ಪುದುಮಾ ವಾಯಸಂ ಇದಿರ್ವಂದು—ಎಲೆ ಭಾವ! ಏಂ ಬಡವಾದಿರೆನೆ; ಪಲವು ದಿವಸಮಾಹಾರ ಬಡೆಯದೆ ಬಡವಾಗಿ ನಿನ್ನಲ್ಲಿ ಆಸೆವಟ್ಟು ಬಂದೆನೆಂಬುದುಂ; ಇದಾವ ಗಹನಮಾಗಳಾಂ ಪೋಗಿ ಬರ್ಪನ್ನೆವರಮಿಲ್ಲಿಯೇ ನಿಲ್ಲಿಮೆಂದು ವಾಯುವೇಗದಿಂ ವಾಯಸಂ ಪೋಗಿ ಬಂದು—ಈ ತೋರ್ಪ ನದಿಯ ತೀರದೊಳ್ ಚತುರ್ಬಲಯುತರಿರ್ವರರಸುಗಳ್ ಕಾದಿದಲ್ಲಿ ಪೆಣಮಯಮಾಗಿರ್ದ ರಣಭೂಮಿಯಂ ಕಂಡೆಂ, ನಿನ್ನೊಡಲ ಬಡತನಂ ಕಿಡುವಿನಮಾಹಾರಕ್ಕೆಡೆಯಾದುದಲ್ಲಿಗೆ ಪೋಗೆಂದು ಪೇಳ್ವುದುಮಾ ನರಿ ಪರಿದು ಸಮರರಂಗಭೂಮಿಯನೆಯ್ದಿ ಅನೇಕಶಬಾಳೋಕನಜಾತಹರ್ಷನಾಗಿರ್ಪುದುಂ; ಕಿಱಿದಾನುಂ ಬೇಗಕ್ಕೆ ಭೋಂಕನೆ ಪೊಣ್ಮಿದ ಭಯಂಕರಧ್ವಾನಮಂ ಕೇಳ್ದಲ್ಲಿಯುಂ ನಿಲಲಣ್ಮದೆ ಓಡಿಬರ್ಪುದುಂ; ಲಂಬಕರ್ಣನೆಂಬುದೊಂದು ಜಂಬುಕಂ ಕಂಡಿದೇನೆಲೆ ಭಾವಾ! ನೀನೇತರ್ಕೆ ಭಯಾತುರನಾಗಿ ಬರ್ಪೆ, ಎನೆ; ಕೊಳುಗುಳ ನಿರ್ಮನುಷ್ಯಗೋಚರಮೆಂದು ಬಗೆದು ಪೋಪೆನ್ನೆಗಂ, ನೆಲಂ ಮೊೞಗಿದಂತಪ್ಪುದೊಂದು ಭಯಂಕರಧ್ವಾನಮಾಗಲದಂ ಕೇಳ್ದೋಡಿ ಬಂದೆನೆಂಬುದುಂ; ಆ ಜಂಬುಕನೆಂದುದು:—ಆ ಧ್ವಾನಮಾವುದೆಂದುಮಱಿಯದೆ ದೂರಭೀರುವಾಗಿ ಪೋಗಲ್ವೇಡ, ಆಯೆಡೆಯನಾ ತೋಱುಬಾ, ಎಂದೊಡಂಗೊಂಡು ಬಂದು ನೋಡುವನ್ನೆಗಂ; ಶಿಖರಿ ಶಿಖರಾನುಕಾರಿಯಪ್ಪ

ದೊಂದು ಭೇರಿ ಸಮೀರಣಪ್ರೇರಿತಭೂರುಹಶಾಖಾಗ್ರಹತಿಯಿಂದತಿಪ್ರಘೋಷಂಗೆಯ್ದುಂ ತದಾಹತಿಯಿಲ್ಲದಾಗಳ್ ನಿಶ್ಶಬ್ದಮಾಗಿಯುಂ ಇರ್ಕುಮದಂ ಕಂಡಾ ಜಂಬುಕಂ ಮನುಷ್ಯ ಸಂಚಾರಮಿಲ್ಲದುದಂ ನಿಶ್ಚಯಮಾಗಱಿದಾರಯ್ದು ಬಲವಂದು ನಿಂದು ನೋಡಿ ಮತ್ತಲ್ಲಿ ಯೇನಾನುಮಿರ್ಕುಮೆಂದು ಶಂಕೆಯಿಂ ಭೇರಿಯ ಕಣ್ಣಂ ವಿದಾರಿಸಿಯುದಱೊಳೇನುಮಂ ಕಾಣದೆ ಉಬರ್ಕಣಂ ಆ ನರಿ ದೂರಭೀರುಮಾದುದರ್ಕೆ ಹಾಸ್ಯಂ ಗೆಯ್ದುದು.

## ಟಿಪ್ಪಣಿ

**ಕರ್ತೃ ಮತ್ತು ಕೃತಿ :**

ಕರ್ತೃ ಮತ್ತು ಕೃತಿ ವಿಚಾರವನ್ನು "ಧೂರ್ತರಾದ ನಾಲ್ವರ್ ವಂಚಕರ್" ಪಾಠದಲ್ಲಿ ಕೊಡಲಾಗಿದೆ.

**ಕಠಿಣಪದಗಳ ಅರ್ಥ :**

ಪದ್ಯ ೧. ಸಂಕುಳ—ಸಮೂಹ. ಶ್ವಾಪದ—ಕ್ರೂರಮೃಗ. ಆಳಿ—ಸಮೂಹ, ಗುಂಪು. ಭಯಪ್ರದ—ಭಯವನ್ನುಂಟುಮಾಡುವ. ಗದ್ಯ :—ಕಾಂತಾರ - ಅರಣ್ಯ, ಕಾಡು. ಜಂಬುಕ—ನರಿ. ತೊಟಿಲು—ಅಲೆದಾಡು. ಅವಾಯಸ—ಅದು + ವಾಯಸ (ಗಮಕ ಸಮಾಸ)—ಆ ಕಾಗೆ. ಇದಿರ್ವಂದು—ಇದಿರು + ಬಂದು (ವಕಾರಾದೇಶಸಂಧಿ)—ಎದುರಾಗಿ ಬಂದು. ಆಹಾರಂಬಡೆಯದೆ—ಆಹಾರಂ + ಪಡೆಯದೆ (ಬಕಾರಾದೇಶಸಂಧಿ). ಪಡೆಯದೆ—ಹೊಂದದೆ. ಗಹನ—ಕಷ್ಟ. ಆಂ—ನಾನು. ನಿಲ್ಲಿಂ—ನಿಂತುಕೊಳ್ಳಿ. ಈತೋರ್ಪ—ಇದು + ತೋರ್ಪ—ಇಲ್ಲಿ ಕಾಣುವ. ಚತುರ್ಬಲಯುತರ್—ಆನೆ, ಕುದುರೆ. ರಥ. ಕಾಲಾಳು ಎಂಬ ನಾಲ್ಕು ಬಗೆಯ ಸೈನ್ಯದಿಂದ ಕೂಡಿದವರು. ಇರ್ವರ್—ಇಬ್ಬರು. ಪೆಣಮಯ—ಹೆಣದಿಂದ ತುಂಬಿದ. ಒಡಲು—ಶರೀರ. ಕಿಡುವಿನಂ—ಕೆಟ್ಟು ಹೋಗುವವರೆಗೆ ; ನಿವಾರಣೆಯಾಗುವವರೆಗೆ (ಕಿಡು ಎನ್ನುವುದು ಕೆಡು ಎನ್ನುವುದರ ಹಳೆಗನ್ನಡ ರೂಪ.) ಎಡೆ—ಅವಕಾಶ. ಪರಿದು—ಓಡಿಹೋಗಿ. ಸಮರರಂಗ—ಯುದ್ಧಭೂಮಿ. ಶಬ—ಶವ ; ಹೆಣ. ಆಳೋಕನ—ನೋಡುವುದು. ಜಾತ—ಉಂಟಾದ. ಕಿರುದಾನುಂ ಬೇಗ—ಬಹುಬೇಗ. ಝೋಂಕನೆ—ಕೂಡಲೇ (ಅವ್ಯಯ). ಝೊಮ್ಮು—ಹೊಮ್ಮು. ಧ್ವಾನ—ಧ್ವನಿ ; ಶಬ್ದ. ಅಣ್ಮು—ಶಕ್ತನಾಗು, ಏತರ್ಕೆ—ಏಕೆ. ಭಯಾತುರ—ಭಯ + ಆತುರ (ಸ. ದೀ. ಸಂ.) ಭಯ ಮತ್ತು ಆತುರ. ಭೀರು—ಹೇಡಿ ; ಅಂಜುಬುರುಕ. ಆಯೆಡೆ—ಆ + ಎಡೆ—ಆ ಪ್ರದೇಶ. ದೂರಭೀರು—ದೂರದಿಂದ ಕೇಳಿದುದಕ್ಕೆ ಹೆದರುವವ ಬೆಟ್ಟ—ಪರ್ವತ. ಶಿಖರಾನುಕಾರಿಯಪ್ಪ—(ಶಿಖರ + ಅನುಕಾರಿಯಪ್ಪ) ಪರ್ವತದ ಶಿಖರವನ್ನು ಹೋಲುತ್ತಿರುವ. ಭೇರಿ—ದೊಡ್ಡ ನಗಾರಿ. ಸಮೀರಣ—ಗಾಳಿ. ಪ್ರೇರಿತ—ಉಂಟಾದ ; ಅಲುಗಾಡಿಸಲ್ಪಟ್ಟ. ಭೂರುಹ—ಮರ. ಶಾಖಾಗ್ರ—(ಶಾಖ + ಅಗ್ರ)—ಕೊಂಬೆಯ

ತುದಿ (ಸ. ದೀ. ಸಂ.). ಹತಿ—ಹೊಡೆತ. ಪ್ರಘೋಷ—ದೊಡ್ಡ ಶಬ್ದ. ಅಹತಿ—ಹೊಡೆತ. ಆರಯ್—ವಿಚಾರಮಾಡು, ಯೋಚಿಸು. ಬಲವಂದು—ಪ್ರದಕ್ಷಿಣೆ ಮಾಡಿ. ಶಂಕೆ—ಸಂಶಯ. ವಿದಾರಿಸು—ಸೀಳು.

ಪ್ರಶ್ನೆಗಳು :

೧. ಜಂಬುಕನನ್ನು ಕಂಡಾಗ ವಾಯಸವು ಕೇಳಿದ ಪ್ರಶ್ನೆಯೇನು ? ಅದಕ್ಕೆ ಜಂಬುಕನ ಉತ್ತರವೇನು ?

೨. ಜಂಬುಕನ ಹಸಿವೆಯನ್ನು ಹೋಗಲಾಡಿಸಲು ವಾಯಸವು ನೀಡಿದ ಸಲಹೆಯೇನು ?

೩. ಜಂಬುಕನು ರಣರಂಗದಿಂದ ಓಡಿಬರಲು ಕಾರಣವೇನು ?

೪. ಲಂಬಕರ್ಣನು ಜಂಬುಕನನ್ನು ಹಾಸ್ಯಮಾಡಲು ಕಾರಣವೇನು ?

ಈ ಮಾತುಗಳ ಅರ್ಥವನ್ನು ಸಂದರ್ಭಸಹಿತ ಸ್ಪಷ್ಟೀಕರಿಸಿರಿ :

೧. "ನಿನ್ನೊಡಲ ಬಡತನಂ ಕಿಡುವಿನಮಾಹಾರಕ್ಕೆಡೆಯಾದುದು"

೨. "ಕೊಳುಗುಳಂ ನಿರ್ಮನುಷ್ಯ ಗೋಚರಂ"

೩. "ಆ ಧ್ವಾನಮಾವುದೆಂದುಮಱಿಯದೆ ದೂರಭೀರುವಾಗಿ ಪೋಗಲ್ವೇಡ"

ಇವುಗಳ ಅರ್ಥವನ್ನು ವಿವರಿಸಿ :

ಶಿಖರಿಶಿಖರಾನುಕಾರಿಯಪ್ಪ, ಭೇರಿ, ಸಮೀರಣಪ್ರೇರಿತ, ಭೂರುಹಶಾಖಾಗ್ರ.

ಇವುಗಳ ವಿಗ್ರಹವಾಕ್ಯಗಳನ್ನು ಬರೆದು ಸಮಾಸಗಳನ್ನು ಹೆಸರಿಸಿರಿ :

ಈತೋರ್ಪ, ಆಯೆಡೆ.

ಈ ಮಾತುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಪ್ರಯೋಗಿಸಿರಿ :

ವಾಯುವೇಗ, ಪೆಣಮಯ, ಭಯಾತುರ, ಶಿಖರಿಶಿಖರಾನುಕಾರಿ, ಸಮೀರಣಪ್ರೇರಿತ, ಭೂರುಹಶಾಖಾಗ್ರಹತಿ, ದೂರಭೀರು.

ಈ ಕಥೆಯನ್ನು ಹೊಸಗನ್ನಡದಲ್ಲಿ ಬರೆಯಿರಿ :

* * * *

# ಧೂರ್ತರಾದ ನಾಲ್ವರ್ ವಂಚಕರ್

—ದುರ್ಗಸಿಂಹ

ಒಬ್ಬ ಶ್ರೋತ್ರಿಯನಪ್ಪ ಪಾರ್ವಂ ಯಜ್ಞನಿಮಿತ್ತಂ ಒಂದಾಡಂ ಬೇಱೂರಿಂ ಮಾಱುಗೊಂಡು ಪೆಗಲೊಳಿಕ್ಕಿ ಪೋಪನಂ ನಾಲ್ವರ್ ಧೂರ್ತರ್ ಕಂಡು—ನಾವೀ ಬೆಳ್ಳನ ನಾಳವಾಡಿಕೊಂಡೀಯಾಡಂ ನಾಯುಂ ಮಾಡಿ ತಿಂಬಂ ಬನ್ನಿಮೆಂದು, ಮುಂದೆ ಪರಿದೋರೊರ್ವರೆ ಮಾರ್ಬಟ್ಟೆಯೊಳ್ ಬರ್ಪಂತಾಗಿ ಬರುತ್ತುಂ, ಮುನ್ನಮೊರ್ವಂ ಬಂದೆಲೆ ಪಾರ್ವ। ನೀನಪ್ಪೊಡೆ ದುರ್ವಾಸನ ಸಮಾನನಪ್ಪ ಬ್ರಾಹ್ಮಣಂ, ನೀನೀ ಶ್ವಾನನನೇನಿಮಿತ್ತಂ ಪೊತ್ತು ಪೋದಪೆಯೆಂದು ನುಡಿದು ಪೋದಂ, ಆ ಭಟ್ಟನೀ ದುಷ್ಟಂಗೆ ಮಱುಮಾತುಗೊಟ್ಟೊಡೇ ತಪ್ಪುದೆಂದುಸಿರದೆ ನಡೆವುದುಂ ; ಮತ್ತೊರ್ವನಿದಿರೆ ಬಂದೆಲೆ ಭಟ್ಟರೇ ! ಬ್ರಾಹ್ಮಣಂ ನಾಯುಂ ಮುಟ್ಟಲಾಗದೆಂಬರದು ಕೆಟ್ಟು ಪೊತ್ತುಕೊಂಡು ಪೋದಪೆ; ನೀವೆತ್ತಾನುಂ ಮರುಳ್ಗೊಂಡಿರೋ ಮರುಳಿಕ್ಕಿ ಅಟ್ಟುದನುಂಡಿರೋ ಪೇಟಿಮಲ್ಲದಾಗಳ್ ನೀನೆತ್ತಲೀ ಚಂಡಾಲಕರ್ಮದೊಳ್ ಕೂಡಿರ್ದು ಇಂತು ಭ್ರಷ್ಟಾಚಾರನಾದೆ, ನಿನ್ನಂ ಮುಟ್ಟಲಾಗದೆಂದವಂ ಕಳಿದು ಪೋಪುದುಂ; ಭಟ್ಟಂಗೆ ಭ್ರಾಂತಿ ಪುಟ್ಟಿ ನಿಂದು ಪೆಗಲೊಳಿರ್ದ ಛಾಗಲಮುಂ ಭೂಭಾಗದೊಳಿೞಿಪಿ,

ಶ್ರವಣಶಿರಃಪುಚ್ಛಾಸ್ಯಾ
ದ್ಯವಯವಮುಂ ಮುಟ್ಟಿ ನೋಡಿ ನಾಯಲ್ಲಿದು ಭೂ
ಭುವನಪ್ರಸಿದ್ಧ ಮಜಮೆಂ
ದವಧಾರಿಸಿ ಪೊತ್ತುಕೊಂಡು ಪೋದಂ ಪಾರ್ವಂ

ಇಂತು ನಡೆವ ಪಾರ್ವಂಗೆ ಮತ್ತೊರ್ವನಿದಿರು ಬಂದೆಲೆ ಪಾರ್ವ ! ನಿಮಗೆ ಕುಶಾಕ್ಷಮಾಲಾಯಜ್ಞೋಪವೀತೋತ್ತರೀಯಾದಿ ಚಿಹ್ನಂಗಳೆತ್ತಲೀ ನಾಯಂ ಪೊತ್ತು ಪೋಪುದೆತ್ತ ತ್ತಾನುಂ ನಿಮಗೆ ಮೃಗಯಾವ್ಯಸನವ್ಯಾಪಾರಮಾದುದಕ್ಕುಮಲ್ಲದಾಗಳಿದು ನಿಮ್ಮ ದುಷ್ಕರ್ಮದ ಫಲಮೆಂದು ನುಡಿದು ಪೋಪುದುಮಾ ಪಾರ್ವಂ ಚೋದ್ಯಂಬಟ್ಟು.

ಚಿತ್ತಭ್ರಾಂತಿಶ್ರಾಂತಂ
ಪೊತ್ತುದುಮಂ ತಡವಿ ನೋಡುತುಂ ಛಾಗಲಮಂ
ಮತ್ತಾ ಪಾರ್ವಂ ವಿಸ್ಮಿತ
ಚಿತ್ತಂ ಚಿಂತಿಸುತೆ ಮುಂತೆ ಬರೆ ಮತ್ತೊರ್ವಂ ।

ಅಂತು ಬಂದೆಲೆ ದ್ವಿಜ ! ನೀನಿನಿತು ಕಾಲಂ ಬ್ರಾಹ್ಮಣನುಂ ಸದಾಚಾರನುಮಾಗಿರ್ದೀಗಳೀ ಶ್ವಾನನಂ ಪೊತ್ತು ಹೀನಜಾತಿಸಮಾನನಾದೆ. ಇದಂ ಮಹಾಜನಂಗಳ್ ಕಂಡರಪ್ಪೊಡ ಸಭಾಜನಕ್ಕಂ ಸಹಪಙ್ಕ್ತಿಗಂ ಪೊಱಗೆಂದು ಸಮಯಬಾಹ್ಯನಂ ಮಾೞ್ಪರದಱಿಂದೀ ನಾಯಂ ನೀಡಾಡಿ ಪ್ರಾಯಶ್ಚಿತ್ತಮಂ ಕೈಕೊಳ್ಳಿಮೆಂದು ಪೇೞ್ದು ಪೋಪುದುಮಾ ಪಾರ್ವನಿದಂ ಕಂಡವರೆಲ್ಲಂ ನಾಯಂ ಪೊತ್ತುಕೊಂಡು ಪೋದಪನೆನುತ್ತುಮಿರ್ದರಾನೆತ್ತಾನುಂ ಮರುಳ್ಗೊಂಡನಕ್ಕುಮದಲ್ಲದಾಗಳಿದು ಕಾಮರೂಪಿಯಕ್ಕುಮಿದನೆಂತಱಿಯಲಕ್ಕುಮೆಂದು ಭಯಂಗೊಂಡಾಡು ಶ್ವಾನನೆಂದೀಡಾಡಿ ಮಾಳಂಗೊಂಡೋಡಿದಂ. ಇತ್ತಲಾ ಧೂರ್ತರೆಲ್ಲರ್ ಬಂದು ತಮ್ಮ ವಂಚನೋಪಾಯಕ್ಕೆ ತಾವೆ ಮೆಚ್ಚಿ ನಕ್ಕು ಆಡಂ ತಿಂದರ್.

## ಟಿಪ್ಪಣಿ

### ಕರ್ತೃ ಮತ್ತು ಕೃತಿ :—

ಕರ್ಣಾಟಕದ ಕಿಸುನಾಡಿನಲ್ಲಿದ್ದ ಸೈಯಡಿಯೆಂಬ ಅಗ್ರಹಾರದಲ್ಲಿ ಈಶ್ವರಾರ್ಯ-ರೇವಾಂಬೆ ಎಂಬ ಸಾತ್ವಿಕ ದಂಪತಿಗಳಿದ್ದರು. ಅವರ ಮಗ ದುರ್ಗಸಿಂಹ. ಆತನು ಒಂದನೆಯ ಜಯಸಿಂಹ ಜಗದೇಕಮಲ್ಲನಲ್ಲಿ ಸಂಧಿವಿಗ್ರಹಿಯಾಗಿದ್ದುಕೊಂಡು ಕ್ರಿ. ಶ. ೧೦೩೧ರಲ್ಲಿ "ಪಂಚತಂತ್ರ" ವೆಂಬ ಚಂಪೂಗ್ರಂಥವನ್ನು ಬರೆದನು.

ಸಂಸ್ಕೃತದಲ್ಲಿ ಮೂವರು "ಪಂಚತಂತ್ರ"ವನ್ನು ಬರೆದಿದ್ದಾರೆ—ವಸುಭಾಗಭಟ್ಟ, ವಿಷ್ಣುಶರ್ಮ ಮತ್ತು ಪೂರ್ಣಭದ್ರ. ಇವರಲ್ಲಿ ವಸುಭಾಗಭಟ್ಟನ ಗ್ರಂಥ ಈಗ ಉಪಲಬ್ಧವಾಗಿಲ್ಲ. ದುರ್ಗಸಿಂಹನು ವಸುಭಾಗಭಟ್ಟನ ಪಂಚತಂತ್ರವನ್ನು ಕನ್ನಡಿಸಿದ್ದಾನೆ. ಆದುದರಿಂದ ವಸುಭಾಗಭಟ್ಟನ ಗ್ರಂಥದ ಸ್ವರೂಪವನ್ನು ತಿಳಿಯಲು ಇದು ಸಹಾಯಕವಾದುದರಿಂದ ಅತ್ಯಮೂಲ್ಯವಾದುದಾಗಿದೆ.

ದುರ್ಗಸಿಂಹನ ಗ್ರಂಥದ ತಿರುಳು ಅರ್ಥಶಾಸ್ತ್ರ. ರಾಜನೀತಿಯ ಐದು ಉಪಾಯಗಳನ್ನು ಇದು ನಿರೂಪಿಸುತ್ತದೆ. ಅವು ಕ್ರಮವಾಗಿ (೧) ಜೀವದ ಗೆಳೆಯನಲ್ಲಿ ಒಡಕು ಹುಟ್ಟಿಸುವ ಭೇದೋಪಾಯ. (೨) ನಂಬದವರನ್ನು ನಂಬುವಂತೆ ಮಾಡಿ ಅವರ ಒಳಹೊಗುವುದು. ವಿಶ್ವಾಸೋಪಾಯ. (೩) ಯಾವ ಕಾರ್ಯವನ್ನೂ ವಿಚಾರಮಾಡದೆ ಕೈಕೊಳ್ಳಬಾರದೆಂದು ಬೋಧಿಸುವ ಪರೀಕ್ಷೋಪಾಯ. (೪) ಬೇರೆಯವರ ಮನಸ್ಸನ್ನು ತಿಳಿದುಕೊಂಡು

ಸಂಧಾನದಿಂದ ಮೋಸಮಾಡುವುದು ವಂಚನೋಪಾಯ. (೫) ಎಲ್ಲರನ್ನೂ ಅತಿಸ್ನೇಹದಿಂದ ತನ್ನವರನ್ನಾಗಿ ಮಾಡಿಕೊಳ್ಳುವ ಮಿತ್ರಕಾರ್‍ಯೋಪಾಯ. ರಾಜತಂತ್ರದ ರೀತಿನೀತಿಗಳನ್ನು ಮನೋರಂಜಕವಾದ ರೀತಿಯಲ್ಲಿ ರಾಜಪುತ್ರರುಗಳಿಗೆ ಬೋಧಿಸ ಹೊರಟಿರುವ ಕವಿಯು, ತನ್ನ ಬೋಧನೆಗೆ ಸಹಾಯಕವಾಗುವಂತೆ ಹಲವು ಸುಂದರವಾದ ಕಥೆಗಳನ್ನು ತನ್ನ ನಿರೂಪಣೆಯಲ್ಲಿ ಬಳಸಿದ್ದಾನೆ. ಅಂತಹ ಕಥೆಗಳಲ್ಲಿ ಎರಡನ್ನು ಇಲ್ಲಿ ಆಯ್ದುಕೊಂಡಿದೆ. ಇವೆರಡೂ ಪಂಚತಂತ್ರ ಗಳಲ್ಲಿ ಮೊದಲನೆಯದಾದ ಭೇದೋಪಾಯ ಪ್ರಕರಣದಿಂದ ಎತ್ತಿಕೊಂಡವು.

ಕಠಿಣಪದಗಳ ಅರ್ಥ :

ಶ್ರೋತ್ರಿಯ—ವೇದಾಭ್ಯಾಸಮಾಡಿದ ಬ್ರಾಹ್ಮಣ, ವೈದಿಕ. ಪಾರ್ವ—ಹಾರುವ ; ಬ್ರಾಹ್ಮಣ (ನಿರೀಕ್ಷಿಸುವವನು : ಬ್ರಹ್ಮನನ್ನು ನಿರೀಕ್ಷಿಸುವವನು). ನಿಮಿತ್ತ—ಕಾರಣ. ಮಾಱುಗೊಂಡು—ಕ್ರಯಕ್ಕೆ ಕೊಂಡು. ಧೂರ್ತ—ವಂಚಕ. ಬೆಳ್ಳ—ಪೆದ್ದ. ದಡ್ಡ. ಆಳವಾಡು—ಪೀಡಿಸು ; ಜರೆ. ಪರಿದು—ಓಡಿಹೋಗಿ. ಮಾರ್ಬಟ್ಟೆ—ಇದಿರು ದಾರಿ. ಅಪ್ಪೊಡೆ—ಆದರೆ. ದುರ್ವಾಸ—ಇವನೊಬ್ಬ ಋಷಿ. ಅತ್ರಿಮಹರ್ಷಿಯ ಮಗ ; ತುಂಬ ಕೋಪಿಷ್ಠನಾದವನು. (ದುರ್ಯೋಧನನ ಮಾತಿನಂತೆ ಪಾಂಡವರು ವನದಲ್ಲಿರುವಾಗ ಅಕಾಲದಲ್ಲಿ ಬಂದು ಅನ್ನವನ್ನು ಬೇಡಿದನು). ಶ್ವಾನ—ನಾಯಿ. ಮಱುಮಾತು—ಪ್ರತ್ಯುತ್ತರ. ಉಸಿರು—ಮಾತಾಡು. ಕೆಟ್ಟು—ಹಾಳಾಗಿ. (ಬ್ರಾಹ್ಮಣಧರ್ಮವನ್ನು ಹಾಳುಮಾಡಿಕೊಂಡು) ; ಎತ್ತಾನುಂ—ಎಲ್ಲಿಯಾದರೂ. ಮರುಳ್ಗೊಂಡಿರೋ—ಭ್ರಾಂತರಾದಿರೋ. ಮರುಳಿಕ್ಕಿ—ಹುಚ್ಚು ಹಿಡಿವ ಔಷಧವನಿಟ್ಟು, ಮದ್ದಿಟ್ಟು. ಅಟ್ಟುದ—ಅಡುಗೆ ಮಾಡಿದ ; ಚಂಡಾಲಕರ್ಮ—ನೀಚರು ಮಾಡುವ ಕೆಲಸ. ತೊಡರ್—ಸೇರು. ಭ್ರಷ್ಟಾಚಾರ—ಕೆಟ್ಟ ಆಚರಣೆ. ಛಾಗಲ—ಆಡು : ಮೇಕೆ.

ಪದ್ಯ ೧. ಶ್ರವಣ—ಕಿವಿ. ಪುಚ್ಛ—ಬಾಲ. ಆಸ್ಯ—ಮುಖ. ಆದ್ಯವಯವ—ಆದಿ+ಅವಯವ (ಯ. ಸಂ.) ; ಮೊದಲಾದ ಅಂಗಗಳು. ಭುವನ—ಪ್ರಪಂಚ ; ಲೋಕ. ಅಜ—ಆಡು ; ಮೇಕೆ. ಅವಧಾರಿಸು—ನಿಶ್ಚಯಿಸು.

ಕುಶ—ದರ್ಭೆ. ಅಕ್ಷಮಾಲಾ—ಜಪಸರ. ಯಜ್ಞೋಪವೀತ—ಜನಿವಾರ. ಉತ್ತರೀಯ—ಧೋತ್ರ; ಮೈಮೇಲೆ ಹೊದೆದುಕೊಳ್ಳುವ ವಸ್ತ್ರ. ಚಿಹ್ನಂ—ಗುರುತು. ಮೃಗಯಾವ್ಯಸನ—ಬೇಟೆಯಾಡುವ ಚಿಂತೆ. ದುಷ್ಕರ್ಮ—ಕೆಟ್ಟ ಕೆಲಸ. ಚೋದ್ಯ—ಆಶ್ಚರ್ಯ.

ಪದ್ಯ ೨. ಶ್ರಾಂತ—ಆಯಾಸಗೊಂಡ. ವಿಸ್ಮಿತಚಿತ್ತ—ಆಶ್ಚರ್ಯಗೊಂಡ ಮನಸ್ಸುಳ್ಳವನು.

ದ್ವಿಜ—ಬ್ರಾಹ್ಮಣ. ಸಹಪಙ್ಕ್ತಿ—ಒಟ್ಟಿಗೆ ಊಟಮಾಡುವುದು. ಬಾಹ್ಯ—ಹೊರಗಿನ. ಈಡಾಡು—ಬಿಸಾಡು. ಸಮಯಬಾಹ್ಯ—ಜಾತಿಯ ಹೊರಗೆ. ಮಾಳ್ಪರ್—ಮಾಡುವರು.

ಪ್ರಾಯಶ್ಚಿತ್ತ—ಪಾಪ ಪರಿಹಾರಕ್ಕಾಗಿ ಮಾಡುವಕರ್ಮ. ಕಾಮರೂಪಿ—ಬಯಸಿದ ರೂಪವನ್ನು ಧರಿಸುವ. ಮಾಳಂಗೊಂಡು—ಅಡವಿಯನ್ನು ಹಿಡಿದು (ಮಾಳ—ಅಡವಿ). ವಂಚನೋಪಾಯ—ವಂಚನೆ+ಉಪಾಯ (ಗು. ಸಂ.) ಮೋಸದ ಉಪಾಯ.

ಪ್ರಶ್ನೆಗಳು :

೧. ಬ್ರಾಹ್ಮಣನಿಂದ ಆಡನ್ನು ಕಸಿದುಕೊಳ್ಳಲು ಧೂರ್ತರು ಏನು ಯೋಚನೆ ಮಾಡಿದರು?
೨. ಬ್ರಾಹ್ಮಣನನ್ನು ಕಂಡು ಎರಡನೆಯ ಧೂರ್ತನು ಏನು ಹೇಳಿದನು ?
೩. ಎರಡನೆಯ ಧೂರ್ತನ ಮಾತನ್ನು ಕೇಳಿ ಬ್ರಾಹ್ಮಣನು ಏನು ಮಾಡಿದನು?
೪. ದ್ವಿಜನನ್ನು ಕಂಡು ಮೂರನೆಯ ಧೂರ್ತನು ಏನು ಹೇಳಿದನು ?
೫. ವಿಪ್ರನನ್ನು ನೋಡಿ ನಾಲ್ಕನೆಯ ಧೂರ್ತನು ಏನು ಹೇಳಿದನು ?
೬. ಧೂರ್ತರ ಮಾತನ್ನು ಕೇಳಿ ಬ್ರಾಹ್ಮಣನು ಏನು ಮಾಡಿದನು ?

ಈ ಮಾತುಗಳ ಅರ್ಥವನ್ನು ಸಂದರ್ಭಸಹಿತ ಸ್ಪಷ್ಟೀಕರಿಸಿರಿ :

೧. "ನೀವೆತ್ತಾನುಂ ಮರುಳ್ಗೊಂಡಿರೋ ಮರುಳಿಕ್ಕಿ ಅಟ್ಟುದನುಂಡಿರೋ"
೨. "ನಿಮಗೆ ಮೃಗಯಾವ್ಯಸನವ್ಯಾಪಾರಮಾದುದಕ್ಕುಂ"
೩. "ಇದು ನಿಮ್ಮ ದುಷ್ಕರ್ಮದ ಫಲಂ"
೪. "ಸಭಾಜನಕ್ಕಂ ಸಹಪಂಙ್ಕ್ತಿಗಂ ಪೊಱಗೆಂದು ಸಮಯಬಾಹ್ಯನಂ ಮಾಟ್ಪರ್."

ಈ ಶಬ್ದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬರೆಯಿರಿ :

ಮಱುಮಾತುಗುಡು ; ಭ್ರಾಂತಿಪುಟ್ಟು ; ಅವಧಾರಿಸು ; ಚೋದ್ಯಂಬಡು ; ಪ್ರಾಯಶ್ಚಿತ್ತ.

ಈ ಕಥೆಯನ್ನು ಹೊಸಗನ್ನಡದಲ್ಲಿ ಬರೆಯಿರಿ.

* * * *

# ಆ ಲಕ್ಷ್ಮಿ ರಕ್ಕಸಿಗೆ ಪುಟ್ಟುಗೆ

—ಮುದ್ದಣ.

ಸಮನಂತರದೊಳ್ ವಿಷ್ಣುಸಾನ್ನಿಧ್ಯಂಬಡೆದ ಕೌಶಿಕನುಕ್ಕೆವದಟ್ಟಿಗೆ ವಿಪಂಚೀಗುಣತತ್ತ್ವಜ್ಞರುಂ ವಾದ್ಯವಿದ್ಯಾವಿಶಾರದರುಮಪ್ಪವನ ಶಿಷ್ಯರಾಗಳ್ ಸೂಟಱಿತು ಪಾಡಲ್ ತೊಡಂಗಿದರ್. ಅಂದವಾಗೆ ಮೆಲ್ಪುವಡೆದ ತನಿಸೊದೆಯ ಸೋನೆವೋಲ್ ಕಿವಿಗಳ್ಗಿನಿದಂ ಕಱೆಯ ಪಾಡಿನೊಳ್ಪಂ ಕೇಳ್ದು ಅಗಣಿತ ಚೇಟಿಯರ್ ನೆರೆದರ್. ಅಂತು ಕಂಬಿಗಳಂ ಪಿಡಿದಂ ಸಿರಿಯ ಪಡಿಯಱತಿಯರುಂ, ಸಿರಿಯರಸನ ಪಡಿವಳರುಮೊದವಿದರಾಯೆಡೆಯ ಬಾಗಿಲೊಳ್. ಅಂತಪ್ಪ ಬಿನದಮಂ ನೋಡೆ, ಅಲರಿಚಂ, ಮುಗಿಲ್ದೇರಂ ಮುಂತಪ್ಪ ಬಿಡುಗಣ್ಣರುಂ, ನಾರದಾದಿ ರಿಸಿಗಳುಂ ಸಾರ್ತಂದು ಒಳಗೆ ಪುಗೆ ಗಲಭೆಗೆಯ್ದರ್. ಆಗಳ್ ಬಾಗಿಲವರ್ ಕಡದು ಪಿಂದಟ್ಟೆ, ನಾಲ್ಮೊಗನಣುಗಂ ಮುಂತೆ ನುರ್ಗಿದಂ. ಪಡಿಯಱತಿಯರವನಂ ನೋಕಿದರ್. ಮೊಗಮಂ ಕಿಱಿದುಗೆಯ್ದು ಎಲ್ಲರುಂ ಪಿಂಜರಿಯೆ, ಬೊಮ್ಮನವರ್ಗೆ—" ಅಪ್ಪುದಪ್ಪುದು, ಸಾಜಂ; ಆಣ್ಮನಿದಿರ್ಗೆ ಪೋಗಿ ನಿಲಲಾಮೆನಿತರವರ್ " ಎಂದು ಸಂತಯಿಸೆ ಸೊರ್ಕುಡುಗಲವರೆಲ್ಲರ್ ಪೊಱವಾಗಿಲೊಳ್ ನಿಲ್ತರ್.

ಅನಿತಱೊಳ್ ತುಂಬುರನೆಯ್ತಂದು ಪೊಱದೆಸೆಯೊಳ್ ದೇವರ ದರ್ಶನಕೆ ಕಾದಿರ್ಪ ಪಿಬುದುಂ, ಸಿರಿಯರಸನವನಂ ಮಾನಪೂರ್ವಕಂ ಕರೆಯಿಸಿಕೊಂಡು ಒಱಿಯೊಳ್ ಕುಳ್ಳಿರಿಸಿ, ಬಱಿಕಂ ಕೌಶಿಕನ ಸಂತಸಕೆ ಪಾಡಿಸುತೊಲ್ದು ಮನ್ನಿಸಿ, ರತ್ನಾದಿಗಳಂ ಪಾರಿತೋಷಕಮನಿತ್ತು ಕಳಿಪೆ ತನ್ನೆಡೆಗೆ ಪೊಱಮಟ್ಟಂ. ಮೇಣ್ ಸಗ್ಗಿಗರ ಪಿರಿಯಂ ಮೊದಲಪ್ಪ ಅಗ್ಗಿಮೊಗರಂ ಪರದನೊರ್ವನುಱಿದೆಲ್ಲ ರಿಸಿಗಳುಂ ತಮ್ಮೆಡೆಗೆ ತೆರಳ್ದರ್.

ಅಂಚೆದೇರನಣುಗಂ ಸಿರಿಯರಸಂ ತುಂಬುರನನೆ ಆದರಿಸಿ ತನ್ನಂ ಮನ್ನಿಸದಿರ್ದುದಂ ಪುಸುಂಬೊಟ್ಟಿ ಜಾನಿಸುತೆ ಬೇಗುದಿಗುದಿದು ತನಗೆ ತಾಂ—" ಸುಡು. ತನ್ನೀಬಾಟ್ಕೆಯುಂ, ಉಱಿರ್ಪ ಮುದಿ ತುಂಬುರಂಗೆ ಸಮ್ಮಾನಮಪ್ಪೆಡೆಯೊಳೆನಗೆ ದುಮ್ಮಾನಮಾದುದು ಗಡ !

ಅಕಟಕಟಾ! ಸಿರಿಯ ಪಡೆಯಱಿತಿಯರಿಂ ನೂಂಕಿಸಿಕೊಂಡೀ ನಾಣಿಲಿ ಮೆಯ್ಯಿರ್ದುರ್ಮೇಂ ಫಲಂ! ಆಃ ವಿಷ್ಣುದೂತರಾ ತುಂಬುರನಂ ಕೆಯ್ವಿಡಿದು ಕರೆದುಯ್ಯೆ, ಪಿಂಮೆಯ್ಯೊಳೇಂ ನೋಂತನೋ! ಎನುತ ಬಲ್ವಗೆಯೊಳ್ ಪಂಬಲಿಸಿ, ಮತ್ತಂ ಕೋಪಕೆ ಮೆಯ್ಯಿತ್ತು—“ಆವಳಾಣತಿಯಂತೆ ನಡೆವ ರಾವಳ ದಾಸಿಯರೆನ್ನಂ ಪೊಯ್ದು ನೂಂಕಿದರೋ, ಆ ಲಕ್ಷ್ಮಿ ರಕ್ಕಸಿಗೆ ಪುಟ್ಟುಗೆ, ಲೋಗರೇೞಿಪಂತೆ ಎನ್ನನಟ್ಟಿಸಿದಂತವಳುಮಂ ಪಡೆದಬ್ಬೆ ಪೆಱಗಟ್ಟುಗೆ” ಎಂದು ಬಿಱುನುಡಿ ನುಡಿದು.

ಅಚ್ಚರಿಯೆನುತಚ್ಚರರ್ ಮುಂತಪ್ಪರ್ ಅೞಲಿದರಾಗಳ್ ; ಮುಪ್ಪೊೞಲುಂ ನಡುಂಗಿದುದು. ಇಂತೀ ಪರಿಯನಱಿದು ಲಕ್ಷ್ಮಿವೆರಸು ನಾರಾಯಣಂ ಮುನಿಯೆಡೆಗೆ ನಡೆತಂದು ತಲೆವಾಗಿ ನಿಂದಿರ್ದಂ. ಮತ್ತಂ ಮಾಲಕುಮಿಯುವಂಗೆ—“ಪ್ರಸನ್ನನಾಗೈ ಮುನಿಯೆ, ಅಱಿವಿಲ್ಲದಾದ ಕಜ್ಜಕೆ ಮುನಿದು ನೀನೆನ್ನಂ ಸಪಿಸಿದೊಡಂ ತೊದಳಾಗದು. ನಿನ್ನೊಳಾನಿಂತು ಬೇಳ್ಪೆಂ. ರಕ್ಕಸಿಯ ಬಸಿಱೊಳೊರ್ಮೆದಲೊಳೆ ಪುಟ್ಟುವುದಕ್ಕೆ ಪಡಿಯಾಗಿ ಕಾಡೊಳಿರ್ಪ ತವಸಿಗಳ ನೆತ್ತರೊಳಾದೊಡಮೀಗಳ್ ಮಱಿಗೊಳ್ವೆಂ. ಅಂತಿರ್ಪ ನೆತ್ತರಂ ಕೊಂಚಂ ಕೊಂಚಂ ಪಿಡಿದು ಕಳಸಂ ತುಂಬಲಾವಳ್ ಕುಡಿವಳಾ ರಕ್ತದಿನಾನುಂ ಪಾವನಮಾಗೆ ಅವಳ್ಗೆಯೆ ಪುಟ್ಟುವೆಂ” ಎಂಬುದುಂ, ಮುಯ್ಯಂ ತೀರಿಸುತೊಡನೆಯೆ ಪಗೆಯುಳಿವ ಕೋೞ್ಮಿಗದಂತೆ ಮುಳಿಸಂ ಬಿಸುಟ್ಟು ಇವಳ ಬಯಕೆಯುಂ ದಾರುಣಮೆನುತೆ “ತಥಾಸ್ತು” ಎಂದಂ.

ಆಗಳ್ ಹೃಷೀಕೇಶನೀತನನಿನ್ನುಂ ತಿರ್ದಿದಲ್ಲದೆ ಪೊರ್ದುಗೆಯಾಗದೆನುತವಂಗೆ—“ಮುನಿಪುಂಗವ! ಕೇಳಾದೊಡೆ ತುಂಬುರನಂ ಮನ್ನಿಸಿ ತನ್ನನೇಱಿಸಿದರೆಂಬ ಬಗೆಯಿಂ ಕನಲ್ದಿಂತು ಗೆಯ್ದೈ. ನೀಡುಮೆಣಿಸೆ ನೀ ತಪ್ಪಿದವಂ, ದಿಟಂ. ಎಂತೆನೆ :—ಬಾಗಭೋಗದೊಳುಂ, ದಾನಮಾನದೊಳುಂ, ಧರ್ಮಕರ್ಮದೊಳುಂ, ನಡೆನುಡಿಯೊಳುಂ, ಬಿಜ್ಜೆಬಿನ್ನಣದೊಳುಂ, ತುಂಬುರನತ್ತಣಿಂ ನೀಂ ಪಿರಿಯನೆಂಬುದು ಸಾಜಮಾದೊಡಂ ಅಂತಪ್ಪ ಪೆರ್ಮೆಯಾರ್ಗಂ ಸಲ್ಲದೈ. ಮೇಣಾಂ ಭಕ್ತಿಪೂರ್ವಕಮನ್ನನೆ ಪೊಗೞ್ವ ಗಾಯನಕೆ ಸೋಲ್ವನಿತು ಪೂಜೆ, ತಪಸ್ಸು, ದಾನ, ತೀರ್ಥಾಟನಂಗಳ್ಗೆ ಮೆಚ್ಚೆಂ. ಇದಕ್ಕೆ ನಿದರ್ಶನಂ ಕೌಶಿಕನಂತುಂ ತುಂಬುರನುಂ. ಇಂತೀ ಭೇದಮಂ ಲೋಗರಱಿಯಲೆನುತುಂ ತಾನೆಸಗಿದೆನಲ್ಲದೆ ನಿನ್ನಂ ಲೆಕ್ಕಿಸದಲ್ಲಂ. ನೀನಿಂತು ಪರಿಭಾವಿಸದೆ ಸಪಿಸಿದೊಡಂ ಆಂ ಮುನಿವರಲ್ತು; ಎಮ್ಮೀ ಲೀಲಾವಿನೋದಕಿದೊಂದು ಸಾಯಮೆ ತೋರ್ದುದೈಸೆ” ಎನುತೆ ಬುದ್ಧಿಯೊರೆದಂ.

ನಾರದನೀ ನುಡಿಗೇಳ್ದಱಿವು ಪುಟ್ಟಿ, ಒಡೆಯನಡಿಗೆ ತಲೆವಾಗುತಿಂತೆಂದಂ:—“ದೇವ! ಅಪರಾಧಿ ತಾಂ ನಿಶ್ಚಯಂ. ಮತಿಹೀನನಾಗಿ ತಾನಂತು ಗೆಯ್ದೊಡಂ ಮನ್ನಿಸಿ ಕಾವುದು: ‘ತಿರೆಯೊಳ್ ಕಾಲ್ಗೆಡೆಬಿೞ್ದೊಡಂ ತಿರೆಯನೆ ಆಧಾರಮಂ ಗೆಯ್ವವೋಲ್’ ನಿನ್ನೊಳಾನನ್ನೆಯಂ ಗೆಯ್ದೊಡಂ ನೀನೇ ಪೊರೆವುದು ಮತ್ತಂ ತುಂಬುರಕೌಶಿಕರೊಲ್ ಪಾಡುಂಗಾಱಿಕೆಯೊಳಾಂ ಪ್ರತಿಷ್ಠೆ ತನಪ್ಪಂತೆ ಬಟ್ಟೆದೋಱಿಸೈ” ಎನುತೆ ದೈನ್ಯವಂಬಿಡಿದು ಬೇಡುವ ಮುನಿಗೆ ಮತ್ತೆ ಪೇೞ್ದಂ :—“ಅಂತು ಮನಮಿರ್ದೊಡೆ ತೋಱಿಪೆಂ. ಉತ್ತರದೆಸೆಗೆ ಮಾನಸಮೆಂಬೊಂದು ಸರಸಿಯುಂಟು.

ಆದರ್ಕೆಯುಂ ಮುಂತೆ ಬಡಗಣ್ಗೆ ಇರ್ಪ ಶೈಲದೊಳ್ ಗಾನಬಂಧುವೆಂಬೊರ್ವನುಲೂಕ ರಾಜನಿರ್ಪಂ. ಅವಂಗೆ ನೀಂ ಶಿಷ್ಯನಾದೊಡೆ ನೀಂ ತುಂಬುರನಂತೆ ಗಾನವಿದ್ಯಾಪಾರಂಗತನಂ ಪ್ರತಿಷ್ಠಿತನುಮಪ್ಪೆಯ್, ಪೋಗು" ಎಂಬುದುಂ ಮನೋವೇಗದಿನಾಯೆಡೆಗೆ ತೆರಳ್ದಂ.

## ಟಿಪ್ಪಣಿ

**ಕರ್ತೃ ಮತ್ತು ಕೃತಿ :**

ಮುದ್ದಣ ಎಂಬುದು ಕವಿಯ ಕಾವ್ಯನಾಮ. ಆತನ ನಿಜವಾದ ಹೆಸರು ಲಕ್ಷ್ಮೀ ನಾರಾಯಣಪ್ಪ. ಉಡುಪಿಯ ಬಳಿಯಿರುವ ನಂದಳಿಕೆ ಎಂಬ ಚಿಕ್ಕದೊಂದು ಹಳ್ಳಿಯಲ್ಲಿ ಈತನು ಕ್ರಿ.ಶ. ೧೮೭೦ ರಲ್ಲಿ ಜನಿಸಿದನು. ಬಡ ಕುಟುಂಬದಲ್ಲಿ ಹುಟ್ಟಿ ಬೆಳೆದ ಆತನು ಹೆಚ್ಚು ವಿದ್ಯಾಭ್ಯಾಸವನ್ನೇನೂ ಮಾಡಲಿಲ್ಲ. ಕನ್ನಡ ಟ್ರೈನಿಂಗ್ ಸ್ಕೂಲಿನಲ್ಲಿ ಓದಿ, ಮದರಾಸಿನಲ್ಲಿ ಅಂಗಸಾಧನೆಯ ಶಿಕ್ಷಣವನ್ನು ಪಡೆದು ಉಡುಪಿಯ ಹೈಸ್ಕೂಲಿನಲ್ಲಿ ಕಸರತ್ತು ಕಲಿಸುವ ಉಪಾಧ್ಯಾಯನಾದನು. ಈತನು 'ರತ್ನಾವತೀಕಲ್ಯಾಣ' 'ಕುಮಾರವಿಜಯ' ಎಂಬ ಎರಡು ಯಕ್ಷಗಾನಗಳನ್ನೂ, 'ಅದ್ಭುತರಾಮಾಯಣ' 'ರಾಮ ಪಟ್ಟಾಭಿಷೇಕ' 'ರಾಮಾಶ್ವಮೇಧ' ಎಂಬ ಮೂರು ಹಳಗನ್ನಡದ ಕಾವ್ಯಗಳನ್ನೂ ಬರೆದನು. ಇವುಗಳಲ್ಲಿ 'ರಾಮ ಪಟ್ಟಾಭಿಷೇಕವು' ವಾರ್ಧಕ ಷಟ್ಪದಿಯಲ್ಲಿದೆ. ಉಳಿದೆರಡು ಹಳಗನ್ನಡ ಗದ್ಯರೂಪದಲ್ಲಿವೆ. ಕವಿಯು ತನ್ನ ಹೆಸರನ್ನು ತನ್ನ ಕಾವ್ಯಗಳಲ್ಲಿ ಎಲ್ಲಿಯೂ ಹೇಳಿಕೊಳ್ಳದೆ ಇವು ಅನ್ಯಕೃತಿಗಳೆಂದು ವ್ಯವಹರಿಸಿದ್ದಾನೆ. ಈತನ ಈ ಕಾವ್ಯಗಳಲ್ಲಿ ಅಗ್ರಗಣ್ಯವಾದುದು 'ರಾಮಾಶ್ವಮೇಧ.'

ಈ ಪಠ್ಯಭಾಗವನ್ನು ಅವರ 'ಅದ್ಭುತರಾಮಾಯಣ'ದಿಂದ ಆರಿಸಿಕೊಳ್ಳಲಾಗಿದೆ. ತ್ರೇತಾಯುಗದಲ್ಲಿ ಕೌಶಿಕನೆಂಬ ಗಾನವಿದ್ಯಾವಿಶಾರದನಿದ್ದನು. ಅವನು ಹರಿನಾಮ ಸ್ಮರಣೆ ಮಾಡುತ್ತಾ ತೀರ್ಥಯಾತ್ರೆ ಮಾಡುತ್ತಿದ್ದನು. ಅವನ ಗಾನವಿದ್ಯೆಗೆ ಮನಸೋತು ಅನೇಕರು ಅವನ ಶಿಷ್ಯರಾದರು. ಆತನ ಕೀರ್ತಿಯು ನಾಲ್ದೆಸೆಗಳಿಗೂ ಹಬ್ಬಿ, ಕಳಿಂಗದೇಶದ ರಾಜನನ್ನು ಮುಟ್ಟಿತು. ಆ ರಾಜನು ತನ್ನನ್ನು ಹೊಗಳಿ ಹಾಡುವಂತೆ ಪೀಡಿಸಿದನು. ಹರಿಯನ್ನು ಹಾಡುವ ನಾಲಗೆ ಮತ್ತೊಂದನ್ನು ಹಾಡಲಾರದೆಂದು ಅವನೂ, ಅವನ ಶಿಷ್ಯರೂ ತಮ್ಮ ತುದಿ ನಾಲಿಗೆಗಳನ್ನು ಕತ್ತರಿಸಿಕೊಂಡರು. ಕುಪಿತನಾದ ರಾಜನು ಕೌಶಿಕನನ್ನೂ, ಅವನ ಶಿಷ್ಯರನ್ನೂ ತನ್ನ ನಾಡಿನಿಂದ ಓಡಿಸಿದನು. ಅವರು ಉತ್ತರಾಭಿಮುಖರಾಗಿ ಹೊರಟು ಕೆಲಕಾಲದ ಮೇಲೆ ದೇಹತ್ಯಾಗ ಮಾಡಿ ವಿಷ್ಣುಲೋಕವನ್ನು ಸೇರಿದರು. ಹರಿಯು ಕೌಶಿಕನಿಗೆ 'ನೀನು ದಿಕ್ಪಾಲನೆಂಬ ಗಣಾಧಿಪನಾಗಿ ನಾನಿರುವಷ್ಟು ಕಾಲವೂ ಸುಖವಾಗಿರು' ಎಂದು ಹೇಳಿ, ಅವನಿಗೆ ಸ್ವಸಾಮೀಪ್ಯ ಪದವಿಯನ್ನು ನೀಡಿದನು. ಉಳಿದವರಿಗೂ ಸಾಲೋಕ್ಯಾದಿ ಉತ್ತಮ ಪದವಿಗಳು ದೊರೆತವು. ಆಗ ವಿಷ್ಣುಸಾನ್ನಿಧ್ಯವನ್ನು ಪಡೆದಿದ್ದ ಕೌಶಿಕನ ಗೌರವಾರ್ಥವಾಗಿ ಅವನ ಶಿಷ್ಯರು ಗಾನ ಮಾಡಿದರು. ಇಲ್ಲಿಂದ ಇಲ್ಲಿನ ಕಥಾಭಾಗ ಪ್ರಾರಂಭವಾಗಿದೆ.

**ಕಠಿಣಪದಗಳ ಅರ್ಥ :**

ಸಮನಂತರ--ಅನಂತರ. ಸಾನಿಧ್ಯಂಬಡೆದ--ಸನ್ನಿಧಿಯನ್ನು ಹೊಂದಿದ. ಉಚ್ಚಿವ-ಉತ್ಸವ (ತ್ಸ), ಉತ್ಸಾಹ. ಅಟ್ರಿ—ಪ್ರೀತಿ. ವಿಪಂಚಿ--ವೀಣೆ. ವಿಶಾರದ—ಪಂಡಿತ. ಸೂಟಿಱಿತು--ಕ್ರಮವರಿತು. ಮೆಲ್ಪುವಡೆದ--ಇಂಪಾದ. ತನಿ--ಸಾರವತ್ತಾದ. ಸೊದೆ-ಸುಧಾ(ತ್ಸ), ಅಮೃತ. ಸೋನೆ—ಮಳೆ; ಜಡಿಮಳೆ. ಇನಿದು ಕಱಿಯೆ--ಇಂಪನ್ನು ಉಂಟುಮಾಡಲು. ಒಳ್ಪು—ಇಂಪು.

ಅಗಣಿತ—ಲೆಕ್ಕವಿಲ್ಲದಷ್ಟು. ಚೇಟಿ—ದಾಸಿ. ಕಂಬಿ—ಕೋಲು ; ಆಜ್ಞಾದಂಡ. ಸಿರಿ—ಶ್ರೀ (ತ್ಸ) ಲಕ್ಷ್ಮಿ. ಪಡಿಯಱಿತಿಯರು--ಬಾಗಿಲು ಕಾಯುವವರು. ಸಿರಿಯರಸ—ಲಕ್ಷ್ಮೀಪತಿ, ನಾರಾಯಣ. ಒದವಿದರ್--ಬಂದು ಸೇರಿದರು.

ಬಿನದ—ವಿನೋದ (ತ್ಸ). ಅಲರಿಚ--ಬ್ರಹ್ಮ (ತದ್ಧಿತ). ಮುಗಿಲ್ದೇರಂ—ಮುಗಿಲನ್ನೇ ತೇರನ್ನಾಗಿ ಉಳ್ಳವನು, ಇಂದ್ರ. ಬಿಡುಗಣ್ಣರು--ದೇವತೆಗಳು, (ದೇವತೆಗಳು ಕಣ್ಣನ್ನು ಮಿಟುಕಿಸುವುದಿಲ್ಲ.) ರಿಸಿ—ಋಷಿ (ತ್ಸ). ಸಾರ್ತಂದು—ಹತ್ತಿರಕ್ಕೆ ಬಂದು. ಪುಗೆ—ಪ್ರವೇಶಿಸಲು. ಪಿಂದಟ್ಟೆ- ಹಿಂದಕ್ಕೆ ಓಡಿಸಲು. ನಾಲ್ಮೊಗನಣುಗಂ—ಬ್ರಹ್ಮನ ಮಗ ನಾರದ. ನುರ್ಗು--ನುಗ್ಗು. ಮೊಗ—ಮುಖ (ತ್ಸ). ಕಿಱಿದುಗೆಯ್ ಚಿಕ್ಕದಾಗಿ ಮಾಡು. ಪಿಂಜರಿ—ಹಿಂದಕ್ಕೆ ಸರಿ, ಹಿಂಜರಿ. ಬೊಮ್ಮ—ಬ್ರಹ್ಮ (ತ್ಸ). ಸಾಜ—ಸಹಜ (ತ್ಸ). ಆಣ್ಮ—ಒಡೆಯ. ಆವನಿತರವರ್-ನಾವು ಎಷ್ಟರವರು. ಸಂತಯಿಸು--ಸಮಾಧಾನಪಡಿಸು. ಸೊರ್ಕು—ಸೊಕ್ಕು ; ಅಹಂಕಾರ. ಉಡುಗು—ನಾಶವಾಗು. ಅನಿತಱೊಳ್—ಅಷ್ಟರಲ್ಲಿ. ಪೊಱಿದೆಸೆ—ಹೊರಭಾಗ. ಮಾನಪೂರ್ವಕ—ಗೌರವಪೂರ್ವಕ. ಒಱಿಯೊಳ್—ಸಮೀಪದಲ್ಲಿ. ಪಾರಿತೋಷಕ—ಬಹುಮಾನ. ಸಗ್ಗಿಗರು—ದೇವತೆಗಳು. ಪಿರಿಯ—ಹಿರಿಯ. ಅಗ್ಗಿಮೊಗರು--ದೇವತೆಗಳು, ಅಗ್ನಿಮುಖರು. ಎಡೆ—ಸ್ಥಳ. ಅಂಚೆದೇರ—ಅಂಚೆಯನ್ನು ತೇರನ್ನಾಗಿ ಉಳ್ಳವನು ಯಾವನೋ ಅವನು, ಬ್ರಹ್ಮ (ಬ. ವ್ರೀ. ಸ.) ಅಂಚೆ ಹಂಸ (ತ್ಸ). ಅಣುಗ—ಮಗ. ಮನ್ನಿಸು—ಗೌರವಿಸು. ಇನಿಸುಂಬೊತ್ತು ಸ್ವಲ್ಪ ಹೊತ್ತು. ಇನಿಸು—ಇಷ್ಟು. ಜಾಸಿಸು—ಧ್ಯಾನಿಸು, ಯೋಚಿಸು. ಬೇಗುದಿಗುದಿದು-ನೀರುಕುದಿಯುವಂತೆ ಕುದಿದು ; ಅತಿಯಾದ ಕೋಪವನ್ನು ಹೊಂದಿ. ಬಾಟ್ಕೆ—ಬಾಳು ; ಜೀವನ. ಸಮ್ಮಾನ—ಸನ್ಮಾನ (ತ್ಸ) ಗೌರವ. ದುಮ್ಮಾನ ವ್ಯಥೆ. ನಾಣಿಲಿ— ನಾಣ್ ಆವಂಗೆ ಇಲ್ಲಂ ಅವಂ ನಾಣ್ಗೆಲಿ (ಬ. ವ್ರೀ. ಸ.) ನಾಚಿಕೆ ಇಲ್ಲದವನು. ಮೆಯ್ಯಿರ್ದು—ಜೀವವಿದ್ದು ; ದೇಹವಿದ್ದು. ಪಿಂಮೆಯ್ಯೊಳ್—ಹಿಂದಿನ ಜನ್ಮದಲ್ಲಿ. ನೋಂತನೋ—ವ್ರತಮಾಡಿದನೋ, ಪುಣ್ಯಮಾಡಿದನೋ. ಬಲ್ವಗೆ—ಬಲ್ + ಬಗೆ—ಹಲವು ವಿಧ. ಪಂಬಲಿಸು— ಹಂಬಲಿಸು. ಅಣತಿ-ಅಪ್ಪಣೆ. ರಕ್ಕಸಿಗೆ ಪುಟ್ಟುಗೆ—ರಾಕ್ಷಸಿಯ ಮಗಳಾಗಿ ಹುಟ್ಟಲಿ. ಲೋಗರೇಟಿಪಂತೆ—ಜನರು ತಿರಸ್ಕರಿಸುವಂತೆ, ಜನರು ನಿಂದಿಸುವಂತೆ. ಅಬ್ಬೆ—ತಾಯಿ. ಪೆಱಗಟ್ಟುಗೆ—ದೂರಕ್ಕೆ ಓಡಿಸಲಿ.

(ಪೞಗೆ—ಹಿಂದಕ್ಕೆ). ಅಚ್ಚರಿ—ಆಶ್ಚರ್ಯ (ತ್ಭ). ಅಚ್ಚರರ್—ಅಪ್ಸರರು. ಅೞಲಿದರ್—ದುಃಖಿಸಿದರು. ಮುಪ್ಪೊೞಲ್—ಮೂರು+ಪೊೞಲ್ (ಸ್ವರ್ಗ, ಮರ್ತ್ಯ, ಪಾತಾಳ) (ದ್ವಿ.ಸ,) ಮೂರು ಲೋಕಗಳು. ಮಾಲಕುಮಿ–ಮಹಾಲಕ್ಷ್ಮಿ (ತ್ಭ) ಕಜ್ಜ–ಕಾರ್ಯ (ತ್ಭ). ತೊದಳಾಗದು–ಸುಳ್ಳಾಗುವುದಿಲ್ಲ. ಬೇೞ್ಪೆಂ—ಬೇಡುವೆನು. ಪಡಿಯಾಗಿ—ಪ್ರತಿಯಾಗಿ, ಪ್ರತಿ (ತ್ಭ). ತವಸಿ—ತಪಸ್ವಿ; ಸಂನ್ಯಾಸಿ. ನೆತ್ತರು–ರಕ್ತ. ಮಱೆಗೊಳ್ವೆಂ–ಕಾಣಿಸದಂತಿರುತ್ತೇನೆ. ಕೋೞ್ಮೃಗ–ಕೋಡಿರುವ ದುಷ್ಟಮೃಗ. ದಾರುಣ—ಕಠಿಣ. ಹೃಷೀಕೇಶ—ನಾರಾಯಣ. ತಿರ್ದು—ತಿದ್ದು. ಪೊರ್ದುಗೆ—ಹೊಂದಿಕೆ. ಮುನಿಪುಂಗವ—ಮುನಿಶ್ರೇಷ್ಠ. ಕನಲ್—ಕೋಪಗೊಳ್ಳು. ನೀಡುಂ–ವಿಶೇಷವಾಗಿ. ಚಾಗ–ತ್ಯಾಗ (ತ್ಭ). ಬಿಜ್ಜೆ–ವಿದ್ಯಾ (ತ್ಭ). ತುಂಬುರನತ್ತಣಿಂ–ತುಂಬುರನಿಗಿಂತ. ಅತ್ತಣಿಂ—ದೆಸೆಯಿಂದ. ಪೆರ್ಮೆ—ಹಿರಿಮೆ. ತೀರ್ಥಾಟನ—ತೀರ್ಥಯಾತ್ರೆ. ನಿದರ್ಶನ—ಉದಾಹರಣೆ. ಪರಿಭಾವಿಸು—ಆಳವಾಗಿ ಆಲೋಚಿಸು. ಸಾಯಮೆ—ಸಹಾಯವೇ. ತಿರೆ—ಭೂಮಿ. ಕಾಲ್ಗೆಡೆಬಿೞ್ದೊಡಂ—ಕಾಲುತಪ್ಪಿಬಿದ್ದರೂ, ಕಾಲುಜಾರಿಬಿದ್ದರೂ. ಅನ್ನೆಯ—ಅನ್ಯಾಯ (ತ್ಭ). ಪಾಡುಂಗಾಱಿಕೆ—ಹಾಡುಗಾರಿಕೆ. ಪ್ರತಿಷ್ಠಿತ—ಗೌರವಾನ್ವಿತ. ಬಟ್ಟೆ—ದಾರಿ. ಸರಸಿ—ಸರೋವರ. ಬಡಗಣ್ಗೆ—ಉತ್ತರಕ್ಕೆ. ಶೈಲ ಪರ್ವತ. ಉಲೂಕ—ಗೂಬೆ.

ಪ್ರಶ್ನೆಗಳು :

೧. ಪಡಿಯಱತಿಯರು ನಾರದನನ್ನು ಏಕೆ ನೂಕಿದರು ?
೨. ಮುಖವನ್ನು ಕಿೞಿದುಗೈದ ದೇವತೆಗಳನ್ನು ಬ್ರಹ್ಮನು ಹೇಗೆ ಸಂತೈಸಿದನು ?
೩. ಪಡಿಯಱತಿಯರಿಂದ ಅಪಮಾನಿತನಾದ ನಾರದನು ತನ್ನಲ್ಲಿ ತಾನೇ ಏನು ಹೇಳಿಕೊಂಡನು ? ಮತ್ತು ಏನೆಂದು ಶಾಪಕೊಟ್ಟನು ?
೪. ನಾರದನ ಶಾಪಕ್ಕೆ ಲಕ್ಷ್ಮೀನಾರಾಯಣರ ಪ್ರತಿಕ್ರಿಯೆ ಏನು ?
೫. ನಾರದಮುನಿಯ ಶಾಪವನ್ನು ಸ್ವೀಕರಿಸಿದ ಲಕ್ಷ್ಮಿಯು ಏನೆಂದು ಬೇಡಿದಳು ?
೬. ನಾರಾಯಣನು ನಾರದನಿಗೆ ಏನೆಂದು ಬುದ್ಧಿ ಹೇಳಿದನು ?
೭. ನಾರಾಯಣನ ಮಾತಿನಿಂದ ಅಱಿವು ಉಂಟಾದ ನಾರದನು ನಾರಾಯಣನಲ್ಲಿ ಏನೆಂದು ಪ್ರಾರ್ಥಿಸಿದನು ?
೮. ನಾರದನು ಗಾನವಿಶಾರದನಾಗಲು ನಾರಾಯಣನು ಇತ್ತ ಸಲಹೆ ಏನು ?
೯. ಈ ಕಥೆಯನ್ನು ಹೊಸಗನ್ನಡದಲ್ಲಿ ಬರೆಯಿರಿ.

ಇವುಗಳನ್ನು ಸಂದರ್ಭದೊಡನೆ ಸ್ಪಷ್ಟೀಕರಿಸಿ :

೧. " ಅಣ್ಮಿನಿದಿರ್ಗೆ ಪೋಗಿ ನಿಲಲಾಮೆನಿತರವರ್ "
೨. " ಈ ನಾಣಿಲಿ ಮೆಯ್ಯಿಕ್ಕಿದುರ್ದಮೇಂ ಫಲಂ "
೩. " ಮುಪ್ಪೊೞಲುಂ ನಡುಗಿದುದು "

೪. " ನೀಡುಮೆಣಸೆ ನೀಂ ತಪ್ಪಿದವಂ ದಿಟಂ "

೫. " ತಿರೆಯೊಳ್ ಕಾಲ್ಗೆಡೆಬಿಟ್ಟೊಡಂ ತಿರೆಯನೇ ಆಧಾರಮಂ ಗೆಯ್ವವೋಲ್ "

ಇವುಗಳಿಗೆ ವಿಗ್ರಹ ಬರೆದು ಸಮಾಸವನ್ನು ತಿಳಿಸಿ : —

ಪೊಜವಾಗಿಲ್ ; ಮುಗಿಲ್ನೀರ ; ನಾಲ್ಮೊಗ ; ಬಿಜುನುಡಿ ; ಮುಪ್ಪೊಟಿಲ್ ; ತಲೆವಾಗು.

ಇವುಗಳನ್ನು ಬಿಡಿಸಿ ಸಂಧಿ ಬರೆಯಿರಿ :

ರತ್ನಾದಿ, ತನ್ನೆಡೆ, ಬಲ್ವಗೆ, ಮುನಿಯೆಡೆ, ತೀರ್ಥಾಟನ.

ಈ ಪಠ್ಯಭಾಗದಲ್ಲಿ ಬಂದಿರುವ ತತ್ಸಮ ಮತ್ತು ತದ್ಭವಗಳನ್ನು ಪಟ್ಟಿ ಮಾಡಿ.

****

# ೧. ಪ್ರಾರ್ಥನೆ

—ಶ್ರೀ

ಕರುಣಾಳು, ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ,
ಕೈ ಹಿಡಿದು ನಡೆಸೆನ್ನನು.

ಇರುಳು ಕತ್ತಲೆಯು ಗವಿ ; ಮನೆ ದೂರ ; ಕನಿಕರಿಸಿ,
ಕೈ ಹಿಡಿದು ನಡೆಸೆನ್ನನು.

ಹೇಳಿ ನನ್ನಡಿಯಿಡಿಸು ; ಬಲುದೂರ ನೋಟವನು
ಕೇಳಿನೊಡನೆಯೆ—ಸಾಕು ನನಗೊಂದು ಹೆಜ್ಜೆ.

ಮುನ್ನ ಇಂತಿರದಾದೆ ; ನಿನ್ನ ಬೇಡದೆ ಹೋದೆ,
ಕೈ ಹಿಡಿದು ನಡೆಸು ಎನುತ.

ನನ್ನ ದಾರಿಯ ನಾನೆ ನೋಡಿ ಹಿಡಿದೆನು;—ಇನ್ನು,
ಕೈ ಹಿಡಿದು ನಡೆಸು ನೀನು.

ಮಿರುಗು ಬಣ್ಣಕೆ ಬೆರೆತು, ಭಯಮರೆತು, ಕೊಬ್ಬಿದೆನು ;
ಮೆರೆದಾಯ್ತು; ನೆನೆಯದಿರು ಹಿಂದಿನದನೆಲ್ಲ.

ಇಷ್ಟುದಿನ ಸಲಹಿರುವೆ ಮೂರ್ಖನನು ; ಮುಂದೆಯೂ
ಕೈಹಿಡಿದು ನಡೆಸದಿಹೆಯಾ ?

ಕಷ್ಟದಡವಿಯ ಕಳೆದು, ಬೆಟ್ಟ ಹೊಳೆಗಳ ಹಾದು,
ಇರುಳನ್ನು ನೂಕದಿಹೆಯಾ ?

ಬೆಳಗಾಗ ಹೊಳೆಯದೇ ಹಿಂದೊಮ್ಮೆ ನಾನೊಲಿದು
ಈ ನಡುವೆ ಕಳೆಕೊಂಡ ದಿವ್ಯಮುಖ ನಗುತ ?

## ಟಿಪ್ಪಣಿ

### ಕವಿ–ಕವಿಕಾವ್ಯ ಪರಿಚಯ :—

ಈ ಪದ್ಯವನ್ನು "ಶ್ರೀ" ಅವರ "ಇಂಗ್ಲಿಷ್ ಗೀತಗಳು" ಎಂಬ ಕವನಸಂಕಲನದಿಂದ ಆರಿಸಿಕೊಳ್ಳಲಾಗಿದೆ. ಇದು ನ್ಯೂಮನ್ ಕವಿಯ "ಲೀಡ್ ಕೈಂಡ್ಲಿ ಲೈಟ್" ಎಂಬ ಇಂಗ್ಲಿಷ್ ಕವಿತೆಯ ಅನುವಾದ.

ಹೊಸಗನ್ನಡ ಸಾಹಿತ್ಯದ ಪ್ರವರ್ತಕರು ಬಿ. ಎಂ. ಶ್ರೀಕಂಠಯ್ಯನವರು, ಕನ್ನಡದ ಕಣ್ವರೆಂದೇ ಅವರು ಪ್ರಸಿದ್ಧಿ. "ಶ್ರೀ" ಎಂಬುದು ಇವರ ಕಾವ್ಯನಾಮ. ಇವರು ಹುಟ್ಟಿದ್ದು ೧೮೮೪ ರಲ್ಲಿ. ಇವರು ಇಂಗ್ಲಿಷ್ ಸಾಹಿತ್ಯದಲ್ಲಿ ವ್ಯಾಸಂಗಮಾಡಿ ೧೯೦೭ ರಲ್ಲಿ ಎಂ. ಎ. ಪದವಿ ಪಡೆದರು. ಇವರು ಇಂಗ್ಲಿಷ್‌ನ ಪ್ರಾಧ್ಯಾಪಕರಾಗಿದ್ದರೂ ಕನ್ನಡದಲ್ಲಿ ಅಪಾರ ಪ್ರೀತಿ. ಮದರಾಸಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೆ ಕನ್ನಡ ಬೆಳೆಯುವುದು ಎಂದಿಗೆ ? ಹೇಗೆ ? ಎಂದು ಮುಂತಾಗಿ ಚಿಂತಿಸುತ್ತಿದ್ದರಂತೆ. ಅನಂತರ ಅವರು ೧೯೧೧ ರಲ್ಲಿ ಧಾರವಾಡದಲ್ಲಿ ಕೊಟ್ಟ "ಕನ್ನಡ ಮಾತು ತಲೆ ಎತ್ತುವ ಬಗೆ" ಎಂಬ ಉಪನ್ಯಾಸವೇ ಅವರ ಕನ್ನಡ ಪ್ರೇಮವನ್ನು ಸಾರುತ್ತದೆ. ಕನ್ನಡವನ್ನು ಕೇಳುವವರೇ ಇಲ್ಲದ ಆ ಕಾಲದಲ್ಲಿ ನಾಡಿನ ಮೂಲೆ ಮೂಲೆಗಳಲ್ಲಿ ಸಂಚರಿಸಿ ಕನ್ನಡಿಗರಲ್ಲಿ ಜಾಗೃತಿಯನ್ನು ತಂದರು; ಕೆಚ್ಚನ್ನು ಮೂಡಿಸಿದರು. ಮೈಸೂರು ವಿಶ್ವವಿದ್ಯಾ ನಿಲಯದಲ್ಲಿ ಕನ್ನಡದ ಗೌರವ ಪ್ರಾಧ್ಯಾಪಕರೂ ಆಗಿದ್ದರು. ನಿವೃತ್ತರಾದ ಮೇಲೆ ಧಾರವಾಡದ ಕಾಲೇಜೊಂದರ ಪ್ರಿನ್ಸಿಪಾಲರೂ ಆಗಿದ್ದರು. ೧೯೩೮ ರಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಅವರು ೧೯೪೬ ರಲ್ಲಿ ತೀರಿಕೊಂಡರು.

ಕನ್ನಡ ಸಾಹಿತ್ಯದಲ್ಲಿಯೂ ಅವರ ಕೃಷಿ ಗಮನಾರ್ಹವಾದುದಾಗಿದೆ. "ಹೊಂಗನಸು" ಎಂಬ ಸ್ವತಂತ್ರ ಕವನಸಂಕಲನವೊಂದನ್ನು ಪ್ರಕಟಿಸಿದ್ದಾರೆ. ರನ್ನನ ಸಾಹಸಭೀಮವಿಜಯ ಕಾವ್ಯವನ್ನು ಗದಾಯುದ್ಧ ನಾಟಕವಾಗಿ ಪರಿವರ್ತಿಸಿದರು. ಸೊಪೋಕ್ಲಿಸನ "ಎಜಾಕ್ಸ್" ನಾಟಕವನ್ನು ಆಧರಿಸಿ "ಅಶ್ವತ್ಥಾಮನ್" ಎಂಬ ರುದ್ರನಾಟಕವನ್ನು ಬರೆದರು. ಕನ್ನಡಕ್ಕೆ ಈ ರೀತಿಯ ನಾಟಕವನ್ನು ತಂದವರಲ್ಲಿ ಇವರೇ ಮೊದಲಿಗರು. ಈಸ್ಕಿಲಸ್ ಕವಿಯ ಪಾರಸೀಕರು ನಾಟಕವನ್ನು ಕನ್ನಡಕ್ಕೆ ಅನುವಾದಿಸಿದರು. "ಕನ್ನಡ ಬಾವುಟ" ಎಂಬುದು ಅವರ ಸಂಪಾದಿತ ಕೃತಿ. "ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ" ಅವರ ಭಾಷಣಗಳ ಸಂಗ್ರಹ. ಕನ್ನಡ ಸಾಹಿತ್ಯ ಚರಿತ್ರೆಯ ಕೆಲವು ಭಾಗಗಳನ್ನು ಅವರು ಬರೆದಿದ್ದಾರೆ. ಕನ್ನಡಕ್ಕಾಗಿ ಅವಿಶ್ರಾಂತವಾಗಿ ದುಡಿದವರು ಅವರು.

ಪ್ರಕೃತ ಪದ್ಯದಲ್ಲಿ ಕಷ್ಟದಲ್ಲಿ ಸಿಕ್ಕಿದ ಚೇತನವೊಂದು ಭಗವಂತನನ್ನು ಕುರಿತು ಮಾಡಿ ಕೊಂಡ ಪ್ರಾರ್ಥನೆಯೇ ವಸ್ತುವಾಗಿದೆ. ಎಲ್ಲಿಯೋ ಕತ್ತಲ ಕಾಳಗರ್ಭದಲ್ಲಿ ಸಿಲುಕಿದಾಗ ಮತ್ತೆ ಬೆಳಗನ್ನು ನೋಡುತ್ತೇನೆಯೇ, ಮನೆಯನ್ನು ಸೇರುತ್ತೇನೆಯೇ ಎನಿಸಿದಾಗ

ಭಗವಂತನನ್ನು ಅವಲಂಬಿಸುತ್ತದೆ ಅವನ ಮನಸ್ಸು. ಹಿಂದೆ ಕೊಬ್ಬಿ, ಈಗ ಸಂಕಟ ಬಂದಾಗ ವೆಂಕಟರಮಣ ಎನ್ನುತ್ತಿರುವ ತನ್ನನ್ನು ಕ್ಷಮಿಸಬೇಕೆಂದು ದೇವರನ್ನು ಕೇಳಿಕೊಳ್ಳುತ್ತಾನೆ. ಅಷ್ಟೇ ಅಲ್ಲದೆ ದೇವರು ತನ್ನನ್ನು ಕ್ಷಮಿಸಬಲ್ಲನೆಂಬ ಭರವಸೆ ಅವನಿಗಿದೆ. ಇಷ್ಟು ದಿವಸವೂ ಕಾಪಾಡಿದವನು ಮುಂದೆಯೂ ಕಾಪಾಡುತ್ತಾನೆ ಎಂಬ ನಂಬಿಕೆ ಅವನದು. ನೊಂದವರಿಗೆ ಅಭಯ ನೀಡುತ್ತದೆ ಈ ಪದ್ಯ.

ಕಠಿಣ ಪದಗಳ ಅರ್ಥ :

ಮಬ್ಬು—ಕತ್ತಲು ; ಮಿರುಗು—ಹೊಳೆಯುವುದು.

ಪ್ರಶ್ನೆಗಳು :

೧. ದೇವರ ಸಾಮೀಪ್ಯವನ್ನು ಪ್ರಾರ್ಥನೆ ಹೇಗೆ ಕಲ್ಪಿಸುತ್ತದೆ ?
೨. ಕವಿ ಬೆಳಕನ್ನು ಆಹ್ವಾನಿಸುವ ಪರಿಯನ್ನು ತಿಳಿಸಿ.
೩. ಕವಿಯ ಮೊರೆ ಮಡುಗಟ್ಟಿರುವ ಬಗೆಯನ್ನು ವರ್ಣಿಸಿ.

ಇವನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ :

ಕೈ ಹಿಡಿದು ನಡೆಸು ; ಮಿರುಗು ಬಣ್ಣ ; ದಿವ್ಯಮುಖ ; ಕಷ್ಟದಡವಿ.

ಛಂದಸ್ಸು:

ಹೊಸಗನ್ನಡ ಕವಿತೆ ಹಲವಾರು ಛಂದೋಲಯಗಳನ್ನು ಒಳಗೊಂಡಿದ್ದು ಹಳೆಯ ಕಾವ್ಯದ ನಿರ್ದಿಷ್ಟ ಛಂದಸ್ಸಿಗಿಂತ ಭಿನ್ನಸ್ವರೂಪದ್ದಾಗಿದೆ. ಇಲ್ಲಿನ ಗಣವಿಭಾಗಗಳು ಇದರ ಲಯವಿನ್ಯಾಸವನ್ನೇ ಅವಲಂಬಿಸಿರುತ್ತವೆ. ಇಲ್ಲಿ ಆದಿಪ್ರಾಸ ಬರುವುದು ಅಪರೂಪ ; ಅಂತ್ಯ ಮತ್ತು ಒಳಪ್ರಾಸಗಳೇ ಅಧಿಕ. ಆದರೆ ಗಣಗಳನ್ನು ವಿಭಜಿಸಿ ನೋಡಿದಾಗ ಹಳೆಯ ಲಯಗಳೇ ಬೇರೆ ಬೇರೆ ವಿಧಾನದಲ್ಲಿ ಬಂದಿರುವುದನ್ನು ಕಾಣುತ್ತೇವೆ. ಇವುಗಳನ್ನೇ ಬಳಸಿ ಕೊಂಡು ಕವಿತೆಗೆ ಹೊಸ ತಿರುವು ಮುರುವನ್ನು ತಂದುಕೊಟ್ಟದ್ದು ಹೊಸ ಛಂದಸ್ಸಿನ ದೊಡ್ಡ ಸಾಧನೆ. ಇದರಿಂದ ಹಿಂದಿನ ಕಾವ್ಯದಲ್ಲಿ ಕಂಡುಬರುತ್ತಿದ್ದ ಏಕತಾನತೆ ತಪ್ಪಿಹೋಗಿ ವೈವಿಧ್ಯ ದೊರಕಿತು. ಅಂತು ಹೊಸಗನ್ನಡ ಛಂದಸ್ಸು ಸಂಕೀರ್ಣಸ್ವರೂಪದ್ದಾಗಿರುವುದು ಒಂದು ಮಹತ್ವದ ವಿಷಯ. ಇದಕ್ಕೆ ಪ್ರಕೃತ ಪದ್ಯವೇ ನಿದರ್ಶನ.

ಈ ಪದ್ಯ ಲಯವಿನ್ಯಾಸ, ಪ್ರಾಸಪದ್ಧತಿ, ಚರಣಸಂಖ್ಯೆ, ಛಂದೋವಿಧಾನ, ಮುಂತಾದುವುಗಳಲ್ಲಿ ಹಳೆಯದಕ್ಕಿಂತ ಬೇರೆಯಾಗಿದೆ. ಆದರೆ ಗಣವಿಭಜನೆ ಮಾಡಿದಾಗ ಪ್ರಸಿದ್ಧವಾಗಿರುವ ಪೂರ್ವಪರಿಚಿತ ಲಯಗಳೇ ಗೋಚರವಾಗುತ್ತವೆ. ಇದರಲ್ಲಿಯೂ ನಿರ್ದಿಷ್ಟವಾಗಿ ಗಣವಿಭಜನೆ ಮಾಡಿ ತೋರಿಸಬಹುದು. ಆದರೆ ಒಂದೇ ರೀತಿಯ ಗಣಕ್ಕೆ

ಬದಲಾಗಿ ವೈವಿಧ್ಯಕ್ಕಾಗಿ ಹಲವು ಗಣಗಳನ್ನು ಇಲ್ಲಿ ತಂದಿರಬಹುದು. ಕವಿ ಇಲ್ಲಿ ಎಲ್ಲ ರೀತಿಯಲ್ಲಿಯೂ ಸ್ವಾತಂತ್ರ್ಯವಹಿಸಿದ್ದಾನೆ, ನಿಜ. ಆದರೆ ಇಲ್ಲಿರುವುದು ಸ್ವಾತಂತ್ರ್ಯವೇ ವಿನಾ ಸ್ವೇಚ್ಛಾಚಾರವಲ್ಲ.

ಈ ಪದ್ಯದಲ್ಲಿ ಮೂರು ಮತ್ತು ನಾಲ್ಕು ಮಾತ್ರೆಗಳ ಗಣಗಳು ಬಂದಿರುವುದನ್ನು ಗುರುತಿಸಬಹುದು. ಯಾವುದಾದರೂ ಒಂದು ಸಾಲಿಗೆ ಪ್ರಸ್ತಾರ ಹಾಕಿ ಇದನ್ನು ತೋರಿಸಬಹುದು.

| | | | | | |
|---|---|---|---|---|---|
| — ∪ | — ∪∪ | — ∪ | — ∪ | — ∪∪ | — ∪ |
| ಮುನ್ನ | ಇಂತಿರ | ದಾದೆ | ನಿನ್ನ | ಬೇಡದೆ | ಹೋದೆ |
| ೩ | ೪ | ೩ | ೩ | ೪ | ೩. |

ಇದರಲ್ಲಿ ಒಟ್ಟು ಆರು ಗಣಗಳಿವೆ : ಮೂರು ಮಾತ್ರೆಯ ನಾಲ್ಕು ಗಣಗಳು, ನಾಲ್ಕು ಮಾತ್ರೆಯ ಎರಡು ಗಣಗಳು. ಇವು ನಮಗೆ ಹಳೆಯ ಕಾವ್ಯಗಳಲ್ಲೇ ಪರಿಚಿತವಾಗಿವೆ. ಇಡೀ ಪದ್ಯದಲ್ಲಿ ಮೂರು ಮತ್ತು ನಾಲ್ಕು ಮಾತ್ರೆಯ ಗಣಗಳು ಬಂದಿವೆ. ಆಧರೆ ವಿನ್ಯಾಸದಲ್ಲಿ ಸಾಮಾನ್ಯವಾಗಿ ಅದಲು ಬದಲಾಗಬಹುದು. ಈ ವೈವಿಧ್ಯಗಳನ್ನು ಎಲ್ಲ ಹೊಸ ಕವಿತೆಗಳಲ್ಲಿಯೂ ಕಾಣಬಹುದು.

****

# ೨. ಮೆಟ್ಟುವ ನೆಲ ಕರ್ನಾಟಕ

—ಕುವೆಂಪು

ಎಲ್ಲಾದರು ಇರು ; ಎಂತಾದರು ಇರು ;
ಎಂದೆಂದಿಗು ನೀ ಕನ್ನಡವಾಗಿರು
ಕನ್ನಡ ಗೋವಿನ ಓ ಮುದ್ದಿನ ಕರು,
ಕನ್ನಡತನವೊಂದಿದ್ದರೆ ನೀನಮ್ಮಗೆ ಕಲ್ಪತರು।

ನೀ ಮೆಟ್ಟುವ ನೆಲ—ಅದೆ ಕರ್ನಾಟಕ ;
ನೀನೇರುವ ಮಲೆ—ಸಹ್ಯಾದ್ರಿ.
ನೀ ಮುಟ್ಟುವ ಮರ—ಶ್ರೀಗಂಧದ ಮರ ;
ನೀ ಕುಡಿಯುವ ನೀರ್—ಕಾವೇರಿ.

ಪಂಪನನೋದುವ ನಿನ್ನಾ ನಾಲಗೆ
ಕನ್ನಡವೇ ಸತ್ಯ,
ಕುಮಾರವ್ಯಾಸನನಾಲಿಪ ಕಿವಿಯದು
ಕನ್ನಡವೇ ನಿತ್ಯ.
ಹರಿಹರರಾಘವರಿಗೆ ಎರಗುವ ಮನ,
ಹಾಳಾಗಿಹ ಹಂಪೆಗೆ ಕೊರಗುವ ಮನ
ಪೆಂಪಿನ ಬನವಾಸಿಗೆ ಕರಗುವ ಮನ ;—

ಕಾಜಾಣಕೆ ಗಿಳಿಕೋಗಿಲೆಯಿಂಪಿಗೆ,
ಮಲ್ಲಿಗೆ ಸಂಪಗೆ ಕೇದಗೆ ಸೊಂಪಿಗೆ,
ಮಾವಿನ ಹೊಂಗೆಯ ತಳಿರಿನ ತಂಪಿಗೆ
ರಸರೋಮಾಂಚನಗೊಳುವಾತನ ಮನ

ಎಲ್ಲಿದ್ದರೆ ಏನ್ ? ಎಂತಿದ್ದರೆ ಏನ್
ಎಂದೆಂದಿಗೂ ತಾನೆ
ಕನ್ನಡವೇ ಸತ್ಯ !
ಕನ್ನಡವೇ ನಿತ್ಯ !
ಅನ್ಯವೆನಲದೆ ಮಿಥ್ಯಾ !

## ಟಿಪ್ಪಣಿ

**ಕವಿ-ಕಾವ್ಯ ಪರಿಚಯ :**

ಈ ಕವನವನ್ನು ಕುವೆಂಪು ಅವರ "ಕನ್ನಡ ಡಿಂಡಿಮ" ದಿಂದ ಆರಿಸಿಕೊಳ್ಳಲಾಗಿದೆ. ಪ್ರಕೃತ ಪದ್ಯದಲ್ಲಿ ಕವಿಗಳ ಕನ್ನಡಪ್ರೇಮ ಪ್ರಕಟವಾಗಿದೆ. ತನ್ನ ಭಾಷೆಯನ್ನು ಪ್ರೀತಿಸದವ ತನ್ನ ದೇಶವನ್ನೂ ಪ್ರೀತಿಸಲಾರ. ಮೊದಲು ತನ್ನ ತಾಯಿಗೆ ಮನ್ನಣೆ ಸಲ್ಲಬೇಕು, ನಂತರ ಇತರರಿಗೆ. ಆದ್ದರಿಂದ ಕನ್ನಡ ನೆಲ ಮತ್ತು ಭಾಷೆಯನ್ನು ಮರೆಯದಂತೆ ದೀಕ್ಷೆ ತೊಡಬೇಕೆಂಬುದೇ ಇಲ್ಲಿನ ಸಂದೇಶ. ಕನ್ನಡಿಗನಿಗೆ ಕನ್ನಡವೇ ಮುಖ್ಯ, ಅನ್ಯವಲ್ಲ. ವಾಸಿಸುವ ನೆಲ, ಕುಡಿಯುವ ನೀರು, ಆಲಿಸುವ ಗಾನ, ಎಲ್ಲವೂ ರೋಮಾಂಚನ ತರುತ್ತವೆ. ಕನ್ನಡನಾಡಿನಲ್ಲಿರುವವರು ಮಾತ್ರ ಕನ್ನಡಿಗರಲ್ಲ. ಅವರು ಎಲ್ಲಿದ್ದರೂ ತಮ್ಮ ಚಿಂತನೆಯಿಂದ ಕನ್ನಡಿಗರಾಗಬಲ್ಲರೆಂಬುದು ಕವಿಯ ಹೇಳಿಕೆ. ಎಲ್ಲಿದ್ದರೂ, ಎಂತಿದ್ದರೂ ಕನ್ನಡವಾಗಿದ್ದರೆ ಸಾಕು ಎಂಬುದು ಕವಿಯ ಮೊರೆ.

**ಕಠಿಣಪದಗಳ ಅರ್ಥ :**

ಕಲ್ಪತರು–ಕಲ್ಪವೃಕ್ಷ ; ಕೇಳಿದ್ದನ್ನು ಕೊಡುವ ಮರ. ಮಲೆ—ಪರ್ವತ. ಆಲಿಪ—ಕೇಳುವ. ಎರಗು – ನಮಸ್ಕರಿಸು. ಪೆಂಪು—ಹಿರಿಮೆ, ವೈಭವ. ತಳಿರು—ಚಿಗುರು. ಅನ್ಯ—ಬೇರೆ. ಮಿಥ್ಯಾ—ಸುಳ್ಳು.

**ಪ್ರಶ್ನೆಗಳು :**

೧. ಕವಿಯ ಕನ್ನಡಪ್ರೇಮ ಈ ಪದ್ಯದಲ್ಲಿ ಹೇಗೆ ವ್ಯಕ್ತವಾಗಿದೆ ?
೨. ಕವಿ ಕೊಡುವ ಕರ್ನಾಟಕದ ಚಿತ್ರವನ್ನು ಕುರಿತು ಬರೆಯಿರಿ.

**ಇವುಗಳ ಭಾವವನ್ನು ಸ್ಪಷ್ಟಪಡಿಸಿ :**

೧. 'ನೀನಮ್ಮಗೆ ಕಲ್ಪತರು'
೨. 'ನೀ ಕುಡಿಯುವ ನೀರ್—ಕಾವೇರಿ'
೩. 'ಕನ್ನಡವೇ ನಿತ್ಯ'
೪. 'ಕನ್ನಡ ಗೋವಿನ ಮುದ್ದಿನ ಕರು.'

**ಇವನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ :**

ಕಲ್ಪತರು ; ರೋಮಾಂಚನ ; ಮಿಥ್ಯಾ.

****

# ೩. ಎರಡು ವರ

—ಗೋವಿಂದ ಪೈ

ಕೈಕಯಿಗೆ ಮಾತ್ರ ದಶರಥನಿತ್ತನಲ್ಲ
ವರವೆರಡನಂತೆಯೆ ಕಣಾ ! ಪ್ರತಿ ವ್ಯಕ್ತಿ
ಗಿಹವು ಹುಟ್ಟೊಡನೆರಡು ಪರಮಾತ್ಮಶಕ್ತಿ
ಯಿಂದವಂ ಗಳಿಸದಿರೆ ಅನ್ಯಥಾ ಹೊಲ್ಲ

ಸ್ವಾರ್ಥವನೊ ವರಕೆ ಪರಮಾರ್ಥವನೊ ಕುರಿವೆ ?
ರಾಮನಿಗೆ ಕಾಡು, ತನ್ನಣುಗನಿಗೆ ನಾಡು
ಎಂದೆರೆಯಲೆಬ್ಬಿಸಿದೆ ಕಡಜಗಳ ಗೂಡು !
ಪರಮಾರ್ಥದಲಿ ಸಲಿಸೆ ತೆತ್ತು ಪಡೆದಿರುವೆ.

ಪರಮವೆನೆ ಮೋಕ್ಷವೆಂದಿತ್ತೊಂದು ಹೊತ್ತು
ಮಾತೃಭೂ ಮಾತೃಧರ್ಮವೆ ಇಂದು ಪರಮಂ !
ದೇಶವನು ಧರ್ಮವನು ಕಾಯೆರಡು ವರಮಂ
ಬಳಸು, ಇನ್ನಾಗದಂತವು ಪರರ ಸೊತ್ತು !

ಏಳು ! ಖಂಡಿಸಲಖಂಡ ದೇಶಧರ್ಮಗಳಾ
ಹುಟ್ಟುಹಗೆಗಳನಳಿಯೆ ಅಳಿದುಳಿದು ನೆಗಳಾ.

## ಟಿಪ್ಪಣಿ

**ಕವಿ-ಕಾವ್ಯ ಪರಿಚಯ :**

ಈ ಪದ್ಯವನ್ನು ಗೋವಿಂದ ಪೈ ಅವರ 'ಹೃದಯರಂಗದಿಂದ' ಆರಿಸಲಾಗಿದೆ. ಗೋವಿಂದಪೈ ಅವರು ೧೮೮೩ ರಲ್ಲಿ ಜನಿಸಿದರು. ಇವರು ಸಂಶೋಧಕರಾಗಿದ್ದಂತೆ ಕವಿಗಳೂ ಆಗಿದ್ದರು. ಇವರಲ್ಲಿ ಪಾಂಡಿತ್ಯ ಮತ್ತು ಕವಿತ್ವ ಎರಡೂ ಸಮಾನವಾಗಿ ಸೇರಿಕೊಂಡಿದ್ದುವು.

ಮದರಾಸು ಸರ್ಕಾರ ಇವರಿಗೆ 'ರಾಷ್ಟ್ರಕವಿ' ಎಂಬ ಬಿರುದು ಕೊಟ್ಟು ಗೌರವಿಸಿತು. ಕನ್ನಡ ಸಾಹಿತ್ಯದ ನವೋದಯದ ಹರಿಕಾರರಲ್ಲಿ ರಾಷ್ಟ್ರಕವಿ ಎಂ. ಗೋವಿಂದ ಪೈ ಅವರೂ ಒಬ್ಬರು. ಸಂಶೋಧನೆ, ಕವಿತೆ, ನಾಟಕ — ಈ ಮೂರು ಪ್ರಕಾರಗಳಲ್ಲಿಯೂ ಕೃತಿ ರಚನೆಮಾಡಿದ್ದಾರೆ. 'ಗಿಳಿವಿಂಡು, ಗೊಲ್ಗೊಥಾ, ವೈಶಾಖಿ, ಹೆಬ್ಬೆರಳು, ಮೂರು ಉಪನ್ಯಾಸಗಳು, ಶ್ರೀಕೃಷ್ಣಚರಿತ್ರ, ಚಿತ್ರಭಾನು ಅಥವಾ ೧೯೪೨'—ಮೊದಲಾದವು ಅವರ ಗ್ರಂಥಗಳು. ಅವರು ದಿವಂಗತರಾದ ಮೇಲೆ ಪ್ರಕಟವಾಗದೆ ಉಳಿದಿದ್ದ ಕವನಗಳನ್ನು ಸೇರಿಸಿ, ಇತ್ತೀಚೆಗೆ 'ಹೃದಯರಂಗ, ನಂದಾದೀಪ' ಎಂಬ ಎರಡು ಸಂಗ್ರಹಗಳನ್ನು ಹೊರತರಲಾಗಿದೆ.

ನಮಗೆ ಹುಟ್ಟಿನೊಡನೆಯೇ ದೊರಕುವ ಎರಡು ವರಗಳೆಂದರೆ ದೇಶ ಮತ್ತು ಧರ್ಮ. ದಶರಥ ಕೈಕೆಗೆ ವರಗಳೆರಡನ್ನು ಕೊಟ್ಟಂತೆ ನಮಗಿವು ಪ್ರಕೃತಿದತ್ತವಾಗಿ ದೊರಕಿವೆ. ಆದರೆ ಕೈಕೆಯ ಹಾಗೆ ಸ್ವಾರ್ಥಕ್ಕೆ ಬಳಸಿಕೊಂಡರೆ ಆಗುವ ಅನರ್ಥವನ್ನು ಕುರಿತು ಕವಿ ಎಚ್ಚರಿಸಿದ್ದಾರೆ. ಆದ್ದರಿಂದ ಸ್ವಾರ್ಥವನ್ನು ಪರಮಾರ್ಥತೆಗೆ ಎತ್ತಿ ಆತ್ಮಶಕ್ತಿಯ ಮೂಲಕ ದೇಶಧರ್ಮಗಳನ್ನು ಪರರ ಸೊತ್ತಾಗದಂತೆ ಕಾಪಾಡಿಕೊಳ್ಳಬೇಕೆಂದು ಕವಿ ಇಲ್ಲಿ ಕರೆಕೊಟ್ಟಿದ್ದಾರೆ.

**ಕಠಿಣಪದಗಳ ಅರ್ಥ :**

ಅನ್ಯಥಾ—ಬೇರೆ. ಹೊಲ್ಲ—ಕೇಡು. ಪರಮಾರ್ಥ—ಲೌಕಿಕವಲ್ಲದ ; ಮೋಕ್ಷ. ಕುರಿ—ಕೋರು ; ಇಚ್ಛಿಸು. ಕಡಜ—ಕಣಜ. ಅಣುಗ—ಮಗ. ಎರೆ— ಬೇಡು ; ಪ್ರಾರ್ಥನೆಮಾಡು. ತೆತ್ತು—ಕೊಟ್ಟು. ಪರಮ—ಶ್ರೇಷ್ಠ. ಮೋಕ್ಷ — ಹುಟ್ಟುಸಾವುಗಳಿಂದ ಬಿಡುಗಡೆಯಾಗುವ ಸ್ಥಿತಿ. ಅಳಿ—ನಾಶ. ನೆಗಳು—ಪ್ರಸಿದ್ಧಿಪಡೆ. ಕಾಯೆ—ರಕ್ಷಿಸಲಿಕ್ಕೆ.

**ಪ್ರಶ್ನೆಗಳು :**

೧. ಪ್ರತಿವ್ಯಕ್ತಿಗೂ ಹುಟ್ಟಿನೊಡನೆ ಬರುವ ವರಗಳಾವುವು ? ಅವುಗಳನ್ನು ಹೇಗೆ ರಕ್ಷಿಸಿಕೊಳ್ಳಬೇಕು ?

೨. ದೇಶ ಧರ್ಮಗಳ ಬಗ್ಗೆ ಈ ಪದ್ಯ ಏನು ಹೇಳುತ್ತದೆ?

**ಛಂದಸ್ಸು :**

ಹೊಸಗನ್ನಡ ಛಂದೋಪ್ರಕಾರಗಳಲ್ಲಿ 'ಸಾನೆಟ್' ಕೂಡ ಒಂದಾಗಿದೆ. ಇದು ೧೪ ಸಾಲುಗಳುಳ್ಳ ಪದ್ಯ. ಇಟಲಿಯಲ್ಲಿ ಮೊದಲು ಕಾಣಿಸಿಕೊಂಡ ಇದು ೧೬ನೆಯ ಶತಮಾನದಲ್ಲಿ ಇಂಗ್ಲಿಷ್‌ಗೆ ಬಂದು ಅನಂತರ ಇಂಗ್ಲಿಷಿನ ಮೂಲಕ ಕನ್ನಡಕ್ಕೂ ಬಂದಿತು. ಕನ್ನಡದಲ್ಲಿ ಇದನ್ನು ಹಲವು ಕವಿಗಳು ಕೃಷಿಮಾಡಿದ್ದಾರೆ. ಇದನ್ನು 'ಚತುರ್ದಶಪದಿ', 'ಅಷ್ಟ ಷಟ್ಪದಿ', 'ಸುನೀತ' ಮೊದಲಾದ ಹೆಸರುಗಳಲ್ಲಿ ಕರೆದಿದ್ದಾರೆ.

ಸಾನೆಟ್‌ನಲ್ಲಿ ಎರಡು ವಿಧ, ಒಂದರಲ್ಲಿ ಮೊದಲ ೮ ಸಾಲುಗಳು ಒಂದು ರೀತಿಯಲ್ಲಿದ್ದು ಕಡೆಯ ೬ ಸಾಲುಗಳು ಒಂದು ರೀತಿಯಲ್ಲಿರುತ್ತವೆ. ಎಂಟು ಸಾಲುಗಳು ಮುಗಿದನಂತರ ಸ್ವಲ್ಪ ಬಿಡುವು ಬರಬಹುದು. ಮೊದಲ ಎಂಟು ಸಾಲುಗಳು ಎರಡು ಚೌಪದಿಗಳಾಗಿಯೂ, ಕಡೆಯ ಆರು ಸಾಲುಗಳು ಎರಡು ತ್ರಿಪದಿಗಳಾಗಿಯೂ ಕಾಣಿಸಿಕೊಳ್ಳುತ್ತವೆ. ಸಾಮಾನ್ಯವಾಗಿ ಅಂತ್ಯಪ್ರಾಸ ನಿಯತ. ಪ್ರತಿ ಚೌಪದಿಯಲ್ಲೂ ಮೊದಲ ಮತ್ತು ನಾಲ್ಕನೆಯ ಸಾಲುಗಳ ಪ್ರಾಸ ಒಂದಾಗಿದ್ದರೆ, ಮಧ್ಯದ ಎರಡು ಸಾಲುಗಳ ಪ್ರಾಸ ಒಂದಾಗಿರುತ್ತದೆ. ಆದರೆ ಕಡೆಯ ಆರು ಸಾಲುಗಳಲ್ಲಿ ಈ ಪ್ರಾಸವಿನ್ಯಾಸ ಭಿನ್ನವಾಗಿದ್ದು ಮೊದಲ ಮೂರು ಸಾಲುಗಳ ಪ್ರಾಸ ಆಮೇಲಿನ ಮೂರು ಸಾಲುಗಳ ಪ್ರಾಸಕ್ಕೆ ಅನುಕ್ರಮವಾಗಿ ಸಮಾನವಾಗಿರುತ್ತದೆ.

ಇನ್ನೊಂದರ ರೂಪ ಮೊದಲಿನ ರೂಪಕ್ಕಿಂತ ಕೆಲವು ಮಟ್ಟಿಗೆ ಬೇರೆಯಾದದ್ದು. ಇದರಲ್ಲಿ ಮೊದಲ ೧೨ ಸಾಲುಗಳು ಒಂದಾಗಿದ್ದರೆ, ಕಡೆಯ ಎರಡು ಸಾಲುಗಳು ಒಂದಾಗಿರುತ್ತವೆ. ಇದರಲ್ಲಿ ಎಂಟನೇ ಸಾಲಿನ ನಂತರ ಯಾವುದೇ ಬಿಡುವು ಬರುವುದಿಲ್ಲ. ಬಿಡುವಿಲ್ಲದ ಓಟ ಇದರ ಲಕ್ಷಣ. ಮೊದಲ ಹನ್ನೆರಡು ಸಾಲುಗಳಲ್ಲಿ ಮೂರು ಚೌಪದಿಗಳಿದ್ದು, ಕಡೆಯಲ್ಲಿ ಒಂದು ದ್ವಿಪದಿಯಾಗಿರುತ್ತದೆ. ಮೊದಲ ಚೌಪದಿಗಳು ಸಾಲು ಬಿಟ್ಟು ಸಾಲು ಪ್ರಾಸವನ್ನು ಹೊಂದಿರುತ್ತವೆ. ಕಡೆಯ ದ್ವಿಪದಿ ಒಂದೇ ಪ್ರಾಸದಲ್ಲಿ ಮುಕ್ತಾಯವಾಗುತ್ತದೆ.

ಪ್ರಾಸವಿನ್ಯಾಸದಲ್ಲಿ ಅನೇಕ ವ್ಯತ್ಯಾಸವನ್ನು ಮಾಡಿಕೊಂಡಿರುವ ನಿದರ್ಶನಗಳೂ ಇವೆ. ಕೆಲವರು ಪ್ರಾಸವನ್ನು ಬಿಟ್ಟೂ ಸಾನೆಟ್‌ನ್ನು ರಚಿಸಿರುವ ಉದಾಹರಣೆಗಳು ಕಂಡುಬಂದಿವೆ.

ಗೋವಿಂದ ಪೈ ಅವರ ಮೇಲಿನ ಪದ್ಯ ಒಂದು ಸಾನೆಟ್, ಇದರಲ್ಲಿ ಮೂರು ಚೌಪದಿಗಳೂ, ಒಂದು ದ್ವಿಪದಿಯೂ ಬಂದಿವೆ. ಪ್ರಾಸವಿನ್ಯಾಸದಲ್ಲಿ ನಮ್ಮ ಕವಿಗಳು ಮಾಡಿಕೊಂಡ ವೈವಿಧ್ಯವನ್ನು ಇದು ತೋರಿಸುತ್ತದೆ.

****

# ೪. ಈ ಸಲದ ಸುಗ್ಗಿ

—ದ. ರಾ. ಬೇಂದ್ರೆ

ಪ್ರತಿವರುಷದ ಹಾಗಲ್ಲವು ಈ ಸಲದೀ ಸುಗ್ಗಿ
ಏನರಳಿದೆ ಗಿಡಮರಬಳ್ಳಿಗಳಿದೆ ಹಿಗ್ಗಿ

ಕೊಳಲ ಗುಬ್ಬಿ ಕರೆಯುತ್ತಿವೆ ತೋಟಕೆ ಬಾ ಹೊರಗೆ
ಬೇವಿನ ಹೂ ನೆರಳಿನಲ್ಲಿ ಸವಿನೋಟದ ನೆರೆಗೆ

ಹೊನ್ನ ಹೂವ ಗೊಂಚಲುಗಳ ಹೊತ್ತಿಹುದಾ ಕಕ್ಕೆ
ಯಾ ರಾಯನ ಬರವ ಕಾದು ನಿಂತಿಹುದೇತಕ್ಕೆ ?

ಎಸಳೆಸಳಿನ ಸಿರಸಲ ಚವುರಿಸುವದು ಮೈಯನ್ನೆ
ಬೀಸಲು ಮೈನವಿರೇರಿದ ನೇರಿಳೆ ನವಕನ್ಯೆ

ತೊಟ್ಟುಚ್ಚುತ ತೊಟ್ಟಿಡುತಿದೆ ಮೊಗ್ಗನು ಹೂ ಹಾಸಿ
ಹುಲಗಿಲು ಗಾನನಿಮಗ್ನಧ್ಯಾನದ ಹೊಸ ದಾಸಿ

ಮುಂಗಾರಿಯ ಗುಡುಗಿಗೆ ಸಂಪಿಗೆ ಮುಂಗುಡಿ ಬಿಟ್ಟು
ಪಾರಿಜಾತ ಮೊಗವೆತ್ತಿದೆ ಹಸುರಂಗಿಯ ತೊಟ್ಟು

ಪ್ರತಿವರುಷದ ಹಾಗಲ್ಲವು...

## ಟಿಪ್ಪಣಿ

ಕವಿ–ಕಾವ್ಯ ಪರಿಚಯ :—

ಈ ಕವನವನ್ನು ದ. ರಾ. ಬೇಂದ್ರೆಯವರ 'ಬಾ ಹತ್ತರ' ಸಂಗ್ರಹದಿಂದ ತೆಗದು ಕೊಳ್ಳಲಾಗಿದೆ.

ಡಾ॥ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು ೧೮೯೬ ರಲ್ಲಿ ಧಾರವಾಡದಲ್ಲಿ ಜನಿಸಿದರು. ಇವರ ಕಾವ್ಯನಾಮ 'ಅಂಬಿಕಾತನಯದತ್ತ'. ಸೊಲ್ಲಾಪುರದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಬೇಂದ್ರೆಯವರು ಕೆಲವು ಕಾಲ ಅಖಿಲ ಭಾರತ ಆಕಾಶವಾಣಿಯಲ್ಲಿಯೂ ಇದ್ದರು. ಈಗ ನಿವೃತ್ತರಾಗಿ ಧಾರವಾಡದ ಸಾಧನಕೇರಿಯಲ್ಲಿ ವಿಶ್ರಾಂತಜೀವನ ನಡೆಸುತ್ತಿದ್ದಾರೆ. ಬೇಂದ್ರೆಯವರಿಗೆ ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಿಂದ ಗೌರವ ಡಾಕ್ಟರೇಟ್ ಪ್ರಶಸ್ತಿಗಳೂ, ರಾಷ್ಟ್ರಪತಿಯಿಂದ 'ಪದ್ಮಶ್ರೀ' ಪ್ರಶಸ್ತಿಯೂ ಸಂದಿವೆ. 'ಅರಳು–ಮರಳು' ಎಂಬ ಅವರ ಕವನ ಸಂಕಲನಕ್ಕೆ ಸಾಹಿತ್ಯ ಅಕಾಡೆಮಿಯ ಬಹುಮಾನವೂ ದೊರೆತಿದೆ. ಇದಲ್ಲದೆ ಅವರು ಸಾಹಿತ್ಯ ಅಕಾಡೆಮಿಯ ಗೌರವ ಸದಸ್ಯರೂ ಆಗಿದ್ದಾರೆ. ಶಿವಮೊಗ್ಗೆಯಲ್ಲಿ ನಡೆದ ೩೭ ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆಗಿದ್ದರು.

ಬೇಂದ್ರೆಯವರು ಕವಿಗಳೆಂದೇ ಪ್ರಸಿದ್ಧರು. ಆದರೂ ವಿಮರ್ಶೆ, ನಾಟಕ, ಕಥೆ, ಅನುವಾದ– ಈ ಕ್ಷೇತ್ರಗಳಲ್ಲೂ ಕೆಲಸಮಾಡಿದ್ದಾರೆ. ಗರಿ, ನಾದಲೀಲೆ, ಉಯ್ಯಾಲೆ, ಗಂಗಾವತರಣ, ನಾಕುತಂತಿ, ಸಖೀಗೀತ, ಶ್ರೀಮಾತಾ, ಅರಳು–ಮರಳು, ಬಾ ಹತ್ತರ–ಮೊದಲಾದುವು ಅವರ ಕವನಸಂಕಲನಗಳು. ನಿರಾಭರಣಸುಂದರಿ, ಹುಚ್ಚಾಟ, ಸಾಹಿತ್ಯವಿಮರ್ಶೆ, ವಿಚಾರ ಮಂಜರಿ, ಮುಂತಾದವು ಅವರ ಇತರ ಕೆಲವು ಗ್ರಂಥಗಳು. ಬೇಂದ್ರೆಯವರು ಮರಾಠಿ ಭಾಷೆಯಲ್ಲಿಯೂ ಕೆಲಸ ಮಾಡಿದ್ದು ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

ಪ್ರಸ್ತುತ ಪದ್ಯ ಸುಗ್ಗಿಯ ಕಾಲವೊಂದರ ವಿಶೇಷವನ್ನು ಸಾರುತ್ತದೆ. ಪ್ರತಿವರುಷವೂ ಸುಗ್ಗಿ ವಿಶೇಷವಾಗಿಯೇ ಬರುತ್ತಿರುತ್ತದೆ. ಹಾಗೆಯೇ ನಮಗೆ ಪ್ರತಿಸಾರಿಯೂ ಹಿಂದಿನಂತಲ್ಲದ ವಿಶೇಷ ಅನುಭವವೊಂದು ಆಗುತ್ತಿರುತ್ತದೆ. ಕವಿಗಾದ ಅಂಥ ಯಾವುದೋ ಒಂದು ಅನುಭವ ಇಲ್ಲಿ ವಸ್ತುವಾಗಿದೆ. ಆ ಸುಗ್ಗಿಯ ಕಾಲದ ವರ್ಣನೆ, ಇಲ್ಲಿನ ಚರಣ ಚರಣಗಳಲ್ಲಿಯೂ ನಡದಾಡಿದೆ. ಸುಗ್ಗಿ ವಸಂತಋತುವಿನ ಕಾಲ. ಆಗ ಮರಗಿಡಗಳಲ್ಲಿ ನವೋದಯದ ಕಾಂತಿ, ಹಕ್ಕಿಪಕ್ಕಿಗಳಿಗೆಲ್ಲ ಉತ್ಸಾಹದ ಚಿಲುಮೆ. ಇಂತಹ ದೃಶ್ಯವನ್ನು ಕಂಡ ಕವಿ ತನ್ನ ಅನುಭವವನ್ನು ಅನಂತವಾಗಿಸಿದ್ದಾರೆ ಇಲ್ಲಿ.

**ಕಠಿಣಪದಗಳ ಅರ್ಥ :**

ಕಕ್ಕೆ—ಒಂದು ಜಾತಿಯ ಗಿಡ. ಸಿರಸ—ಶಿರೀಷ ವೃಕ್ಷ. ನಿಮಗ್ನ—ಮುಳುಗಿದ, ತಲ್ಲೀನ.

**ಪ್ರಶ್ನೆಗಳು :**

೧. ಸುಗ್ಗಿಯ ಕಾಲದಲ್ಲಿ ತನಗಾದ ವಿಶೇಷಾನುಭವವನ್ನು ಕವಿ ಹೇಗೆ ವರ್ಣಿಸಿದ್ದಾರೆ ?
೨. ಚೈತ್ರಮಾಸದಲ್ಲಿ ಮರಗಿಡಗಳಿಗೆ ಬಂದ ಸುಗ್ಗಿಯನ್ನು ನಿಮ್ಮ ಮಾತುಗಳಲ್ಲಿ ವರ್ಣಿಸಿ.

ಇವನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ :—

ಹೂಗೊಂಚಲು, ಸವಿನೋಟ, ಮೈನವಿರೇಳು, ಚವರಿಸು.

****

## ೫. ನೆರಳು

—ಪು. ತಿ. ನ.

ಮೇಲೊಂದು ಗರುಡ ಹಾರುತಿಹುದು
ಕೆಳಗದರ ನೆರಳು ಓಡುತಿಹುದು
ಅದಕೊ ಅದರಿಚ್ಛೆ ಹಾದಿ
ಇದಕೊ ಹರಿದತ್ತ ಬೀದಿ

ನೆಲನೆಲದಿ ಮನೆಯ ಮನೆಯ ಮೇಲೆ
ಕೊಳ ಬಾವಿ ಕಂಡು ಕಾಣದೋಲೆ
ಗಿಡ ಗುಲ್ಮ ತೆವರು ತಿಟ್ಟು
ಎನ್ನದಿದಕೊಂದೆ ನಿಟ್ಟು.

ಗಾಳಿ ಬೆರಗಿದರ ನೆಲದೊಳೋಟ !
ವೇಗಕಡ್ಡಬಹುದಾವ ಹೂಟ ?
ಸಿಕ್ಕುದಣಿವಿಲ್ಲದಂತೆ
ನಡೆಯಿದ ನಿಲ್ಲದಂತೆ

ಇದ ನೋಡಿ ನಾನು ನೆನೆವೆನಿಂದು
ಇಂಥ ನೆಳಲೇ ಗಾಂಧಿಯೆಂದು !
ಹರಿದತ್ತ ಹರಿಯು ಚಿತ್ತ
ಈ ಧೀರ ನಡೆವನತ್ತ

### ಟಿಪ್ಪಣಿ

ಕವಿ–ಕಾವ್ಯ ಪರಿಚಯ :

ಈ ಕವನವನ್ನು ಪು. ತಿ. ನರಸಿಂಹಾಚಾರ್ ಅವರ "ಗಣೇಶದರ್ಶನದಿಂದ" ಆಯ್ದುಕೊಳ್ಳಲಾಗಿದೆ.

ಪು. ತಿ. ನರಸಿಂಹಾಚಾರ್ ಅವರು 'ಪುತಿನ' ಸಂಕ್ಷಿಪ್ತನಾಮದಿಂದ ಪರಿಚಿತರಾಗಿದ್ದಾರೆ. ಇವರು ೧೯೦೫ರಲ್ಲಿ ಮೇಲುಕೋಟೆಯಲ್ಲಿ ಜನಿಸಿದರು. ಬೇರೆ ಬೇರೆ ಇಲಾಖೆಗಳಲ್ಲಿ ಕೆಲಸ ಮಾಡಿದ ಇವರು ಈಗ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲೀಷ್—ಕನ್ನಡ ನಿಘಂಟುವಿನ ಪರಿಷ್ಕರಣ ಕಛೇರಿಯಲ್ಲಿ ಸಂಪಾದಕರಾಗಿದ್ದಾರೆ. ಇವರ ಹಂಸದಮಯಂತಿ ಮತ್ತು ಇತರ ರೂಪಕಗಳು ಎಂಬ ಗೀತನಾಟಕಗಳ ಸಂಕಲನಕ್ಕೆ ಸಾಹಿತ್ಯ ಅಕಾಡೆಮಿಯ ಬಹುಮಾನ ದೊರೆತಿದೆ.

ಪು. ತಿ. ನ. ಅವರು ಕವಿಗಳೂ, ಪ್ರಬಂಧಕಾರರೂ, ನಾಟಕಕಾರರೂ, ಮೀಮಾಂಸಕಾರರೂ ಆಗಿದ್ದಾರೆ. ಹಣತೆ, ಮಾಂದಳಿರು, ಶಾರದಯಾಮಿನಿ, ಗಣೇಶದರ್ಶನ, ರಸಸರಸ್ವತಿ, ಮಲೆದೇಗುಲ, ಹೃದಯವಿಹಾರಿ—ಇವು ಅವರ ಕವನಸಂಕಲನಗಳು ; ಅಹಲ್ಯೆ, ಗೋಕುಲನಿರ್ಗಮನ, ವಿಕಟಕವಿವಿಜಯ, ಹಂಸದಮಯಂತಿ, ಸತ್ಯಾಯನ ಹರಿಶ್ಚಂದ್ರ ಮೊದಲಾದುವು ಅವರ ನಾಟಕಗಳು. ರಾಮಾಚಾರಿಯ ನೆನಪು, ರಥಸಪ್ತಮಿ, ಈಚಲುಮರದ ಕೆಳಗೆ, ಮುಂತಾದವು ಅವರ ಪ್ರಬಂಧಗಳು. ಕಾವ್ಯಕುತೂಹಲ. ಎಂಬ ಕಾವ್ಯಮೀಮಾಂಸೆಗೆ ಸಂಬಂಧಪಟ್ಟ ಕೃತಿಯೊಂದನ್ನು ಪ್ರಕಟಿಸಿದ್ದಾರೆ. ಇದಲ್ಲದೆ ಸಂಸ್ಕೃತ, ತಮಿಳು, ಇಂಗ್ಲೀಷಿನಿಂದ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಪ್ರಕೃತ ಪದ್ಯದಲ್ಲಿ ಗಾಂಧೀಜಿಯವರ ವ್ಯಕ್ತಿತ್ವದ ಅದ್ಭುತ ಚಿತ್ರವಿದೆ. ಪರಮಾತ್ಮನ ಪ್ರತಿರೂಪ ಮಹಾತ್ಮ. ಸಮಾನತೆ, ಸಮಚಿತ್ತ ಹಾಗೂ ಸಮದೃಷ್ಟಿ ಅವನದು. ಕೊಳಕು ಬೆಳಕೆನ್ನದೆ, ಕೀಳುಮೇಲೆನ್ನದೆ ಎಲ್ಲರ ಉದ್ಧಾರವನ್ನು ಬಯಸುವ ಅವಧೂತ ಅವನು. ಸೂತ್ರಧಾರಿಯಾದ ಭಗವಂತನ ಪಾತ್ರಧಾರಿ ಈತ. ಈ ಎಲ್ಲ ಗುಣಗಳು ಗಾಂಧೀಜಿ ಯಲ್ಲಿರುವುದನ್ನು ಕವಿ ನೆನೆಯುತ್ತಾರೆ. ಗಾಂಧೀಜಿ ವ್ಯಕ್ತಿ ಮಾತ್ರವಲ್ಲ. ಶಕ್ತಿಯೂ ಹೌದೆಂಬುದನ್ನು ಈ ಪದ್ಯ ತಿಳಿಸುತ್ತದೆ. ಹರಿಯ ಚಿತ್ತ ಹರಿದ ಕಡೆಗೆ ಈ ಮಹಾತ್ಮನ ನಡಿಗೆ. ಪರಮಾತ್ಮ ಮತ್ತು ಮಹಾತ್ಮರ ನಡುವಣ ಸಂಬಂಧವನ್ನು ಗರುಡ ಮತ್ತು ಅವರ ನೆರಳಿನ ಹೋಲಿಕೆ ಸೊಗಸಾಗಿ ಚಿತ್ರಿಸುತ್ತದೆ.

ಕಠಿಣಪದಗಳ ಅರ್ಥ :

ಗುಲ್ಮ—ಪೊದೆ. ತಿಟ್ಟು—ದಿಣ್ಣೆ ; ಗುಡ್ಡ. ನಿಟ್ಟು—ಎತ್ತರ. ಹೂಟ—ಸಂಚು. ಚಿತ್ತ—ಮನಸ್ಸು.

ಪ್ರಶ್ನೆಗಳು :

೧. ಮಹಾತ್ಮಗಾಂಧಿ ವ್ಯಕ್ತಿ ಮಾತ್ರವಲ್ಲ, ಶಕ್ತಿಯೂ ಹೌದು ಎಂಬುದನ್ನು ಈ ಪದ್ಯ ಹೇಗೆ ನಿರೂಪಿಸುತ್ತದೆ ?

೨. ಗಾಂಧೀಜಿ ಭಗವಂತನ ಪ್ರತಿರೂಪ ಎಂಬುದು ವ್ಯಕ್ತವಾಗಿರುವ ಬಗೆ ಹೇಗೆ ?

****

# ೬. ನನ್ನ ದೇಹದ ಬೂದಿ

—ದಿನಕರ ದೇಸಾಯಿ

ನನ್ನ ದೇಹದ ಬೂದಿ—ಗಾಳಿಯಲಿ ತೂರಿಬಿಡಿ,
ಹೋಗಿ ಬೀಳಲಿ ಭತ್ತ ಬೆಳೆಯುವಲ್ಲಿ ;
ಬೂದಿ-ಗೊಬ್ಬರದಿಂದ ತೆನೆಯೊಂದು ನೆಗೆದುಬರೆ,
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ನನ್ನ ದೇಹದ ಬೂದಿ—ಹೊಳೆಯಲ್ಲಿ ಹರಿಯ ಬಿಡಿ
ತೇಲಿ ಬೀಳಲಿ ಮೀನ ಬಾಯಿಯಲ್ಲಿ ;
ಮುಷ್ಟಿ ಬೂದಿಯ ತಿಂದು—ಪುಷ್ಟವಾಗಲು ಮೀನು
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ನನ್ನ ದೇಹದ ಬೂದಿ—ಕೊಳದಲ್ಲಿ ಬೀಗಿ ಬಿಡಿ
ತಾವರೆಯು ದಿನದಿನವೂ ಅರಳುವಲ್ಲಿ ;
ಬೂದಿ ಕೆಸರನು ಕೂಡಿ ಹೊಸ ಪಂಕಜವು ಮೂಡೆ,
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ಸತ್ತಮೇಲಾದರೂ ದೇಹ ಸೇವೆಗೆ ನಿಲಲಿ,
ಇಂದಿಗೀ ನರಜನ್ಮ ಸೇವೆಯೆಂದು
ತನ್ನ ಸ್ವಾರ್ಥವ ನೆನೆದು ವ್ಯರ್ಥವಾಗಿದೆ ದೇಹ,
ನಿಜಸೇವೆ ಗೈಯಲಿಕೆ ಬರಲಿ ಮುಂದು.

## ಟಿಪ್ಪಣಿ

ಕವಿ-ಕಾವ್ಯ ಪರಿಚಯ :

ಈ ಕವಿತೆಯನ್ನು ದಿನಕರ ದೇಸಾಯಿ ಅವರ 'ಕವನಸಂಗ್ರಹ'ದಿಂದ ಆಯ್ದುಕೊಳ್ಳಲಾಗಿದೆ.

ದಿನಕರ ದೇಸಾಯಿ ಅವರು ೧೯೦೯ ರಲ್ಲಿ ಉತ್ತರ ಕನ್ನಡಜಿಲ್ಲೆಯ ಅಂಕೋಲಾದಲ್ಲಿ ಹುಟ್ಟಿದರು. ಇವರು ಉತ್ತರ ಕನ್ನಡಜಿಲ್ಲೆಯಲ್ಲಿ ಕೆಲವು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ಇವರು ಕವಿಗಳಾಗಿರುವಂತೆ, ಸಾಮಾಜಿಕ ಕಾರ್ಯಕರ್ತರೂ ಆಗಿದ್ದಾರೆ. ಕನ್ನಡದಲ್ಲಿ ಚುಟಕಗಳ ಆದ್ಯಪ್ರವರ್ತಕರಾಗಿದ್ದಾರೆ. ಚುಟಕಗಳು ಇವರನ್ನು ಜನಪ್ರಿಯಗೊಳಿಸಿವೆ. ಇಲ್ಲಿಯವರೆಗೆ 'ಕವನ ಸಂಗ್ರಹ', 'ಮಕ್ಕಳ ಗೀತಗಳು' 'ಮಕ್ಕಳ ಪದ್ಯಗಳು' 'ಹೂಗೊಂಚಲು' ಎಂಬ ಕವನಸಂಕಲನಗಳನ್ನು ಪ್ರಕಟಿಸಿದ್ದಾರೆ. ಇಂಗ್ಲೀಷ್‌ನಲ್ಲಿಯೂ ಗ್ರಂಥಗಳನ್ನು ರಚಿಸಿದ್ದಾರೆ.

ಸೇವೆಯಿಲ್ಲದೆ ನರಜನ್ಮ ಸಾರ್ಥಕವಾಗದು ಎಂಬುದನ್ನು ಧ್ವನಿಸುತ್ತದೆ, ಪ್ರಕೃತ ಪದ್ಯ. ಈ ದೇಹ ಸ್ವಾರ್ಥಕ್ಕಾಗಿ ಇರದೆ, ಪರಾರ್ಥಕ್ಕಾಗಿ ಇರಬೇಕು. ಗಂಧದ ಕೊರಡು ತೇದ ಹಾಗೆಲ್ಲ ಸುವಾಸನೆ ಬೀರುವಂತೆ ದೇಹವೂ ವ್ಯರ್ಥವಾಗದೆ, ಅರ್ಥವತ್ತಾಗಬೇಕು. ಆದರೆ ಬದುಕಿರುವಾಗ ತನ್ನ ಸ್ವಾರ್ಥದಿಂದಾಗಿ ಇದು ಸಾಧ್ಯವಾಗಲಿಲ್ಲ; ಸತ್ತಮೇಲಾದರೂ ಇದು ಸೇವೆಯಾಗಲೆಂದು ಕವಿಯ ಅಭಿಪ್ರಾಯ. ಅದಕ್ಕಾಗಿ ಸತ್ತನಂತರ ತನ್ನ ದೇಹದ ಬೂದಿಯನ್ನು ಹೊಲ ಗದ್ದೆಗಳಲ್ಲಿ, ಕೊಳ ಹೊಳೆಗಳಲ್ಲಿ ತೂರಿಬಿಡಿ. ಇದನ್ನು ಹೀರಿ ಗಿಡ ಹೂವುಗಳು, ಪ್ರಾಣಿಗಳು, ಪುಷ್ಟಿಹೊಂದಿ ಬೆಳೆದಾಗ, ಸಾವಿನಲ್ಲಾದರೂ ತನ್ನ ಹುಟ್ಟು ಧನ್ಯವಾಯಿತಲ್ಲ ಎಂಬುದಾಗಿ ಅಂದುಕೊಳ್ಳುತ್ತೇನೆ ಎಂದು ಕವಿ ಪ್ರಾರ್ಥಿಸಿದ್ದಾರೆ.

**ಕಠಿಣಪದಗಳ ಅರ್ಥ :**

ನೆಗೆದು ಬರೆ—ಹುಟ್ಟಿ ಬರಲು. ಮುಷ್ಟಿ—ಒಂದು ಹಿಡಿ. ಪಂಕಜ—ತಾವರೆ. ಗೈಯಲಿಕೆ—ಮಾಡಲು.

**ಪ್ರಶ್ನೆಗಳು :**

೧. ಈ ಪದ್ಯದಲ್ಲಿ ಪ್ರಕಟಗೊಳ್ಳುವ ಸಂದೇಶವೇನು ?

೨. ಸೇವೆಯಿಲ್ಲದೆ ನರಜನ್ಮ ಪೂರ್ಣವಾಗದು ಎಂಬುದು ಇಲ್ಲಿ ಹೇಗೆ ವ್ಯಕ್ತವಾಗಿದೆ ?

****

## ೭. ಮಹಾಪೂರ

—ಎಂ. ಗೋಪಾಲಕೃಷ್ಣ ಅಡಿಗ

ಅಮೃತವಾಹಿನಿಯೊಂದು ಹರಿಯುತಿದೆ ಮಾನವನ
ಎದೆಯಿಂದಲೆದೆಗೆ ಸತತ ;
ಗ್ರೀಷ್ಮಗಳು ನೂರಾರು ಉರಿಸಿದರು ಆರದಿದು ;
ಸುತ್ತುಮುತ್ತಲು ಮರಳು. ಮೇಲೆ ಪಾಚಿ

ಮುತ್ತಿಕೊಂಡರು ಲುಪ್ತವಾಗದೀ ಅಮೃತಧುನಿ
ಕಿರಿದಾಗಿ. ಬರಿದಾಗಿ, ನೀರಗೆರೆಯಾಗಿ
ತಳದೊಳೆಲ್ಲೊ ತಳುವಿ ಗುಗುಳಿಸುತಿದೆ ಸೆಲೆಯು,
ಏನನೋ ಕಾಯುತಿದೆ ಗುಪ್ತವಾಗೆ.

ಇಂದಲ್ಲ ನಾಳೆ ಹೊಸಬನು ಬಗೆತೆರೆದೀತು
ಕರಗೀತು ಮುಗಿಲ ಬಳಗ ;
ವಂದೀತು ಸೊದೆಯ ಮಳೆ ತುಂಬೀತು ಎದೆಯ ಹೊಳೆ
ತೊಳೆದೀತು ಒಳಗು-ಹೊರಗ

ಈ ಸೆಲೆಗೆ ಆ ಮಳೆಯು ವದೆಗೆ ಎದೆಎದೆ ಹೊಳೆಯು
ಸೇರದಿರೆ ಇಲ್ಲ ನಿಸ್ತಾರ ;
ಬಂದೆ ಬರಬೇಕಯ್ಯಾ. ಬಂದೆ ತೀರಲುಬೇಕು
ಈ ಬಾಳಿಗಾ ಮಹಾಪೂರ.

# ಟಿಪ್ಪಣಿ

## ಕವಿ—ಕಾವ್ಯ ಪರಿಚಯ :

ಈ ಕವನವನ್ನು ಎಂ. ಗೋಪಾಲಕೃಷ್ಣ ಅಡಿಗರ 'ಕಟ್ಟುವೆವು ನಾವು' ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ.

ಎಂ. ಗೋಪಾಲಕೃಷ್ಣ ಅಡಿಗರು ನವ್ಯ ಕವಿಗಳೆಂದು ಪ್ರಸಿದ್ಧರಾಗಿದ್ದಾರೆ. ಇವರು ದಕ್ಷಿಣ ಕನ್ನಡ ಜಿಲ್ಲೆಯ ಮೊಗೇರಿಯಲ್ಲಿ ೧೯೧೮ ರಲ್ಲಿ ಜನಿಸಿದರು. ಇಂಗ್ಲೀಷ್ ಎಂ. ಎ. ಪದವೀಧರರಾದ ಇವರು ಮೊದಲು ಮೈಸೂರಿನ ಸೇಯಿಂಟ್ ಫಿಲೋಮಿನಾ ಕಾಲೇಜಿನಲ್ಲಿ ಇಂಗ್ಲೀಷ್ ಸಹಪ್ರಾಧ್ಯಾಪಕರಾಗಿಯೂ, ಅನಂತರ ಸಾಗರದ ಕಾಲೇಜಿನ ಪ್ರಿನ್ಸಿಪಾಲರಾಗಿಯೂ ಕೆಲಸ ಮಾಡಿದರು. ಈಗ ಉಡುಪಿಯ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದಾರೆ. ಇವರು ಕವಿತೆ, ಕಾದಂಬರಿ, ಅನುವಾದ—ಮೊದಲಾದ ಕ್ಷೇತ್ರಗಳಲ್ಲಿ ಕೆಲಸಮಾಡಿರುವರು. ತಮ್ಮ ತಲೆಮಾರಿನ ಕವಿಗಳಲ್ಲಿ ಅತ್ಯಂತ ಪ್ರತಿಭಾನ್ವಿತರು. "ಭಾವತರಂಗ, ಕಟ್ಟುವೆವು ನಾವು ಚಂಡಮದ್ದಳೆ, ನಡೆದು ಬಂದ ದಾರಿ. ಭೂಮಿಗೀತ" ಮೊದಲಾದುವು ಅವರ ಕವನಸಂಕಲನಗಳು ; ಅನಾಥೆ, ಆಕಾಶದೀಪ, ಅವರು ಬರೆದಿರುವ ಕಾದಂಬರಿಗಳು. ಸುವರ್ಣಕೀಟ, ಜನತೆಯ ಶತ್ರು, ಹುಲ್ಲಿನ ದಳಗಳು ಮೊದಲಾದುವು ಅನುವಾದ ಕೃತಿಗಳು.

ಮನುಷ್ಯನಲ್ಲಿರುವ ಮಾನವೀಯತೆಯನ್ನು ಕುರಿತು ಹೇಳುತ್ತದೆ, ಈ ಪದ್ಯ. ಕೊಳದಲ್ಲಿ ಪಾಚಿ ಇದ್ದರೂ ಸಹ ತಳದಲ್ಲಿ ಅದರ ನೀರು ತಿಳಿಯಾಗಿರುವಂತೆ, ಮನುಷ್ಯ ಎಷ್ಟೇ ಅಬದ್ಧನಾಗಿದ್ದರೂ, ಕೆಟ್ಟವನಾಗಿದ್ದರೂ, ಕಷ್ಟಗಳ ಉರಿಬಿಸಿಲಿನಲ್ಲಿ ಬೆಂದಿದ್ದರೂ, ತಳದಲ್ಲೆಲ್ಲೋ ಮಾನವೀಯತೆಯ ಸೆಲೆ ಚಿಮ್ಮುತ್ತಿರುತ್ತದೆ. ಇಂದಲ್ಲ ನಾಳೆ ಹೊಸದರ ಆಗಮನ ಆಗದೆ ಇರದು. ಆಗ ಕಟ್ಟಿದ ಮೋಡ ಕರಗಿ, ಅಮೃತದ ಮಳೆಗರೆದು ಮಹಾಪೂರವೊಂದು ಬರುತ್ತದೆ; ಬಂದು ಪಾಚಿಯನ್ನು ತೊಳೆದು ಶುದ್ಧಮಾಡುತ್ತದೆಂದು ಕವಿ ಇಲ್ಲಿ ಹಾಡಿದ್ದಾರೆ

## ಕಠಿಣಪದಗಳ ಅರ್ಥ :

ಮಹಾಪೂರ—ದೊಡ್ಡ ಪ್ರವಾಹ. ಅಮೃತವಾಹಿನಿ—ಅಮೃತವೆಂಬ ನದಿ. ಸತತ—ಯಾವಾಗಲೂ. ಗ್ರೀಷ್ಮ—ಬೇಸಗೆಯ ಕಾಲ. ಪಾಚಿ—ನಿಂತ ನೀರಿನಲ್ಲಿ ಕಟ್ಟುವ ಕೊಳಕು; ಹಾವಸೆ. ಲುಪ್ತ—ನಾಶ ; ಕಳೆದುಹೋಗು. ಅಮೃತಧುನಿ—ಅಮೃತದ ಹೊಳೆ. ತಳುವು—ತಂಗು ; ತಡೆದು. ಗುಪ್ತ—ಅಗೋಚರ. ಬಗೆ—ಮನಸ್ಸು. ಸೊದೆ—ಅಮೃತ. ನಿಸ್ತಾರ—ಪಾರಾಗುವಿಕೆ ; ದಾಟುವಿಕೆ.

## ಪ್ರಶ್ನೆಗಳು :

೧. ಮಹಾಪೂರ ಏಕೆ ಬರಬೇಕು ?

೨. ಮಾನವೀಯತೆ ಮನುಷ್ಯನ ಮೂಲ ಸೆಲೆ ಎಂಬುದು ಇಲ್ಲಿ ಹೇಗೆ ವ್ಯಕ್ತವಾಗಿದೆ ?

****

## ೮. ಶಕ್ತಿಯ ಕೊಡು

—ಜಿ. ಎಸ್. ಶಿವರುದ್ರಪ್ಪ

ಶಕ್ತಿಯ ಕೊಡು, ಶಕ್ತಿಯ ಕೊಡು
ಶಕ್ತಿಯ ಕೊಡು ಹೇ ಪ್ರಭೂ.
ಸತ್ಯಕಾಗಿ ನಿಲುವ ಛಲವ
ದೀಪ್ತಗೊಳಿಸು ನನ್ನೊಳು.

ಎಡರ ಕಡಲ ತೆರೆ ಹೆಡೆಗಳು
ಭೋರ್ಗರೆಯುತ ಬಂದರೂ
ತಡೆದು ನಿಲುವ ಮಳಲ ತಡಿಯ
ಬಲವ ನೀಡು ಶ್ರೀಗುರೂ.

ನೂರುಲ್ಕೆಯ ರಭಸ ಮತಿಯ
ಅಬ್ಬರಗಳ ನಡುವೆಯೂ
ನಿಯತ ಗತಿಯ ತಾರಗೆಯೊಲು
ನೇರವಿರಿಸು ನನ್ನನು.

ಗುಡುಗು ಸಿಡಿಲ ಗರುಡಗತಿಯ
ಆಚಂಚಲದ ನೀಲಿಗೆ
ಸದಾ ತುಡಿವ ಗರುಡಗತಿಯಂ
ತುಂಬು ನನ್ನ ಹೃದಯಕೆ.

# ಟಿಪ್ಪಣಿ

## ಕವಿ–ಕಾವ್ಯ ಪರಿಚಯ :

ಈ ಕವಿತೆಯನ್ನು ಜಿ. ಎಸ್. ಶಿವರುದ್ರಪ್ಪನವರ "ಕಾರ್ತೀಕ" ಸಂಗ್ರಹದಿಂದ ತೆಗೆದುಕೊಳ್ಳಲಾಗಿದೆ.

ಡಾ॥ ಜಿ. ಎಸ್. ಶಿವರುದ್ರಪ್ಪನವರು ೧೯೨೬ ರಲ್ಲಿ ಜನಿಸಿದರು. ಎಂ. ಎ. ಪದವಿ ಪಡೆದ ಮೇಲೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿ, ರೀಡರ್ ಆಗಿ ಕೆಲಸಮಾಡಿದರು, ಈ ಮಧ್ಯ ಹೈದರಾಬಾದು ಉಸ್ಮಾನಿಯಾ ವಿಶ್ವವಿದ್ಯಾನಿಲಯದಲ್ಲಿನ ಕನ್ನಡ ವಿಭಾಗವನ್ನು ಅಭಿವೃದ್ಧಿಗೊಳಿಸಲು ಹೋಗಿ ಬಂದರು. ಈಗ ಇವರು ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಪ್ರಾಧ್ಯಾಪಕರಾಗಿದ್ದಾರೆ. ಇವರ 'ಸೌಂದರ್ಯಸಮೀಕ್ಷೆ' ಎಂಬ ಸಂಶೋಧನ ಕೃತಿಗೆ ಡಾಕ್ಟರೇಟ್ ಪ್ರಶಸ್ತಿ ದೊರಕಿದೆ.

ಇವರು ಕವಿಯೂ ಹೌದು, ವಿಮರ್ಶಕರೂ ಹೌದು. ಏಳು ಕವನಸಂಕಲನಗಳನ್ನೂ ನಾಲ್ಕು ವಿಮರ್ಶನ ಗ್ರಂಥಗಳನ್ನೂ, ಒಂದು ಕಾದಂಬರಿಯನ್ನೂ ಪ್ರಕಟಿಸಿದ್ದಾರೆ. "ಸಾಮಗಾನ", "ದೇವಶಿಲ್ಪ", "ದೀಪದ ಹೆಜ್ಜೆ", "ಕಾರ್ತೀಕ", "ತೀರ್ಥವಾಣಿ", "ಅನಾವರಣ", "ತೆರೆದ ದಾರಿ" ಮೊದಲಾದುವು" ಅವರ ಕವನ ಸಂಗ್ರಹಗಳು, ವಿಮರ್ಶೆಯ ಪೂರ್ವಪಶ್ಚಿಮ, ಸೌಂದರ್ಯಸಮೀಕ್ಷೆ, ಪರಿಶೀಲನ, ಗತಿಬಿಂಬ ಇವು ಅವರ ವಿಮರ್ಶನ ಗ್ರಂಥಗಳು. ಕರ್ಮಯೋಗಿ—ಸಿದ್ಧರಾಮನ ಜೀವನ ಕುರಿತ ಅವರ ಕಿರು ಕಾದಂಬರಿ.

"ಶಕ್ತಿಯಕೊಡು" ಒಂದು ಪ್ರಾರ್ಥನಾ ಪದ್ಯ. ಸತ್ಯಕ್ಕಾಗಿ ನಿಲ್ಲುವ ಛಲವನ್ನು ತನ್ನಲ್ಲಿ ಪ್ರಜ್ವಲಿಸುವಂತೆ ಮಾಡೆಂದು ಕವಿಯ ಪ್ರಾರ್ಥನೆ. ಕಷ್ಟಗಳೆಷ್ಟೇ ಬಂದರೂ ಕಡಲಿಗಿರುವ ಮಳಲ ತಡಿಯಂತೆ ತಡೆಯುವ ಶಕ್ತಿಯನ್ನು ನೀಡು, ಉಲ್ಕಾಪಾತದ ನಡುವೆಯೂ ಚಲಿಸದೆ ಇರುವ ನಕ್ಷತ್ರದ ಸ್ಥಿರತೆಯನ್ನು ದಯಪಾಲಿಸು ; ಲೌಕಿಕದ ಅರ್ಭಟವಿಲ್ಲದ, ನಿರ್ಮಲವೂ ವಿಸ್ತಾರವೂ, ಅಚಂಚಲವೂ ಆದ ಬದುಕಿನ ಸ್ಥಿತಿಗೆ ಸದಾ ದುಡಿಯುವ ಹಾಗೆ ತನ್ನನ್ನು ನಡೆಸು—ಹೀಗೆಂದು ಕವಿ ದೇವರಲ್ಲಿ ಮೊರೆಯಿಟ್ಟಿದ್ದಾರೆ.

## ಕಠಿಣಪದಗಳ ಅರ್ಥ :

ದೀಪ್ತಗೊಳಿಸು—ಪ್ರಜ್ವಲಿಸು. ಎಡರು—ತೊಂದರೆ. ಕಡಲು—ಸಮುದ್ರ. ಮತಿ—ಬುದ್ಧಿ. ಅಬ್ಬರ—ಆರ್ಭಟ. ನಿಯತ—ಗೊತ್ತಾದ ; ನಿಶ್ಚಿತ. ಗತಿ—ಚಲನೆ ; ನಡೆ. ತಾರಗೆ—ನಕ್ಷತ್ರ. ಅಚಂಚಲ—ಸ್ಥಿರವಾದ.

## ಪ್ರಶ್ನೆಗಳು :

೧. ಕವಿ ದೇವರಲ್ಲಿ ಪ್ರಾರ್ಥಿಸಿಕೊಂಡದ್ದೇನು ?

****

## ೯. ಮಾತು

— ಚೆನ್ನವೀರ ಕಣವಿ

ಮುಂಜಾವದಲಿ ಹಸಿರು ಹುಲ್ಲು ಮಕಮಲ್ಲಿನಲಿ
ಪಾರಿಜಾತ ಹೂವ ಸುರಿಸಿದಂತೆ
ಮುಟ್ಟಿದರೆ ಮಾಸುತಿಹ ಮಂಜುಹನಿ ಮುತ್ತಿನಲಿ
ಸೃಷ್ಟಿ ಸಂಪೂರ್ಣತೆಯು ಬಿಂಬಿಪಂತೆ,

ಮೆಲ್ಲೆದೆಯ ಸವಿಯೊಲುಮೆ ಕರಗಿ ಕಂಬನಿಯಾಗಿ
ಹೆಣ್ಣ ಕಣ್ಣಂಚಿನಲಿ ತುಳುಕುವಂತೆ
ಸುಳಿಗಾಳಿಯೊಂದಿನಿತು ಸೂಸಿ ಬಂದರು ಸಾಕು
ಮರವನಪ್ಪಿದ ಬಳ್ಳಿ ಬಳುಕುವಂತೆ,—

ನಾವು ಆಡುವ ಮಾತು ಹೀಗಿರಲಿ ಗೆಳೆಯ
ಮೃದುವಚನ ಮೂಲೋಕ ಗೆಲ್ಲುವುದು ತಿಳಿಯ ;
ಮೌನ ಮೊಗ್ಗೆಯನೊಡೆದು ಮಾತರಳಿ ಬರಲಿ
ಮೂರು ಗಳಿಗೆಯ ಬಾಳು ಮಗಮಗಿಸುತಿರಲಿ.

### ಟಿಪ್ಪಣಿ

**ಕವಿ–ಕಾವ್ಯ ಪರಿಚಯ :**

ಈ ಪದ್ಯವನ್ನು ಚೆನ್ನವೀರ ಕಣವಿಯವರ " ಆಕಾಶಬುಟ್ಟಿ " ಯಿಂದ ಆರಿಸಿಕೊಳ್ಳಲಾಗಿದೆ. ಚೆನ್ನವೀರ ಕಣವಿಯವರು ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗ ಹಾಗೂ ಪ್ರಕಟನ ಶಾಖೆಯ ನಿರ್ದೇಶಕರಾಗಿದ್ದಾರೆ. ಇವರು ಧಾರವಾಡ ಜಿಲ್ಲೆಯ ಹೊಂಬಾಳದಲ್ಲಿ ೧೯೨೮ ರಲ್ಲಿ ಜನಿಸಿದರು ಇವರು ಕವಿಗಳೂ, ವಿಮರ್ಶಕರೂ ಆಗಿದ್ದಾರೆ. " ಕಾವ್ಯಾಕ್ಷಿ ",

" ಭಾವಜೀವಿ ", " ಆಕಾಶಬುಟ್ಟಿ ", " ಮಧುಚಂದ್ರ ". " ಮಣ್ಣಿನ ಮೆರವಣಿಗೆ ", " ದೀಪಧಾರಿ ", " ನೆಲ ಮುಗಿಲು "—ಇವು ಅವರ ಕವನಸಂಕಲನಗಳು. " ಸಾಹಿತ್ಯಚಿಂತನ " ಎಂಬ ವಿಮರ್ಶನ ಗ್ರಂಥವೊಂದನ್ನು ಪ್ರಕಟಿಸಿದ್ದಾರೆ.

ಪ್ರಕೃತ ಪದ್ಯದಲ್ಲಿ ಮಾತು ಯಾವ ರೀತಿ ಮೂಡಿ ಬರಬೇಕೆಂಬುದನ್ನು ಕಾವ್ಯಮಯವಾಗಿ ವರ್ಣಿಸಿದ್ದಾರೆ. ಮುಂಜಾವದಲ್ಲಿ ಪಾರಿಜಾತ ಸುರಿದಂತೆ, ಇಬ್ಬನಿಯಲ್ಲಿ ಸೃಷ್ಟಿಯ ಪೂರ್ಣತೆ ಬಿಂಬಿಸಿದಂತೆ, ಮೃದುಹೃದಯದ ಪ್ರೀತಿ ಕರಗಿ ಹೆಣ್ಣಿನ ಕಣ್ಣಿನಲ್ಲಿ ಕಂಬನಿಯಾಗಿ ತುಳುಕಿದಂತೆ, ಮಂದಮಾರುತ ಬಂದಾಗ ಮರವನ್ನು ಅಪ್ಪಿದ್ದ ಬಳ್ಳಿ ಅಲ್ಲಾಡಿದಂತೆ ಮಾತು ಬರಲೆಂದು ಕವಿಯ ಆಶಯ. ನಾವು ಆಡುವ ಮಾತು ಮೌನಮೊಗ್ಗಿಯನೊಡೆದು ಅರಳಿ ಬರಬೇಕು. ಮೃದುವಚನ ಮೂಲೋಕ ಗೆಲ್ಲುವುದು ಎಂಬ ಮಾತು ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ಅಂತು ಮಾತು ಚಿಪ್ಪಿನಿಂದ ಮುತ್ತು ಮೂಡಿ ಬಂದಂತೆ ಬರಬೇಕು. ಹಾಗಿದ್ದರೆ ಬದುಕು ಬಂಗಾರವಾಗುತ್ತದೆ ಎಂಬುದನ್ನು ಈ ಕವಿತೆ ಶ್ರುತಪಡಿಸುತ್ತದೆ.

## ಕಠಿಣಪದಗಳ ಅರ್ಥ :

ಮುಂಜಾವ—ಬೆಳಿಗ್ಗೆ. ಮಾಸು—ಕೊಳಕಾಗು ; ಬಣ್ಣಗುಂದು. ಬಿಂಬಿಸು—ಪ್ರತಿಯಾಗಿ ತೋರು. ಒಲುಮೆ—ಪ್ರೀತಿ. ಸುಳಿಗಾಳಿ—ತಂಪಾದ ಗಾಳಿ. ಸೂಸಿ—ಬೀಸಿ. ಮಗಮಗಿಸು—ಸುವಾಸನೆಬೀರು ; ಪರಿಮಳವನ್ನು ಹರಡು.

## ಪ್ರಶ್ನೆಗಳು :

೧. ನಾವು ಆಡುವ ಮಾತು ಹೇಗಿರಬೇಕು ?
೨. ಮೃದುವಚನ ಮೂಲೋಕ ಗೆಲ್ಲುವುದು—ಹೇಗೆ ?

****

# ೧೦. ಗ್ರಂಥಾಲಯದಲ್ಲಿ

—ಸಿ.ಪಿ.ಕೆ.

ಕಣ್‌ದಿಟ್ಟಿ ಹರಿದತ್ತ ಗ್ರಂಥಗಿರಿಪಂಕ್ತಿಗಳು
ನಿಂತು ಬೆರಗೀಯುತಿವೆ ಪುಸ್ತಕಾಲಯದಲ್ಲಿ.

ಇವುಗಳಡಿ ನಾ ದೂಳ ಕಣವಾಗಿ ನಿಲ್ಲುವೆನು—
ಚಣಕಾಲ ಬಂದು ನಿಂತರೆ ಸಾಕು. ನನ್ನ ಮತಿ
ಮುದುಡಿಹೋಗುವುದಿಲ್ಲಿ ; ನನ್ನಹಂಕಾರವನು
ನುಚ್ಚುನೂರಾಗಿಸುವುದೀ ತಾಣ ಅಪ್ಪಳಿಸಿ !
ಒಳಗೆ ಬಂದೆನೋ ಬೇಗ ಹೊರಗೆ ಓಡುವ ತವಕ—
ಏಕೆನಲು ಬೆದರುವೆನು ನನಗಿಲ್ಲಿ ಬಹ ಲಯಕೆ !
ಬೇಕು ಯಾರಿಗೆ ಇಂಥ ಶಿಕ್ಷೆ ! ದೂರವೆ ಇರಲಿ !

ಎನಿತು ಹಿರಿಬಾಳುಗಳ ಮೇಳ ನೆರೆದಿಹುದಿಲ್ಲಿ
ಈ ಗ್ರಂಥಗಳೋ ಅಂಥ ಬಾಳುಗಳ ಪಳೆಯುಳಿಕೆ !
ಇವ ಕಂಡು ಮೂಲವನು ಚಿತ್ರಿಸಲು ಯತ್ನಿಸುವೆ ;
ಕಡೆಗೆ ನಿಲ್ಲುವೆ ವಿಶ್ವರೂಪಾವಲೋಕನದಿ
ಪಾರ್ಥನೊಲು ತತ್ತರಿಸಿ ಭೀತವಿಸ್ಮಿತನಾಗಿ !

## ಟಿಪ್ಪಣಿ

**ಕವಿ–ಕಾವ್ಯ ಪರಿಚಯ :**

ಈ ಕವಿತೆಯನ್ನು ಸಿಪಿಕೆ ಅವರ "ಪ್ರಕೃತಿ "ಎಂಬ ಕವನಸಂಕಲನದಿಂದ ಆರಿಸಿಕೊಳ್ಳಲಾಗಿದೆ. ಸಿಪಿಕೆ ಎಂಬ ಸಂಕ್ಷಿಪ್ತ ನಾಮದಿಂದ ಪರಿಚಿತರಾಗಿರುವ ಶ್ರೀ ಸಿ. ಪಿ. ಕೃಷ್ಣಕುಮಾರ್

ಅವರು ಮೈಸೂರು ವಿಶ್ವವಿದ್ಯಾನಿಲಯದ ಪದವೀಧರರು. ಇವರು ೧೯೩೭ ರಲ್ಲಿ ಜನಿಸಿದರು. ಬಿ. ಎ. ಆನರ್ಸ್ ಮತ್ತು ಎಂ. ಎ. ಪರೀಕ್ಷೆಗಳಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಅನಂತರ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿ ಸೇರಿದ ಇವರು ಈಗ ಮಾನಸ ಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ರೀಡರ್ ಆಗಿದ್ದಾರೆ. ಇವರು ಕವಿಯೂ ಹೌದು, ವಿಮರ್ಶಕರೂ ಹೌದು. ಇದಲ್ಲದೆ ಸಂಸ್ಕೃತ ಮತ್ತು ಇಂಗ್ಲೀಷಿನಿಂದ ಕೆಲವು ಶ್ರೇಷ್ಠ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅವರ ಕೃತಿಗಳಲ್ಲಿ ಮೂರು ಕವನ ಸಂಕಲನಗಳು, ಆರು ಸ್ವತಂತ್ರ ವಿಮರ್ಶನ ಕೃತಿಗಳು ; ಎಂಟು ಅನುವಾದ ಗ್ರಂಥಗಳು ; ಎರಡು ಸಂಪಾದಿತ ಕೃತಿಗಳು ; 'ತಾರಾಸ' "ಅನಂತ ಪೃಥ್ವೀ" 'ಪ್ರಕೃತಿ' 'ಕನ್ನಡ ಚತುರ್ಮುಖ' 'ಕಾವ್ಯಾರಾಧನ' 'ಜಾನಪದ ಪ್ರತಿಭೆ' 'ಪರಿಭಾವನೆ' 'ಜನ್ನ' 'ನಾಗಚಂದ್ರ' 'ಸಾಹಿತ್ಯ ಪ್ರವೇಶ' 'ಸಾಹಿತ್ಯ ವಿಮರ್ಶೆಯ ತತ್ವಗಳು' 'ಪಾಶ್ಚಾತ್ಯ ಕಾವ್ಯ ಚಿಂತನ' 'ಕನ್ನಡ ನಾಗಾನಂದ' 'ಕನ್ನಡ ರತ್ನಾವಳಿ' ಮೊದಲಾದುವು ಇವರ ಕೃತಿಗಳು.

ಪುಸ್ತಕಭಂಡಾರದಲ್ಲಿ ನಿಂತುಕೊಂಡಾಗ ಆಗುವ ವಿಶೇಷ ಅನುಭವವೊಂದನ್ನು ಪ್ರಕೃತ ಪದ್ಯದಲ್ಲಿ ಕೊಟ್ಟಿದ್ದಾರೆ. ಪುಸ್ತಕಗಳ ಸಾಲುರಾಶಿಯ ಮುಂದೆ ನಾವು ಅಲ್ಪರಾಗುತ್ತೇವೆ ಧೂಳಕಣವಾಗುತ್ತೇವೆ, ನಮ್ಮ ಬುದ್ಧಿ ಮುಸುಕಾಗಿ ಅಹಂಕಾರ ಸೋರಿಹೋಗುತ್ತದೆ. ಒಂದು ರೀತಿಯಲ್ಲಿ ನಾವು ಕರಗಿ ಇಲ್ಲವಾಗುವ ಭಯ ಹುಟ್ಟುತ್ತದೆ. ಪುಸ್ತಕಗಳು ಕಾಗದದ ಹಾಳೆಗಳ ಕಟ್ಟಲ್ಲ, ಹಿರಿಯ ಜೀವಗಳ ಬಾಳಿನ ಸರ್ವಸಾರ, ಪಳೆಯುಳಿಕೆ. ಇಂಥ ಸಮಯದಲ್ಲಿ ವಿಶ್ವರೂಪದ ಮುಂದೆ ಅರ್ಜುನನಿಗಾದ ಭಯಮಿಶ್ರಿತ ಗೌರವ ನಮಗೂ ಆದರೆ ಆಶ್ಚರ್ಯವಲ್ಲ. ಈ ಎಲ್ಲ ಅನುಭವ ಈ ಪದ್ಯದಲ್ಲಿ ಮಡುಗಟ್ಟಿದೆ.

ಕಠಿಣಪದಗಳ ಅರ್ಥ :

ಕಣ್‌ದಿಟ್ಟಿ—ಕಣ್ಣಿನ ದೃಷ್ಟಿ ; ನೋಟ. ಪಂಕ್ತಿ—ಸಾಲು. ಚಣಕಾಲ—ಸ್ವಲ್ಪಕಾಲ. ಮತಿ—ಬುದ್ಧಿ. ಮುದುಡು—ಕುಗ್ಗು. ತಾಣ—ಸ್ಥಳ. ಲಯ—ಕರಗುವಿಕೆ; ವಿಲೀನ. ಮೇಳ—ಸಮೂಹ. ಪಳೆಯುಳಿಕೆ—ಅವಶೇಷ. ಅವಲೋಕನ—ನೋಟ. ತತ್ತರಿಸು—ಬೆದರು. ಭೀತವಿಸ್ಮಿತ—ಹೆದರಿಕೆಯಿಂದ ಆದ ಆಶ್ಚರ್ಯ.

ಪ್ರಶ್ನೆಗಳು :

೧. ಗ್ರಂಥಾಲಯದಲ್ಲಿ ಕವಿಗಾದ ಅನುಭವ ಎಂಥದು ?
೨. ಪುಸ್ತಕಗಳು ಹಿರಿಬಾಳುಗಳ ಮೇಳ—ಹೇಗೆ ?

****

## ೧೧. ವಚನಾಮೃತ

—ಬಸವಣ್ಣ

ಕಲ್ಲನಾಗರ ಕಂಡರೆ ಹಾಲನೆರೆಯೆಂಬರು ;
ದಿಟವನಾಗರ ಕಂಡರೆ ಕೊಲ್ಲೆಂಬರಯ್ಯಾ ;
ಉಂಬಜಂಗಮ ಬಂದರೆ ನಡೆಯೆಂಬರು ;
ಉಣ್ಣದಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ ;
ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ
ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ.

ನರೆ ಕೆನ್ನೆಗೆ. ತೆರೆ ಗಲ್ಲಕೆ. ಶರೀರ ಗೂಡುವೋಗದ ಮುನ್ನ ;
ಹಲ್ಲು ಹೋಗಿ. ಬೆನ್ನು ಬಾಗಿ. ಅನ್ಯರಿಗೆ ಹಂಗಾಗದ ಮುನ್ನ ;
ಕಾಲಮೇಲೆ ಕಯ್ಯನೂರಿ ಕೋಲಹಿಡಿಯದ ಮುನ್ನ ;
ಮುಪ್ಪಿಂದೊಪ್ಪವಳಿಯದ ಮುನ್ನ : ಮೃತ್ಯು ಮುಟ್ಟದ ಮುನ್ನ ;
ಪೂಜಿಸು ಕೂಡಲಸಂಗಮ ದೇವನ

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿ ಭೋ
ಸತ್ಯವ ನುಡಿವುದೆ ದೇವಲೋಕ ; ಮಿಥ್ಯವ ನುಡಿವುದೆ ಮರ್ತ್ಯಲೋಕ
ಆಚಾರವೇ ಸ್ವರ್ಗ ; ಅನಾಚಾರವೇ ನರಕ
ಕೂಡಲಸಂಗಮದೇವಾ. ನೀವೆ ಪ್ರಮಾಣು.

ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ.
ನಯನದಲ್ಲಿ ನಿಮ್ಮ ಮೂರುತಿ ತುಂಬಿ.
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ.
ಮನದಲ್ಲಿ ನಿಮ್ಮ ನೆನಹು ತುಂಬಿ
ಕೂಡಲಸಂಗಮದೇವಾ ನಿಮ್ಮ ಚರಣಕಮಲದೊಳಗಾನು ತುಂಬಿ.

## ಟಿಪ್ಪಣಿ

### ಕವಿ-ಕಾವ್ಯ ಪರಿಚಯ :

ಇಲ್ಲಿನ ಪದ್ಯಭಾಗವು ಬಸವಣ್ಣನವರ ವಚನಗಳಿಂದ ಆಯ್ದುಕೊಂಡುವು. ಭಕ್ತಿಭಂಡಾರಿಯೆಂದು ಪ್ರಖ್ಯಾತರಾಗಿರುವ ಬಸವಣ್ಣನವರು ಬಿಜಾಪುರ ಜಿಲ್ಲೆಯ ಬಾಗೇವಾಡಿಯಲ್ಲಿ ಮಾದಿರಾಜ-ಮಾದಾಂಬಿಕೆ ಎಂಬ ಶೈವಬ್ರಾಹ್ಮಣ ದಂಪತಿಗಳ ಮಗನಾಗಿ ಹುಟ್ಟಿ ವೈದಿಕಮತದ ಕರ್ಮಮಾರ್ಗದಲ್ಲಿ ಜಿಗುಪ್ಸೆಗೊಂಡು. ಕಪ್ಪಡಿ ಸಂಗಮಕ್ಕೆ ಹೊರಟುಬಂದರು. ಅಲ್ಲಿ ಸಂಗಮೇಶ್ವರನನ್ನು ಪೂಜಿಸುತ್ತಾ ಭಕ್ತಿಸಾಧನೆಯಲ್ಲಿ ತಲ್ಲೀನರಾಗಲು, ಅಲ್ಲಿಂದ ಮಂಗಳವಾಡಕ್ಕೆ ಹೋಗುವಂತೆ ಶಿವನ ಅಪ್ಪಣೆಯಾಯಿತು. ಅದರಂತೆ ಬಸವೇಶ್ವರನು ಅಲ್ಲಿಗೆ ಹೋಗಿ, ಕಾಲಕ್ರಮದಲ್ಲಿ ಅಲ್ಲಿನ ದೊರೆಯಾದ ಬಿಜ್ಜಳನ ಭಂಡಾರಿಯಾದರು. ಅದರ ಜೊತೆಯಲ್ಲಿ ಭಕ್ತಿಭಂಡಾರಿಯೂ ಆದರು. ಧರ್ಮಜಗತ್ತಿನಲ್ಲಿ ಕ್ರಾಂತಿಕಾರಕವಾದ ಪಂಥ ಭೇದಕ್ಕೆ ನಿರ್ಮಾತೃವಾಗಿ ನಿಂತು ಸರ್ವಸಮಾನತೆಯನ್ನೂ, ಕಾಯಕದ ಮಹತ್ವವನ್ನೂ ಎತ್ತಿಹಿಡಿದರು. ತಮ್ಮ ಬಾಳೆಲ್ಲವನ್ನೂ ಲೋಕಕಲ್ಯಾಣಕ್ಕಾಗಿ ಮೀಸಲಾಗಿರಿಸಿದ ಈ ಲೋಕೋತ್ತರ ಪುರುಷ ತಮ್ಮ ತನು ಮನ ಧನಗಳನ್ನು ಜಂಗಮಾರಾಧನೆಗೆ ವಿನಿಯೋಗಿ ಸಿದರು. ಭಕ್ತವೃಂದವನ್ನು ಸಂಘಟಿಸಿ ಕಲ್ಯಾಣದಲ್ಲಿ ಅನುಭವಮಂಟಪವನ್ನು ಸ್ಥಾಪಿಸಿದರು. ಅವರ ಪ್ರಯತ್ನದ ಫಲವಾಗಿ ಸಮಾಜದಲ್ಲಿದ್ದ ಸಹಸ್ರದೋಷಗಳು ನಿವಾರಣೆಯಾಗಿ ಮಾನವನು ಶ್ರೇಯಸ್ಸಿನ ಹಾದಿಯನ್ನು ಹಿಡಿಯಲು ಸಾಧ್ಯವಾಯಿತು. ಸಾಮಾಜಿಕ ಮತ್ತು ಧಾರ್ಮಿಕ ಜಗತ್ತಿನಲ್ಲಿ ಹೇಗೋ ಹಾಗೆ ಸಾಹಿತ್ಯಜಗತ್ತಿನಲ್ಲಿಯೂ ಅವರು ಅಪೂರ್ವವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅವರು ತಮ್ಮ ಇಷ್ಟದೈವವಾದ ಕೂಡಲಸಂಗಮನ ಅಂಕಿತದಿಂದ ಅನೇಕ ವಚನಗಳನ್ನು ಬರೆದಿದ್ದಾರೆ. ಈ ವಚನಗಳು ಭಾವದ ಭಾರದಿಂದ ಬಳುಕುವ ಸುಲಭ ಸರಳ ಶೈಲಿಯಲ್ಲಿದ್ದು ಕನ್ನಡದ ಉಪನಿಷತ್ತುಗಳೆಂಬ ಗೌರವಕ್ಕೆ ಪಾತ್ರವಾಗಿವೆ. ಇವು ಸಮಾಜದಲ್ಲಿ ಸದಾಚಾರವನ್ನು ಸಂಸ್ಥಾಪಿಸಹೊರಟಿರುವುದರಿಂದ ಅವುಗಳು ಸದಾಚಾರಸ್ಮೃತಿಗಳೆಂಬ ಗೌರವಕ್ಕೂ ಪಾತ್ರವಾಗಿವೆ. ಸಮಾಜದಲ್ಲಿನ ಡಾಂಬಿಕತನ ಮತ್ತು ಅಂಧಶ್ರದ್ಧೆಗಳನ್ನು ಖಂಡಿಸುವುದರ ಜೊತೆಗೆ ಭಗವದ್ಭಕ್ತಿಯನ್ನೂ ಜನರಲ್ಲಿ ಪ್ರಚೋದಿಸುವುದು ಇಲ್ಲಿನ ವಚನಗಳ ಹೆಗ್ಗುರಿ.

### ಕಠಿಣಪದಗಳ ಅರ್ಥ :

ಕಲ್ಲನಾಗರು—ಕಲ್ಲಿನಿಂದ ಕಡೆದ ನಾಗರಹಾವು. ಎರೆ—ಹೊಯ್ಯಿ. ಬೋನ—ಅನ್ನ. ಹುತ್ತಿ—ಮಣ್ಣುಹೆಂಟೆ. ಜಂಗಮ—ಶಿವಶರಣ (ಓಡಾಡುವ ದೇವರು). ನರೆ—ತಲೆಗೂದಲು ಬಿಳುಪಾಗುವುದು. ತೆರೆ—ಚರ್ಮದ ಸುಕ್ಕು. ಗೂಡು—ಮುಪ್ಪಿನಿಂದ ಎದೆಯ ಮೂಳೆಗಳು ಗೂಡಿನಂತಾಗುವಿಕೆ. ಹಂಗು—ದಾಕ್ಷಿಣ್ಯದಿಂದ ಬರುವ ದೈನ್ಯತೆ. ಒಪ್ಪವಳಿ—ಅಂದಕೆಡುವುದು.

ಮಿಥ್ಯ– ಸುಳ್ಳು. ನಯನ—ಕಣ್ಣು. ಮೂರುತಿ—ಆಕಾರ. ಕೀರುತಿ—ಕೀರ್ತಿ. ನೆನಹು—ನೆನಪು. ಚರಣ—ಪಾದ.

**ಪ್ರಶ್ನೆಗಳು :**

೧. ಜನರ ಮೂಢಭಕ್ತಿಯನ್ನು ವಚನಕಾರರು ಹೇಗೆ ಖಂಡಿಸಿದ್ದಾರೆ ?

೨. ಮುಪ್ಪು ಬಂದಾಗ ಮಾನವನಲ್ಲಿ ಆಗುವ ವ್ಯತ್ಯಾಸಗಳನ್ನು ಕವಿ ಇಲ್ಲಿ ಹೇಗೆ ವರ್ಣಿಸಿದ್ದಾರೆ ?

೩. ವಚನಕಾರರ ದೃಷ್ಟಿಯಲ್ಲಿ ದೇವಲೋಕ ಮರ್ತ್ಯಲೋಕಗಳು ಯಾವುವು ? ಅವುಗಳನ್ನು ಪಡೆಯುವ ಬಗೆ ಹೇಗೆ ?

೪. ಭಕ್ತಿಯ ಆಚರಣೆಯಲ್ಲಿ 'ತುಂಬಿ' ಎಂಬ ಪದವನ್ನು ಕವಿ ಹೇಗೆ ಬಳಸಿದ್ದಾರೆ? ಅದರ ಸಾರ್ಥಕತೆಯನ್ನು ಹೇಗೆ ಸಾಧಿಸಿದ್ದಾರೆ ?

**ವ್ಯಾಕರಣ :**

ಹಾಲನೆರೆ, ಕೊಲ್ಲೆಂಬರು, ನಡೆಯೆಂಬರು, ಗೂಡುವೋಗು, ಕಯ್ಯನೂರಿ, ಹಿಡಿಯೆಂಬರು, ಒಪ್ಪವಳಿ, ಲೋಕವೆಂಬುದು—ಈ ಪದಗಳ ಸಂಧಿಯನ್ನು ಬಿಡಿಸಿ ಸಂಧಿಯ ಹೆಸರನ್ನೂ, ಸಂಧಿಯ ನಿಯಮವನ್ನೂ ತಿಳಿಸಿರಿ.

****

## ೧೨. ತಾಯಿಯ ಅಳಲು

—ರಾಘವಾಂಕ

ಏವನೇವೆನಲೆ ಮಗನೇ ಮಗನೇ
ಸಾವೇಕಾಯಿತ್ತೆಲೆ ಚೆನ್ನಿಗನೇ ।
ಇಱಿದೆಯಲಾ ಎನ್ನನು ಸುಕುಮಾರಾ
ಕೊಱಿದೆಯಲಾ ಕೊರಳನು ಜಿತಮಾರಾ ।

ಎತ್ತಣ ಬಱಸಿಡಿಲೆಱಗಿತೊ ನಿನ್ನ
ಹುತ್ತಿನ ಹತ್ತಿರೆ ಒಱಗಿದೆ ಚೆನ್ನ ।
ಹಾವು ಹಿಡಿಯೆ ಹಾ ಎಂದೊಱಲಿದೆಯಾ
ಸಾವಾಗವ್ವಾ ಎಂದಳಲಿದೆಯಾ ।

ರನ್ನದ ಕನ್ನಡಿ ಸಿಡಿದುದೋ ದೇವಾ
ಹೊನ್ನಕಳಸ ಕೆಡೆದೊಡೆದುದೊ ದೇವಾ ।
ಎನ್ನ ಕಡವರಂ ಸೂಱಿ ಹೋಯಿತೋ
ಹೊನ್ನ ಪ್ರತಿಮೆಯಸು ಹಾಱಿಹೋಯಿತೋ ।

ಇನವಂಶದ ಲತೆ ಕುಡಿಮುರುಟಿತ್ತೋ
ಜನಪನಿಟ್ಟ ಸುರತರು ಮುಱಿಯಿತ್ತೋ ।
ಹೆತ್ತ ಹೊಟ್ಟೆಯುರಿಯುತ್ತಿದೆ ಮಗನೇ
ಎತ್ತಿದ ತೋಳನು ಕೆತ್ತಿದೆ ಮಗನೇ ।

ಹಾಡುವ ಬಾಯಲಿ ಮಣ್ಣನು ಹೊಯ್ದು
ನೋಡುವ ಕಣ್ಣಲಿ ಸುಣ್ಣವ ಹೊಯ್ದು ।

ಪಾಪಿಯೆನ್ನ ನೀನೊಮ್ಮೆಗೆ ನೋಡಾ
ಕೋಪವನುಳಿದೊಯ್ಯನೆ ಮಾತಾಡಾ ।
ನುಡಿದಡೆ ಪಾಪವೆ ಹೆತ್ತವರೊಡನೆ
ಕಡುಮುಳಿಸೇ ಮಗನೇ ಎನ್ನೊಡನೆ ।

## ಟಿಪ್ಪಣಿ

ಕವಿ–ಕಾವ್ಯ ಪರಿಚಯ :

ಹರಿಹರಕವಿಯ ಸೋದರಳಿಯನೂ, ಶಿಷ್ಯನೂ ಆದ ರಾಘವಾಂಕ ಕವಿ ರಚಿಸಿದ 'ಹರಿಶ್ಚಂದ್ರಕಾವ್ಯ' ದಿಂದ ಈ ಭಾಗವನ್ನು ಎತ್ತಿಕೊಂಡಿದೆ. ಈ ಕವಿಯ ಕಾಲ ಕ್ರಿ. ಶ. ೧೩ನೆಯ ಶತಮಾನ. ಈತನು 'ಹರಿಶ್ಚಂದ್ರಕಾವ್ಯ' ವನ್ನು ಮಾತ್ರವೇ ಅಲ್ಲದೆ 'ವೀರೇಶ ಚರಿತೆ, ಸಿದ್ಧರಾಮ ಪುರಾಣ, ಸೋಮನಾಥ ಚರಿತೆ' ಎಂಬ ಗ್ರಂಥಗಳನ್ನೂ ಬರೆದಿದ್ದಾನೆ. (ಶರಭಚಾರಿತ್ರ, ಹರಿಹರಮಹತ್ವ ಎಂಬ ಮತ್ತೆರಡು ಗ್ರಂಥಗಳನ್ನೂ ಈತನು ಬರೆದಿರುವುದಾಗಿ ಹೇಳುತ್ತಾರೆ). ಇವುಗಳಲ್ಲಿ ಅಗ್ರಗಣ್ಯವಾದುದು 'ಹರಿಶ್ಚಂದ್ರ ಕಾವ್ಯ'. ಕವಿಯು ಅದನ್ನು ಹಂಪೆಯ ರಾಜನಾದ ದೇವರಾಜನ ಸಭೆಯಲ್ಲಿ ಓದಿ 'ಕವಿಶರಭಭೇರುಂಡ' ಎಂಬ ಬಿರುದನ್ನು ಪಡೆದನಂತೆ ! ಈತನಿಗೆ 'ಉಭಯ ಕವಿ-ಕಮಲರವಿ', 'ಅದಟಕವಿ ನಿಕರ ಚೌದಂತ' ಇತ್ಯಾದಿ ಇನ್ನೂ ಅನೇಕ ಬಿರುದುಗಳಿದ್ದವು.

ರಾಘವಾಂಕನು ತನ್ನ ಸೋದರಮಾವನಾದ ಹರಿಹರದೇವನಂತೆಯೇ ದೇಶೀಯ ಛಂದಸ್ಸಿನ ಬೆಳವಣಿಗೆಯಲ್ಲಿ ಬಹು ಪ್ರಮುಖವಾದ ಪಾತ್ರವನ್ನು ವಹಿಸಿದವನು. ಹರಿಹರನು ರಗಳೆಯ ಛಂದಸ್ಸಿನಲ್ಲಿ ಕಾವ್ಯಸೃಷ್ಟಿ ಮಾಡಿದರೆ ರಾಘವಾಂಕನು ಷಟ್ಪದಿಯನ್ನು ಬಳಕೆಗೆ ತಂದನು. ರಾಘವಾಂಕನಿಗಿಂತ ಮುಂಚೆ ಶರಷಟ್ಪದಿ ಮಾತ್ರ ಕ್ವಚಿತ್ತಾಗಿ ಕನ್ನಡಕಾವ್ಯಗಳಲ್ಲಿ ಬಳಕೆಯಾಗಿತ್ತು. ರಾಘವಾಂಕನು ಅಖಂಡವಾಗಿ ಷಟ್ಪದಿಯಲ್ಲೇ ತನ್ನ ಕಾವ್ಯಗಳನ್ನೆಲ್ಲ ಬರೆದನು. ಈತನ ಕಾವ್ಯಗಳು ವಾರ್ಧಕಷಟ್ಪದಿಯಲ್ಲಿವೆ. ಆದರೆ ಈತನ ವೀರೇಶಚರಿತೆಯಲ್ಲಿನ ಷಟ್ಪದಿ ವಿಲಕ್ಷಣವಾಗಿದೆ. ಬಹುಶಃ ಷಟ್ಪದಿಯಲ್ಲಿ ವೈವಿಧ್ಯವನ್ನು ತರಲು ಕವಿ ಪ್ರಯತ್ನಿಸಿರ ಬಹುದು. ಈ ಎಲ್ಲ ಕಾರಣಗಳಿಂದ ಈತನನ್ನು 'ಷಟ್ಪದಿಬ್ರಹ್ಮ' ಎಂದು ಕರೆಯುತ್ತಾರೆ.

ರಾಘವಾಂಕನ ಹರಿಶ್ಚಂದ್ರಕಾವ್ಯವು ಅತ್ಯಂತ ನಾಟಕೀಯವಾಗಿದೆ. ರನ್ನನ ಗದಾಯುದ್ಧದಂತೆ ಇದನ್ನೂ ನಾಟಕವಾಗಿ ಪರಿವರ್ತಿಸಲಾಗಿದೆ. ಹರಿಶ್ಚಂದ್ರಕಾವ್ಯದ ಕಥೆ ಸುಪ್ರಸಿದ್ಧವಾದುದು. ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ಕೊಟ್ಟಭಾಷೆಯನ್ನು ಉಳಿಸಿಕೊಳ್ಳುವುದಕ್ಕಾಗಿ ರಾಜ್ಯಕೋಶಗಳನ್ನು ತೊರೆದು ಕಾಶಿಗೆ ಹೋಗುತ್ತಾನೆ. ಹರಿಶ್ಚಂದ್ರನು ಸಾಲವನ್ನು ತೀರಿಸುವುದಕ್ಕಾಗಿ ಹೆಂಡತಿ ಮಕ್ಕಳನ್ನು ಮಾರುತ್ತಾನೆ. ತಾನೂ ವಿಕ್ರೀತನಾಗಿ ಹೊಲೆಯನ ಆಳಾಗುತ್ತಾನೆ. ಹೀಗಿರುವಾಗ ಒಂದು ದಿನ ಆತನ ಮಗನಾದ ರೋಹಿತಾಶ್ವನು ತನ್ನ ಯಜಮಾನನ ಮನೆಗೆ ಹುಲ್ಲು ಹುಳ್ಳಿಗಳನ್ನು

ತರಲೆಂದು ಕಾಡಿಗೆ ಹೋಗಿ. ಹಾವು ಕಡಿದು ಸಾಯುತ್ತಾನೆ. ಇದನ್ನು ಕೇಳಿದ ಹರಿಶ್ಚಂದ್ರನ ಮಡದಿ ಚಂದ್ರಮತಿ ಕಾಡಿಗೆ ಧಾವಿಸಿ ಬರುತ್ತಾಳೆ. ಅಲ್ಲಿ ಮಗನನ್ನು ಕಾಣುತ್ತಲೆ ಆಕೆ ಕಣ್ಣೀರಿನ ಹೊಳೆಯನ್ನು ಹರಿಸುತ್ತಾ ಗೋಳಾಡುತ್ತಾಳೆ. ಕವಿ ರಾಘವಾಂಕನು ಈ ಭಾಗದಲ್ಲಿ ಕರುಣೆಯ ಹೊನಲನ್ನು ಹರಿಸಿದ್ದಾನೆ. ಷಟ್ಪದಿಯಲ್ಲಿ ಬರೆದಿರುವ ಈ ಗ್ರಂಥದಲ್ಲಿ ಚಂದ್ರಮತಿಯ ಪ್ರಲಾಪದ ಭಾಗ ಮಾತ್ರ ರಗಳೆಯ ಛಂದಸ್ಸಿನಲ್ಲಿದೆ.

**ಕಠಿಣಪದಗಳ ಅರ್ಥ :**

೧. ಏವೆನು—ಏನು ಮಾಡಲಿ. (ಏವೆನು + ಏವೆನು-ಏವೆನೇವೆನು—ದ್ವಿರುಕ್ತಿ) ಇಱಿ—ಕೊಲ್ಲು. ಕೊಱೆ—ಕೊಯ್ಯು. ಜಿತಮಾರ—ಜಿತ—ಜಯಿಸಲ್ಪಟ್ಟ. ಮಾರ—ಮನ್ಮಥನನ್ನುಳ್ಳವನು. (ಬ. ಸ.) ಎಂದರೆ ಮನ್ಮಥನಿಗಿಂತಲೂ ಸುಂದರನಾದವನು. ಎಱಗು—ಮೇಲೆ ಬೀಳು. ಒಱಗು—ಮಲಗು. ಒಱಲು—ಅಳು ; ನರಳು ; ಗೋಳಿಡು. ಸಾವಾಗ—ಸಾಯುವಾಗ. ರನ್ನ—ರತುನ (ದ್ಭ) ರತ್ನ—(ತ್ಸ). ಹೊನ್ನು—ಬಂಗಾರ. ಕೆಡೆ—ಬೀಳು. ಕಡವರ—ಚಿನ್ನ ; ನಿಧಿ. ಸೂಱೆ—ದೋಚುವುದು. ಮುರುಟು – ಕುಗ್ಗು. ಸುರತರು—ಕಲ್ಪವೃಕ್ಷ. ಕೆತ್ತು—ಕತ್ತರಿಸು. ಒಯ್ಯನೆ – ಮೆಲ್ಲನೆ. ಇನವಂಶ – ಸೂರ್ಯವಂಶ. ಉಳಿದು—ಬಿಟ್ಟು. ಕಡಿದು+ಮುಳಿಸು – ಕಡುಮುಳಿಸು (ವಿ. ಪೂ. ಕ. ಸ.).

ಇಱಿ. ಕೊಱೆ, ಬಱಿ, ಒಱಗು. ಒಱಲು. ಸೂಱೆ, ಮುಱಿ, ಇಲ್ಲಿ ಬಳಸಲಾಗಿರುವ 'ಱ'ಕಾರವು ಹಳಗನ್ನಡ ಕಾವ್ಯಗಳಲ್ಲಿ ಮಾತ್ರ ಕಾಣಬರುತ್ತದೆ. ಇದನ್ನು ಶಕಟರೇಫ ಅಥವಾ ಬಂಡಿಯ 'ಱ' ಎಂದು ಕರೆಯುತ್ತಾರೆ. ಇದನ್ನು ಶಂ. ಬಾ. ಜೋಶಿಯವರು 'ಅಱ' ಎಂದು ಕರೆದಿದ್ದಾರೆ. ಹಳಗನ್ನಡದಲ್ಲಿ ಬಳಕೆಯಲ್ಲಿದ್ದ ಈ ಅಕ್ಷರಪ್ರಯೋಗವು ೧೬ನೆಯ ಶತಮಾನದಿಂದ ಈಚೆಗೆ ನಿಂತುಹೋಗಿದೆ.

## ಛಂದಸ್ಸು

ಈ ಪದ್ಯವು ಮಂದಾನಿಲರಗಳೆಯಲ್ಲಿದೆ. ರಗಳೆಗಳಲ್ಲಿ ಮುಖ್ಯವಾಗಿ ಉತ್ಸಾಹ, ಮಂದಾನಿಲ. ಲಲಿತ ಎಂದು ಮೂರು ವಿಧ. ಪ್ರಕೃತ ಮಂದಾನಿಲರಗಳೆಯ ನಿಯಮ ಹೀಗಿದೆ—ರಗಳೆಗಳಲ್ಲಿ ಇಷ್ಟೇ ಸಾಲುಗಳಿರಬೇಕೆಂಬ ನಿಯಮವಿಲ್ಲ. ಆದಿಪ್ರಾಸವಾಗಲಿ, ಅಂತ್ಯಪ್ರಾಸವಾಗಲಿ ಇದ್ದು ನಾಲ್ಕು ಮಾತ್ರೆಯ ನಾಲ್ಕು ಗಣಗಳಿಂದ ಕೂಡಿದ್ದರೆ ಮಂದಾನಿಲರಗಳೆಯೆನಿಸುವುದು.

ಉದಾ.

— ∪ ∪ | — ∪ ∪ | ∪ ∪ ∪ ∪ | — —
ರ ನ್ನ ದ | ಕ ನ್ನ ಡಿ | ಸಿ ಡಿ ದು ದೊ | ದೇ ವಾ

— ∪ ∪ | ∪ ∪ ∪ ∪ | ∪ ∪ ∪ ∪ | — —
ಹೊ ನ್ನ ಕ | ಳ ಶ ಕೆ ಡೆ | ದೊ ಡೆ ದು ದೊ | ದೇ ವಾ

****

## ೧೩. ರವಿಸುತನ ಕಿವಿಯಲಿ ಬಿತ್ತಿದನು ಭಯುವ

—ಕುಮಾರವ್ಯಾಸ

ಇನತನೂಜನ ಕೂಡೆ ಮೈದುನ
ತನದ ಸರಸವನೆಸಗಿ ರಥದಲಿ
ದನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀಠದಲಿ
ಎನಗೆ ನಿಮ್ಮಡಿಗಳಲಿ ಸಮಸೇ
ವನೆಯೆ ದೇವ ಮುರಾರಿಯಂಜುವೆ
ನೆನಲು ತೊಡೆಸೋಂಕಿನಲಿ ಸಾರಿದು ಶೌರಿಯಿಂತೆಂದ ॥೧॥

ಭೇದವಿಲ್ಲೆಲೆ ಕರ್ಣ ನಿಮ್ಮೊಳು
ಯಾದವರು ಕೌರವರೊಳಗೆ ಸಂ
ವಾದಿಸುವಡನ್ವಯಕೆ ಮೊದಲೆರಡಿಲ್ಲ ನಿನ್ನಾಣೆ
ಮೇದಿನೀಪತಿ ನೀನು ಚಿತ್ತದೊ
ಳಾದುದಿಲ್ಲಜಿವೆನುತ ದಾನವ
ಸೂದನನು ರವಿಸುತನ ಕಿವಿಯಲಿ ಬಿತ್ತಿದನು ಭಯುವ ॥೨॥

ದಾನವಾಂತಕ ಬೆಸಸು ವಂಶವಿ
ಹೀನನನು ನಿಮ್ಮಡಿಗಳೊಡನೆ ಸ
ಮಾನಿಸುವರೇ ಸಾಕೆನುತ ತಲೆವಾಗಿ ಕೈಮುಗಿಯೆ
ಮಾನನಿಧಿಯೆನ್ನಾಣೆ ಬಾರೈ
ನೀನು ನಮ್ಮೆಲ್ಲರ ಹವಣೆ ವರ
ಭಾನುವಂಶಲಲಾಮ ನೀ ರಾಮಂಗೆ ಸರಿಯೆಂದ ॥೩॥

ಕಳೆದುಕೊಂಡನು ವೀಳೆಯವನಂ
ಜುಳಿಯಲಾತಂಗಿತ್ತು ಕರ್ಣನ
ಕೆಲಕೆ ಬರಸೆಳೆದವನ ಕರದಲಿ ಕರತಳವನಿಕ್ಕಿ
ಎಲೆ ದಿವಾಕರತನಯ ನಿನ್ನಯ
ಕುಲವನಱಿಯೆಯಲಾ ಸುಯೋಧನ
ನಲಿ ವೃಥಾ ಸೇವಕತನದಲಿಹುದುಚಿತವಲ್ಲೆಂದ ॥ ೪ ॥

ಲಲನೆ ಪಡೆದಾ ಐದು ಮಂತ್ರ
ಗಳಲಿ ಮೊದಲಿಗ ನೀನು ನಿನ್ನಯ
ಬಳಿ ಯುಧಿಷ್ಠಿರದೇವ ಮೂಱನೆಯಾತ ಕಲಿಭೀಮ
ಫಲುಗುಣನು ನಾಲ್ಕನೆಯೊಳೈದನೆ
ಯಲಿ ನಕುಲಸಹದೇವರಾದರು
ಬಳಿಕ ಮಾದ್ರೀದೇವಿಯಲ್ಲಿಯದೊಂದು ಮಂತ್ರದಲಿ ॥ ೫ ॥

ಆದಱಿನೀ ಪಾಂಡವರಲೈವರ
ಮೊದಲಿಗನು ನೀನಿರಲು ಧರಣಿಯು
ಕದನವಿತ್ತಂಡಕ್ಕೆ ಕಾಮಿತವಲ್ಲ ಭಾವಿಸಲು
ಇದು ನಿಧಾನವು ಕರ್ಣ ನಿನ್ನ
ಭ್ಯುದಯವನೆ ಬಯಸುವೆನು ನಿನ್ನಯ
ಪದಕೆ ಕೆಡಹುವೆನೈವರನು ಬಹುದೆನ್ನ ಸಂಗಾತ ॥ ೬ ॥

ನಿನಗೆ ಹಸ್ತಿನಪುರದ ರಾಜ್ಯದ
ಘನತೆಯನು ಮಾಡುವೆನು ಕೌರವ
ಜನಪ ಪಾಂಡವಜನಪರೋಲೈಸುವರು ಗದ್ದುಗೆಯ
ನಿನಗೆ ಕಿಂಕರರೆರಡು ಸಂತತಿ
ಯೆನಿಸಲೊಲ್ಲದೆ ನೀನು ದುರ್ಯೋ
ಧನನ ಬಾಯ್ದಂಬುಲಕೆ ಕೈಯಾನುವರೆ ಹೇಳೆಂದ ॥ ೭ ॥

ಎಡದ ಮೈಯ್ಯಲಿ ಕೌರವೇಂದ್ರನ
ಗಡಣ ಬಲದಲಿ ಪಾಂಡುಪುತ್ರರ
ಗಡಣವಿದಿರಲಿ ಮಾದ್ರಮಾಗಧಯಾದವಾದಿಗಳು

ನಡುವೆ ನೀನೋಲಗದೊಳೊಪ್ಪುವ
ಕಡುವಿಲಾಸವ ಬಿಸುಟು ಕುರುಪತಿ
ನುಡಿಸೆ ಜೀಯ ಹಸಾದವೆಂಬುದು ಕಷ್ಟ ನಿನಗೆಂದ ॥೮॥

ಶೌರಿಯುದಲಿದಿರಿಲ್ಲ ಕುಲದಲಿ
ಸೂರಿಯನ ಸುತನೊಡನೆ ಹುಟ್ಟಿದ
ವೀರರಗ್ಗದ ಪಾಂಡುತನಯರು ನಿನ್ನ ವೈಭವಕೆ
ಆರು ಸರಿಯೈ ಕರ್ಣ ನಡೆ ನಡೆ
ಧಾರಿಣೀಪತಿಯಾಗಿ ನೀನಿರೆ
ವೈರವಿತ್ತಂಡಕ್ಕೆ ಒಳಿಕಿಲ್ಲೆಂದನಸುರಾರಿ ॥೯॥

ಕೊರಳ ಸೆರೆ ಹಿಗ್ಗಿದವು ದೃಗುಜಲ
ವುರವಣಿಸಿ ಕಡುನೊಂದನಕಟಾ
ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ
ಹರಿಯ ಹಗೆ ಹೊಗೆದೋಱದುರುಹದೆ
ಬಱಿದೆ ಹೋಹುದೆ ತನ್ನ ಜನನವ
ನಱುಹಿ ಕೊಂದನು ಹಲವು ಮಾತೇನೆಂದು ಚಿಂತಿಸಿದ ॥೧೦॥

ಕಾದಿ ಕೊಲುವಡೆ ಪಾಂಡುಸುತರು ಸ
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾವಡೆ ಕೌರವಂಗವನಿಯಲಿ ಹೊಗಲಿಲ್ಲ
ಭೇದದಲಿ ಹೊಕ್ಕಿಱಿದನೋ ಮಧು
ಸೂದನನು ತಾನಕಟೆನುತ ಚಿಂ
ತೋದಧಿಯಲದ್ದಂತೆ ಮೌನದೊಳಿದ್ದನಾ ಕರ್ಣ ॥೧೧॥

ಏನು ಹೇಳೈ ಕರ್ಣ ಚಿತ್ತ
ಗ್ಲಾನಿ ಯಾವುದು ನಿನಗೆ ಕುಂತೀ
ಸೂನುಗಳ ಬೆಸಗೈಸಿಕೊಂಬುದು ಸೇರದೇ ಮನಕೆ
ಹಾನಿಯಿಲ್ಲೆನ್ನಾಣೆ ನುಡಿ ದು
ಮ್ಮಾನವೇತಕೆ ಮರುಳುತನ ಬೇ
ಡಾನು ನಿನ್ನಪದೆಸೆಯ ಬಯಸುವನಲ್ಲ ಕೇಳೆಂದ ॥೧೨॥

ಮರುಳು ಮಾಧವ ಸಕಲ ರಾಜ್ಯದ
ಸಿರಿಗೆ ಸೋಲುವನಲ್ಲ ಕೌಂತೇ
ಯರು ಸುಯೋಧನರೆನಗೆ ಬೆಸಗೈವಲ್ಲಿ ಮನವಿಲ್ಲ
ಹೊರೆದ ದಾತಾರಂಗೆ ಹಗೆಗಳ
ಶಿರವನರಿದೊಪ್ಪಿಸುವೆನೆಂಬೀ
ಭರದೊಳಿದ್ದೆನು ಕೌರವೇಂದ್ರನ ಕೊಂದೆ ನೀನೆಂದ ॥೧೩॥

ಒಡನೆ ಹುಟ್ಟಿದರೆಂಬ ಕಥನವ
ನೆಡೆಗೊಡದೆ ಬಣ್ಣಿಸಿದೆ ಪಾಂಡವ
ರಡಗುಬಾಣಕೆ ಬಲಿಯೆನೆಪ್ಪೀ ಛಲವ ಮಾಣಿಸಿದೆ
ನುಡಿದು ಫಲವೇನಿನ್ನು ಕೌರವ
ರೊಡೆಯನಾದಂತಹೆನು ಬಾರೆನು
ಪೊಡವಿಯಲಿ ನೀ ಹರಿಹಿಕೊಳು ನಿನ್ನವರ ನಿಲಿಸೆಂದ ॥೧೪॥

## ಟಿಪ್ಪಣಿ

ಕವಿ–ಕಾವ್ಯ ಪರಿಚಯ :

ಈ ಕಾವ್ಯಭಾಗವನ್ನು ಕುಮಾರವ್ಯಾಸಭಾರತದಿಂದ ಆಯ್ದುಕೊಳ್ಳಲಾಗಿದೆ. ಈ ಗ್ರಂಥವು ಅತ್ಯಂತ ಜನಪ್ರಿಯವಾದ ಕಾವ್ಯ. ಇದನ್ನು ಹಾಡದ ಹಳ್ಳಿಯಿಲ್ಲ, ಕೇಳಿ ನಲಿಯದ ಕನ್ನಡಿಗನಿಲ್ಲ. ಸಂಸ್ಕೃತದಲ್ಲಿ ವೇದವ್ಯಾಸರು ಬರೆದ ಮಹಾಭಾರತದ ಮೊದಲ ಹತ್ತು ಪರ್ವಗಳನ್ನು ಕನ್ನಡಿಸಿರುವ ಈ ಕವಿ ತನ್ನನ್ನು " ಕುಮಾರವ್ಯಾಸ "ನೆಂದು ಸಂಭಾವಿಸಿಕೊಂಡಿದ್ದಾನೆ. ಈತನ ನಿಜವಾದ ಹೆಸರು ನಾರಣಪ್ಪನೆಂದೂ. ಗದುಗಿನ ಬಳಿಯಲ್ಲಿರುವ ಕೋಳಿವಾಡವೆಂಬ ಊರಿನಲ್ಲಿ ಹುಟ್ಟಿದವನೆಂದೂ. ಗದುಗಿನ ವೀರನಾರಾಯಣಸ್ವಾಮಿಯ ಪರಮಭಕ್ತನಾಗಿದ್ದುಕೊಂಡು, ಆ ಸ್ವಾಮಿಯ ಅಂಕಿತದಿಂದ ತನ್ನ ಭಾರತವನ್ನು ಬರೆದಿರುವನೆಂದೂ ತಿಳಿದುಬರುತ್ತದೆ. ಈತನ ಕಾಲ ಸುಮಾರು ೧೪೩೦.

ವನವಾಸ, ಅಜ್ಞಾತವಾಸಗಳನ್ನು ಮುಗಿಸಿದ ಪಾಂಡವರು ತಮ್ಮ ಭಾಗದ ಅರ್ಧ ರಾಜ್ಯವನ್ನು ಹಿಂದಕ್ಕೆ ಕೊಡುವಂತೆ ಸಂಧಾನ ನಡೆಸಲು, ತಮ್ಮ ರಾಯಭಾರಿ ಶ್ರೀಕೃಷ್ಣನನ್ನು ಹಸ್ತಿನಾವತಿಗೆ ಕಳುಹಿಸಿದರು. ಆದರೆ ದುರ್ಯೋಧನ ಸಂಧಿಗೆ ಒಪ್ಪಲಿಲ್ಲ. ತನ್ನ ಸಂಧಿಕಾರ್ಯದಲ್ಲಿ ವಿಫಲನಾದ ಶ್ರೀಕೃಷ್ಣನು ಹಸ್ತಿನಾವತಿಯಿಂದ ಹಿಂದಿರುಗುವ ಸಂದರ್ಭದಲ್ಲಿ ದುರ್ಯೋಧನನ ಆಪ್ತಮಿತ್ರನಾದ ಕರ್ಣನನ್ನು ತನ್ನೊಡನೆ ಕೆಲದೂರ ಕರೆದೊಯ್ದು ಆತನು ಪಾಂಡವರಲ್ಲಿ ಹಿರಿಯನೆಂಬ ಜನ್ಮವೃತ್ತಾಂತವನ್ನು ಅರುಹಿ, ಆತನನ್ನು ಪಾಂಡವರ

ಪಕ್ಷಕ್ಕೆ ಸೆಳೆಯಲು ಪ್ರಯತ್ನಿಸುತ್ತಾನೆ. ಆದರೆ ಮಹಾನುಭಾವನಾದ ಕರ್ಣನು ತನ್ನ ಸ್ವಾಮಿಯಾದ ದುರ್ಯೋಧನನಿಗೆ ದ್ರೋಹ ಬಗೆಯಲಾರನೆಂದು ಹೇಳಿ, ತನ್ನ ಸ್ವಾಮಿಭಕ್ತಿ ಮತ್ತು ಧರ್ಮಾನುರಕ್ತಿಗಳನ್ನು ಮನೋಜ್ಞವಾಗಿ ಪ್ರದರ್ಶಿಸುತ್ತಾನೆ. ಈ ಭಾಗದಲ್ಲಿ ಕಾಣಬರುವ ಶ್ರೀಕೃಷ್ಣನ ರಾಜಕೀಯಚಾತುರ್ಯವೂ, ಕರ್ಣನ ವ್ಯಕ್ತಿತ್ವದ ಔನ್ನತ್ಯವೂ ಲೋಕೋತ್ತರವಾಗಿವೆ. ಕಾವ್ಯದೃಷ್ಟಿಯಿಂದಲೂ ಇದೊಂದು ರಸಘಟ್ಟ.

ಕಠಿಣಪದಗಳ ಅರ್ಥ:

ಪದ್ಯ ೧. ಇನತನೂಜ—(ಇನ—ಸೂರ್ಯ: ತನೂಜ—ಮಗ) ಸೂರ್ಯನ ಮಗ ಕರ್ಣ. ದನುಜರಿಪು—(ದನುಜ—ರಾಕ್ಷಸರ : ರಿಪು—ಶತ್ರು ) ಶ್ರೀಕೃಷ್ಣ. ಬರಸೆಳೆದು—ಹತ್ತಿರಕ್ಕೆ ಎಳೆದುಕೊಂಡು. ಸಮಸೇವನೆಯ—ಸಮಾನವಾದ ಗೌರವವೇ. ಮುರಾರಿ—(ಮುರ + ಅರಿ (ಸ. ದೀ. ಸಂ.) ಮುರನೆಂಬ ರಾಕ್ಷಸನ ವೈರಿ ) ಶ್ರೀಕೃಷ್ಣ. ಸಾರಿದು—ಸಮೀಪಿಸಿ. ಶೌರಿ—ಶ್ರೀಕೃಷ್ಣ.

ಪದ್ಯ ೨. ಯಾದವರು—ಯದುವಂಶದವರು (ಶ್ರೀಕೃಷ್ಣನ ವಂಶ). ಅನ್ವಯ—ವಂಶ. ಮೊದಲೆರಡಿಲ್ಲ—ಇದು ಮೊದಲು, ಅನಂತರ ಇದು ಎರಡನೆಯದು ಎಂಬ ಭಾವನೆಯಿಲ್ಲ. ಮೇದಿನೀಪತಿ—(ಮೇದಿನಿ—ಭೂಮಿಗೆ ; ಪತಿ—ಒಡೆಯ ) ರಾಜ. ಅಱಿವು—ತಿಳುವಳಿಕೆ. ದಾನವಸೂದನ—(ದಾನವ—ರಾಕ್ಷಸರನ್ನು ; ಸೂದನ—ನಾಶಮಾಡಿದವನು) ಶ್ರೀಕೃಷ್ಣ. ರವಿಸುತ—ಸೂರ್ಯನ ಮಗ ; ಕರ್ಣ. ಬಿತ್ತಿದನು—ಉಂಟುಮಾಡಿದನು (ಭಯವನ್ನು ಮನಸ್ಸಿನಲ್ಲಿ ನಾಟಿದನು. ಭೂಮಿಯಲ್ಲಿ ಬೀಜವನ್ನು ಬಿತ್ತುವಂತೆ ಭಯವನ್ನು ಕರ್ಣನ ಕಿವಿಯಲ್ಲಿ ಶ್ರೀಕೃಷ್ಣನು ಬಿತ್ತಿದನಂತೆ. ಬಿತ್ತಿದುದು ಬೆಳೆಯುತ್ತದೆ. ಅದರಂತೆಯೇ ಇಂದು ಶ್ರೀಕೃಷ್ಣನು ಕರ್ಣನ ಕಿವಿಯಲ್ಲಿ ಹಾಕಿದ ಮಾತು ವೃದ್ಧಿಗೊಂಡು ಶ್ರೀಕೃಷ್ಣನ ಇಷ್ಟಾರ್ಥ ಸಿದ್ಧಿಯಾಗುತ್ತದೆ.)

ಪದ್ಯ ೩. ದಾನವಾಂತಕ—ರಾಕ್ಷಸರಿಗೆ ಯಮನಂತಿರುವವನು, ಶ್ರೀಕೃಷ್ಣ. ವಂಶವಿಹೀನ—ಕೀಳು ವಂಶದವನು. ಸಮಾನಿಸು—ಗೌರವಿಸು. ತಲೆವಾಗು—ತಲೆಯಂ + ಬಾಗು (ಕ್ರಿ. ಸ.) ನಮಸ್ಕರಿಸು. ಕೈಮುಗಿ—ಕೈಯಂ + ಮುಗಿ (ಕ್ರಿ.ಸ.). ಮಾನನಿಧಿ—ಮಾನವನ್ನೇ-ಗೌರವವನ್ನೇ ಐಶ್ವರ್ಯವನ್ನಾಗಿ ಉಳ್ಳವನು ; ಕರ್ಣ. ಹವಣು—ಪ್ರಮಾಣ ; ಸಮಾನ. ವರ—ಶ್ರೇಷ್ಠ. ಭಾನುವಂಶಲಲಾಮ—ಸೂರ್ಯವಂಶದಲ್ಲಿ ಶ್ರೇಷ್ಠ. ರಾಮಂಗೆ ಸರಿ—ಶ್ರೀರಾಮನು ಸೂರ್ಯವಂಶಕ್ಕೆ ಸೇರಿದವನು. ಆದ್ದರಿಂದ ಆತನೂ, ಸೂರ್ಯನ ಮಗನಾದ ಕರ್ಣನೂ ಸಮಾನರು.

ಪದ್ಯ ೪. ಅಂಜುಳಿ—ಬೊಗಸೆ. ಕೆಲಕೆ—ಪಕ್ಕಕ್ಕೆ. ದಿವಾಕರತನಯ—ಸೂರ್ಯನ ಮಗ; ಕರ್ಣ. ಕುಲ—ವಂಶ.

ಪದ್ಯ ೫. ಲಲನೆ—ಹೆಂಗಸು (ಕುಂತಿ). ನಿನ್ನಯ ಬಳಿ—ನಿನ್ನ ಅನಂತರ ; ನೀನು ಜನಿಸಿದ ನಂತರ. ಕಲಿ—ವೀರ. ಫಲುಗುಣ—ಅರ್ಜುನ.

ಪದ್ಯ ೬. ಅದಱಿಂ—ಆ ಕಾರಣದಿಂದ. ಪಾಂಡವರಲ್ಲೈವರ — ಪಾಂಡವರಲಿ + ಐವರ (ವೃ.ಸಂ.) ಧರಣಿ—ಭೂಮಿ. ಕದನ—ಯುದ್ಧ. ಇತ್ತಂಡ—ಎರಡು + ತಂಡ; ಎರಡು ಗುಂಪು; ಪಾಂಡವರು ಮತ್ತು ಕೌರವರ ಗುಂಪು. ಕಾಮಿತವಲ್ಲ—ಅಪೇಕ್ಷಿತವಲ್ಲ. ನಿಧಾನ—ನಿಶ್ಚಯ. ಅಭ್ಯುದಯ—ಏಳಿಗೆ. ಸಂಗಾತ – ಜೊತೆ ; ಸಂಗಡ. ಘನತೆ— ಹಿರಿಮೆ ; ಗೌರವ. ಜನಪ— (ಜನ—ಜನರನ್ನು. ಪ— ಪಾಲಿಸುವವನು) ; ರಾಜ. ಓಲೈಸು—ಸೇವಿಸು. ಗದ್ದುಗೆ— ಸಿಂಹಾಸನ.

ಪದ್ಯ ೭. ಕಿಂಕರ—ಸೇವಕ. ಸಂತತಿ—ವಂಶ. ಬಾಯ್ದಂಬುಲ—ಬಾಯ + ತಂಬುಲ (ಆ. ಸಂ.) ; ಎಂಜಲು. ಕೈಯಾನು—ಕೈಯೊಡ್ಡು ; ಕೈಚಾಚು.

ಪದ್ಯ ೮. ಗಡಣ—ಗುಂಪು. ಮಾದ್ರು—ಮದ್ರದೇಶದ ದೊರೆ ; ಶಲ್ಯ. ವಿಲಾಸ—ವೈಭವ. ಹಸಾದ—ಅಪ್ಪಣೆ. ಜೀಯ—ಒಡೆಯ.

ಪದ್ಯ ೯. ಶೌರಿಯ—ಶೌರ್ಯ ; ಪರಾಕ್ರಮ ; ಶೌರ್ಯ ಎಂಬುದನ್ನು ಶೌರಿಯ ಎಂದು ಬಿಡಿಸಿ ಹೇಳುವುದು ನಡುಗನ್ನಡದ ಒಂದು ವೈಶಿಷ್ಟ್ಯ. ಸೂರಿಯ—ಸೂರ್ಯ. ಅಗ್ಗದ— ಶ್ರೇಷ್ಠವಾದ.

ಪದ್ಯ ೧೦. ಕೊರಳಸೆರೆ—ಗಂಟಲಿನ ನರ. ದೃಗುಜಲ—ದೃಕ್ + ಜಲ ; ಕಣ್ಣೀರು. ಉರವಣಿಸು–ಒತ್ತಿಬರು. ಅಕಟಾ—ಅಯ್ಯೋ (ಅ.). ಹಗೆ—ಶತ್ರುತ್ವ ; ದ್ವೇಷ. ಹೊಗೆದೋಱು —ಹೊತ್ತಿ ಹೊಗೆಯಾಡು ; ಮತ್ಸರ ಬೆಳೆ. ಉರುಹದೆ— ಸುಡದೆ.

ಪದ್ಯ ೧೧. ಕಾದೆನಾದೊಡೆ—ರಕ್ಷಿಸದೆ ಹೋದರೆ. ಅವನಿ—ಭೂಮಿ. ಹೊಗಲಿಲ್ಲ— ಇರಲವಕಾಶವಿಲ್ಲ. ಮಧುಸೂದನ—ಶ್ರೀಕೃಷ್ಣ. ಚಿಂತೋದಧಿ —ಚಿಂತೆಯೆಂಬ ಸಮುದ್ರ. ಅದ್ದು—ಮುಳುಗು. (ಕರ್ಣನಿಗೆ ಧರ್ಮಸಂಕಟವಾಗಿದೆ. ಯುದ್ಧಮಾಡಿ ಪಾಂಡವರನು ಕೊಲ್ಲೋಣವೆಂದರೆ ಪಾಂಡವರು ಸಹೋದರರು. ಯುದ್ಧಮಾಡದೆ ಹೋದರೆ ಸುಯೋಧನನು ಭೂಮಿಯಲ್ಲಿ ಉಳಿಯುವಂತಿಲ್ಲ. ಶ್ರೀಕೃಷ್ಣನು ಜನ್ಮವೃತ್ತಾಂತವನ್ನು ಹೇಳಿ ನನ್ನನ್ನು ಕೊಂದನು.—ಎಂಬುದಾಗಿ ಕರ್ಣನು ಚಿಂತೆಗೊಳಗಾದನು.)

ಪದ್ಯ ೧೨. ಚಿತ್ತಗ್ಲಾನಿ—ಮನೋದೌರ್ಬಲ್ಯ. ಬೆಸಗೈಸಿಕೊಂಬುದು—ಸೇವೆಮಾಡಿಸಿ ಕೊಳ್ಳುವುದು. ದುಮ್ಮಾನ—ದುಃಖ. ಮರುಳುತನ ಹುಚ್ಚುತನ. ಅಪದೆಸೆ—ನಾಶ.

ಪದ್ಯ ೧೩. ಮರುಳು—ಹುಚ್ಚು; ಭ್ರಾಂತಿ. ಹೊರೆದ —ಸಾಕಿದ, ಕಾಪಾಡಿದ. ದಾತಾರ—ಯಜಮಾನ ; ಒಡೆಯ. ಭರ—ಉತ್ಸಾಹ.

ಪದ್ಯ ೧೪. ಎಡೆಗೊಡದೆ—ಅವಕಾಶಕೊಡದೆ. ಬಣ್ಣಿಸು—ವರ್ಣಿಸು (ತ್ಸ). ಅಡಗು—ಮಾಂಸ. ಮಾಣಿಸದೆ—ಹೋಗಲಾಡಿಸದೆ. ಕೌರವರೊಡೆಯ—ದುರ್ಯೋಧನ; ಹರಹು—ವಿಸ್ತರಿಸು. ಪೊಡವಿ—ಭೂಮಿ.

ಪ್ರಶ್ನೆಗಳು :

೧. ಶ್ರೀಕೃಷ್ಣನು ಕರ್ಣನ ಕಿವಿಯಲ್ಲಿ ಯಾವ ಭಯವನ್ನು ಬಿತ್ತಿದನು ?
೨. ಶ್ರೀಕೃಷ್ಣನು ಕರ್ಣನನ್ನು ವಶಪಡಿಸಿಕೊಳ್ಳಲು ಒಡ್ಡಿದ ಆಸೆಗಳೇನು ?
೩. ತಾನು ಪಾಂಡವರ ಹಿರಿಯನೆಂದು ತಿಳಿದಾಗ ಕರ್ಣನ ಮನಸ್ಸಿನಲ್ಲಿ ಉಂಟಾದ ಭಾವನೆಗಳಾವುವು ?
೪. ಶ್ರೀಕೃಷ್ಣನ ಪ್ರಶ್ನೆಗೆ ಕರ್ಣನ ಉತ್ತರವೇನು ? ವಿವರಿಸಿರಿ.
೫. ಇಲ್ಲಿ ಬಂದಿರುವ ಕಥೆಯನ್ನು ಸಂಭಾಷಣಾರೂಪದಲ್ಲಿ ಬರೆಯಿರಿ.

ಈ ಮಾತುಗಳ ಅರ್ಥವನ್ನು ಸಂದರ್ಭಸಹಿತ ಸ್ಪಷ್ಟೀಕರಿಸಿರಿ :

೧. " ವಂಶವಿಹೀನನನು ನಿಮ್ಮಡಿಗಳೊಡನೆ ಸಮಾನಿಸುವರೇ "
೨. " ಮೊದಲಿಗನು ನೀನಿರಲು ಧರಣಿಯ ಕದನವಿತ್ತಂಡಕ್ಕೆ ಕಾಮಿತವಲ್ಲ "
೩. " ದುರ್ಯೋಧನನ ಬಾಯ್ದಂಬುಲಕೆ ಕೈಯಾನುವರೆ "
೪. " ತನ್ನ ಜನನವನರುಹಿ ಕೊಂದನು "
೫ " ಭೇದದಲಿ ಹೊಕ್ಕಿರಿದನೋ ಮಧುಸೂದನನು "
೬. " ಕೌರವರೊಡೆಯನಾದಂತಹೆನು, ಬಾರೆನು "

ಇವುಗಳ ಅವಯವಾರ್ಥಗಳನ್ನು ಬರೆಯಿರಿ :

ತನೂಜ, ಮುರಾರಿ, ದಾನವಾಂತಕ, ಜನಪ.

ಈ ಪದಗಳನ್ನು ಬಿಡಿಸಿ ಸಂಧಿಯನ್ನು ತಿಳಿಸಿರಿ :

ನಿಮ್ಮಡಿ. ನಿನ್ನಾಣೆ, ಬಾಯ್ದಂಬುಲ. ಕೈಯಾನು. ಚಿಂತೋದಧಿ.

ವಿಗ್ರಹವಾಕ್ಯ ಬರೆದು ಸಮಾಸವನ್ನು ಹೇಳಿರಿ :

ಕೈಮುಗಿ, ನಕುಲಸಹದೇವ, ಕುರುಪತಿ.

****

## ೧೪. ಮುಳ್ಳಿಡಿದ ಮರನೇಱಿದಂತಾದುದು

—ಲಕ್ಷ್ಮೀಶ

ಆಲಿಸರ್ಜುನ ಮುನ್ನ ವಿಪ್ರನುಂಟೋರ್ವನು
ದ್ದಾಲಕಾಖ್ಯಂ ತಿಳಿದನಖಿಲಶಾಸ್ತ್ರಂಗಳಂ
ಮೇಲೆ ವೈವಾಹದೊಳ್ ವಧುವಾದಳಾತಂಗೆ ಚಂಡಿಯೆಂಬಾಕೆ ಬಳಿಕ
ಕಾಲಕಾಲದ ಜಪಾನುಷ್ಠಾನಪೂಜೆಗಳಿ
ಗಾಲಸ್ಯಮಂ ಮಾಡದೆನ್ನ ಪರಿಚರ್ಯೆಗನು
ಕೂಲೆಯಾಗಿರ್ದು ಮನೆವಾಳ್ತೆಯಂ ಸಾಗಿಪುದು ನೀನೆಂದೊಡಿಂತೆಂದಳು ॥೧॥

ಎಳ್ಳನಿತು ನಿನ್ನ ಮಾತಂ ಕೇಳ್ವಳೆಂದೆಣಿಕೆ
ಗೊಳ್ಳದಿರ್ ಪರಿಚರ್ಯೆ ಮನೆವಾಳ್ತೆಯೆಂದೆಂಬ
ತಳ್ಳಿಯವಳಲ್ಲ ನೀನೆಂದುದಂ ಮಾಡೆನೆಂದಾ ಚಂಡಿ ಚಂಡಿಪೋರೆ
ಮುಳ್ಳಿಡಿದಮರನೇಱಿದಂತಾದುದಿಹಪರಕಿ
ದೊಳ್ಳಿತಾದಪುದೆ ಬಂದುದು ತಪೋಹಾನಿಯೆಂ
ದಳ್ಳೆಯೊಳ್ ಕೋಲ್ಗೊಂಡ ತೆಱದಿಂದ ಮರುಗಿ ಚಿಂತಿಪನವಂ
ಪ್ರತಿದಿನದೊಳು ॥೨॥

ಇಂತಿರುತಿರಲ್ಕೆ ಕೌಂಡಿನ್ಯನೆಂಬೊರ್ವ ಮುನಿ
ಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ
ಚಿಂತೆವೆತ್ತಿರಲವನಿದೇನೆಂದು ಬೆಸಗೊಂಡೊಡವಳ ಪ್ರತಿಕೂಲತೆಯನು
ಅಂತರಿಸದೆಲ್ಲಮಂ ಪೇಳ್ದೊಡವನಿದಕೆ ನೀಂ
ಮುಂತೆ ವಿಪರೀತಮಂ ಮಾಡಲಾದಪುದೆಂದು
ಸಂತಾಪಮಂ ಬಿಡಿಸಿ ಬೀಳ್ಕೊಂಡವಂ ತೀರ್ಥಯಾತ್ರೆಗೈದಿದನತ್ತಲು ॥೩॥

ಉದ್ದಾಲಕಂ ಬಳಿಕ ತನ್ನ ಮಂದಿರದೊಳಿರು
ತ್ತಿದ್ದ ಸಮಯಕೆ ಪಿತೃಶ್ರಾದ್ಧದಿವಸಂ ಬಂದೊ
ಡೆದ್ದು ಚಂಡಿಯೊಳೆಲಗೆ ನಾಳೆ ಪೈತೃಕಮದಂ ನಾಡಿದಲ್ಲದೆ ಮಾಡೆನು
ಕದ್ದು ತಹೆನಧಮಧಾನ್ಯವ್ರೀಹಿಶಾಕಮಂ
ಪೊದ್ದಲೀಯೆಂ ಶುದ್ಧವಸ್ತುಗಳನೊಂದುಮಂ
ತದ್ದಿನಕೆ ಮರುದಿವಸದೊಳ್ ಪೇಳ್ದು ಬಹೆನಪಾತ್ರಂಗೆಂದೊಡಿಂತೆಂದಳು ||೪||

ನಾಳೆ ಮಾಡಿಸುವೆನಾಂ ಪೈತೃಕವನುತ್ತಮದ
ಶಾಲಿಧಾನ್ಯವ್ರೀಹಿಶಾಕಮಂ ಕೊಂಡು ಬಹೆ
ನಾಲಯುವನತಿಶುದ್ಧವಾದ ವಸ್ತುಗಳಿನಲ್ಲದೆ ಕೂಡೆನಳ್ತಿಯಿಂದ
ಪೇಳಿಸುವೆನಂದಿನ ದಿನದ ಮೊದಲ ರಾತ್ರಿಯೆ ವಿ
ಶಾಲಗುಣಸಂಪನ್ನವೇದಪಾರಂಗತಸು
ಶೀಲರಹ ಸತ್ಪಾತ್ರದವನಿಯಮರರ್ಗೆನಲ್ ಚಂಡಿಗವನಿಂತೆಂದನು ||೫||

ಆದೊಡೆ ಕುತುಪಕಾಲಮಂ ಬಿಡುವೆನರ್ಚನೆಯೊ
ಳಾದರಿಸೆನಾಂ ಬಂದ ವಿಪ್ರರಂ ಪಾಕದ ಸ
ವೋದನಸುಪಾಯಸಗುಡಾಜ್ಯಮಧುತೈಲಮೃದುಭಕ್ಷ್ಯಭೋಜ್ಯಾದಿಗಳನು
ಸ್ವಾದುಫಲಶರ್ಕರವಿನುತಶಾಕನಿರ್ಮಲಪ
ಯೋದಧಿಗಳಂ ಸುಕುತ್ಸಿತಮಾಗದಂತೆ ಸಂ
ಪಾದಿಸಿ ಪಿತೃಶ್ರಾದ್ಧಮಂ ಮಾಡಿ ವಸ್ತ್ರದಕ್ಷಿಣೆಗಳಂ ಕೊಡೆನೆಂದನು ||೬||

ಎಂದೊಡೆ ಕುತುಪಕಾಲಮಂ ಮೀಱಲೀಯೆನಾಂ
ಬಂದ ವಿಪ್ರರನಾದರಿಸಿ ಪೂಜೆಗೈಸದಿರೆ
ನಿಂದೊಲ್ಲೆನೆಂದೊಕ್ಕಣಿಸಿದಿನಿತನೆಲ್ಲಮಂ ಸಂಪಾದಿಸದೆ ಮಾಣೆನು
ತಂದಮಲವಸ್ತ್ರತಾಂಬೂಲವರದಕ್ಷಿಣೆಗ
ಳಿಂದೆ ಸತ್ಕರಿಸಿ ಕಳುಹಿಸದೆ ಬಿಡೆನೆನುತೆ ನಲ
ವಿಂದೊದವಿಸಿರ್ದಖಿಲಸದ್ದ್ರವ್ಯಮಂ ಬಳಿಕ ಚಂಡಿ ಪಾಕಂಗೈದಳು ||೭||

ಕಂಡನೀ ತೆರನನುದ್ದಾಲಕಂ ಸಂತಸಂ
ಗೊಂಡು ಮನದೊಳ್ಪೊಱಗೆ ತಾನೊಪ್ಪದವನಾಗಿ
ಚಂಡಿ ಹೇಳಿದವೊಲಾ ಶ್ರಾದ್ಧಮಂ ಮಾಡಿ ಸಂಪ್ರೀತಿಯಿಂ ವಿಪರೀತದ

ತೊಂಡುತೊಳಸಂ ಮುಚಿದು ಕರ್ಮಾಂಗಮಾಗಿರ್ದ
ಪಿಂಡಮಂ ತೆಗೆದು ಮಡುವಿನೊಳೆ ಹಾಯ್ಕೆಂದೊಡು
ದ್ದಂಡದಿಂದೆತ್ತಿ ಬೀದಿಗೆ ಬಿಸುಡಲಾ ದ್ವಿಜಂ ರೋಷಭೀಷಣನಾದನು ॥೮॥

ಎಲಗೆ ನಿನ್ನೊಡನೆ ನಾನೇಂ ಹಗೆಯ ಹೋರುವೆಂ
ಛಲತನಕಲಸಿದೆ ನೀನಜಿಯಾಗಿ ಹೋಗೆಂದು
ಸಲೆ ಮುಳಿದು ಶಾಪಮಂ ಕೊಟ್ಟು ಕಾರುಣ್ಯದಿಂದಾ ದ್ವಿಜಂ ಕೂಡೆ ತಿಳಿದು
ಕೆಲವು ಕಾಲಕೆ ನಿನ್ನೊಳಧ್ವರಹಯಂ ಬಂದು
ನಿಲಲರ್ಜುನಂ ಬಿಡಿಸಿದೊಡೆ ಮೋಕ್ಷಮಹುದೆಂದು
ತೊಲಗಿದಂ ಸಂನ್ಯಾಸಕವನತ್ತಲವನಿಯೊಳ್ ಕಲ್ಲಾದಳಿವಳಿತ್ತಲು ॥೯॥

## ಟಿಪ್ಪಣಿ

**ಕವಿ–ಕಾವ್ಯ ಪರಿಚಯ :**

ಈ ಪದ್ಯಗಳನ್ನು ಲಕ್ಷ್ಮೀಶಕವಿಯ "ಜೈಮಿನಿಭಾರತ"ದಿಂದ ಆಯ್ದುಕೊಳ್ಳಲಾಗಿದೆ. ಈ ಕವಿಯ ಕಾಲ ದೇಶಗಳ ವಿಚಾರ ಸಾಕಷ್ಟು ಚರ್ಚಾಸ್ಪದವಾಗಿದೆ. ತನ್ನ ವಿಚಾರವಾಗಿ ಕವಿಯೇ ತನ್ನ ಕಾವ್ಯದಲ್ಲಿ ಹೇಳಿಕೊಂಡಿರುವಷ್ಟರಿಂದ ಈತನು ಅಣ್ಣಮಾಂಕನೆಂಬುವನ ಮಗನೆಂದೂ, "ಕರ್ನಾಟಕಕವಿಚೂತವನಚೈತ್ರ"ನೆಂದು ಆತನಿಗೆ ಬಿರುದಿದ್ದಿತೆಂದೂ, ದೇವಪುರದ ಲಕ್ಷ್ಮೀರಮಣನು ಆತನ ಆರಾಧ್ಯದೈವವೆಂದೂ ನಮಗೆ ಗೊತ್ತಾಗುತ್ತದೆ. ಕಡೂರು ಜಿಲ್ಲೆಯಲ್ಲಿರುವ ದೇವನೂರು ಅವನ ಜನ್ಮಸ್ಥಳ. ಈ ದೇವನೂರೇ ದೇವಪುರವೆಂದು ಬಹುಜನ ಪಂಡಿತರ ಅಭಿಪ್ರಾಯ. ಆತನ ಕಾಲದ ವಿಚಾರದಲ್ಲಿ ನಿರ್ದಿಷ್ಟವಾದ ಅಭಿಪ್ರಾಯವನ್ನು ಕೊಡುವುದು ಕಷ್ಟ. ಕ್ರಿ. ಶ. ೧೬೦೦ ರಲ್ಲಿದ್ದ ಗೋಪಕವಿ ತನ್ನ 'ನಂದಿಮಹಾತ್ಮ್ಯ' ಎಂಬ ಕಾವ್ಯದಲ್ಲಿ ಲಕ್ಷ್ಮೀಶನನ್ನು ಸ್ತುತಿಸಿರುವುದರಿಂದ ಲಕ್ಷ್ಮೀಶಕವಿಯು ಅದಕ್ಕೂ ಪೂರ್ವದವನೆಂಬುದು ನಿರ್ವಿವಾದ. ಆತನು ವಿಜಯನಗರದ ಕೃಷ್ಣದೇವರಾಯನ ಕಾಲದವನೆಂದೂ ಊಹಿಸುವುದಕ್ಕೆ ಅವಕಾಶವಿರುವುದರಿಂದ ಆತನ ಕಾಲವನ್ನು ಸುಮಾರು ೧೫೩೦ ಎಂದು ಇಟ್ಟುಕೊಳ್ಳಲಾಗಿದೆ.

ಲಕ್ಷ್ಮೀಶನ 'ಜೈಮಿನಿಭಾರತ'ವು ಅತ್ಯಂತ ಜನಪ್ರಿಯವಾದ ಕನ್ನಡಕಾವ್ಯಗಳಲ್ಲಿ ಒಂದಾಗಿದೆ. ಪಂಡಿತಪಾಮರರಿರ್ವರನ್ನೂ ಏಕಕಾಲದಲ್ಲಿ ಸಂತೋಷಪಡಿಸಬಲ್ಲ ಪ್ರತಿಭೆ ಲಕ್ಷ್ಮೀಶನದು. ಈತನ ಕಾವ್ಯ ಭಕ್ತಿಭರಿತವಾಗಿದೆ, ನವರಸಪೂರ್ಣವಾಗಿದೆ. ಹೃದಯಸ್ಪರ್ಶಿಯಾದ ವರ್ಣನೆಗಳಿಂದ ತುಂಬಿದೆ, ಈತನ ಕಾವ್ಯ. ಈತನ ಉಪಮೆಗಳಂತೂ ಮನೋಜ್ಞವಾಗಿವೆ. ಆದ್ದರಿಂದಲೇ ಕವಿಗೆ "ಉಪಮಾಲೋಲ"ನೆಂಬ ಪ್ರಶಸ್ತಿ ಬಂದಿದೆ. ಹಾಗೆಯೇ ಈತನ

ಪದಪ್ರಯೋಗ ಅತ್ಯಂತ 'ನಾದಮಯವಾಗಿದ್ದು'. 'ನಾದಲೋಲ 'ನೆಂಬ ಮೆಚ್ಚುನುಡಿಗೆ ಕವಿ ಪಾತ್ರನಾಗಿದ್ದಾನೆ. ವಸ್ತು, ಪಾತ್ರ, ರಸ—ಈ ಮೂರು ದೃಷ್ಟಿಯಿಂದಲೂ ಕವಿ ಲಕ್ಷ್ಮೀಶನ ಕಾವ್ಯ ಶ್ರೇಷ್ಠವಾಗಿದೆ. ಈತನು ಅತ್ಯಂತ ಜನಪ್ರಿಯನಾಗಿರುವುದಕ್ಕೆ ಉಳಿದೆಲ್ಲ ಕಾರಣ ಗಳಿಗಿಂತ ಈತನು ಒಳ್ಳೆಯ ಕತೆಗಾರನಾಗಿರುವುದೇ ಮುಖ್ಯಕಾರಣವೆಂದು ತೋರುತ್ತದೆ. ಈತನ ಕಾವ್ಯವು ಆದಿಯಿಂದ ಅಂತ್ಯದವರೆಗೆ ಕಥೆಯ ಮೇಲೆ ಕಥೆಯನ್ನು ಒಳಗೊಂಡ ಒಂದು ಕಥಾಸರಿತ್ಸಾಗರ. ಆ ಕಥೆಗಳಲ್ಲಿ ಒಂದಾದ ಚಂಡಿಯ ಕಥೆ ಇಲ್ಲಿ ಬಂದಿದೆ. ಇದು ಅತ್ಯಂತ ಸಂಗ್ರಹವಾಗಿ, ಸಾರವತ್ತಾಗಿ, ರಸಭರಿತವಾಗಿದೆ. ವಿರಸ ದಾಂಪತ್ಯದ ಚಿತ್ರಕಥೆಯು ಉದ್ದಕ್ಕೂ ಓದುಗರನ್ನು ಹಾಸ್ಯರಸದಲ್ಲಿ ತೇಲಿಸಿಕೊಂಡು ಹೋಗುತ್ತದೆ. ಮುಕ್ತಾಯದಲ್ಲಿ ಮಾತ್ರ ಅನಿರೀಕ್ಷಿತವಾದ ನಿಷ್ಠುರಘಟನೆ ಬರಸಿಡಿಲಿನಂತೆ ಬಂದೆರಗುತ್ತದೆ.

ಕಠಿಣಪದಗಳ ಅರ್ಥ :

ಪದ್ಯ ೧. ಆಲಿಸು—ಕೇಳು. ವಿಪ್ರನುಂಟೋರ್ವನು—(ವಿಪ್ರನು + ಉಂಟು + ಓರ್ವನು.) ಒಬ್ಬ ಬ್ರಾಹ್ಮಣ ಇದ್ದಾನೆ. ಆಖ್ಯ—ಹೆಸರು. ವೈವಾಹದೊಳ್—ಮದುವೆಯಲ್ಲಿ. ವಧು—ಮದುವೆಯ ಹೆಣ್ಣು. ಜಪಾನುಷ್ಠಾನ—ಜಪದ ಆಚರಣೆ. ಪರಿಚರ್ಯೆ—ಸೇವೆ. ಮನೆವಾಳ್ತೆ—ಮನೆಗೆಲಸ.

ಪದ್ಯ ೨. ಎಣಿಕೆಗೊಳ್—ಎಣಿಕೆಯಂ+ಕೊಳ್ (ಕ್ರಿ. ಸ.)—ಲೆಕ್ಕಹಾಕು ; ಯೋಚಿಸು. ತಳ್ಳಿ—ತಂಟೆ ; ಸಂಬಂಧ. ನೀನೆಂದುದಂ—ನೀನು + ಎಂದುದಂ—ನೀನು ಹೇಳಿದುದನ್ನು. ಚಂಡಿ—ಹಟವಾದಿನಿ. ಪೋರೆ—ಹೋರಾಡಲು. ಜಗಳವಾಡಲು ; ಮುಳ್ಳಿಡಿದ—ಮುಳ್ಳು + ಇಡಿದ—ಮುಳ್ಳುಗಳಿಂದ ತುಂಬಿದ. ಏರು—ಹತ್ತು. ಇಹ—ಈಲೋಕ ; ಭೂಲೋಕ. ಪರ—ಸ್ವರ್ಗ. ಒಳ್ಳಿತಾದಪ್ಪುದೆ—ಒಳ್ಳಿತು+ಆದಪ್ಪುದೆ—ಒಳ್ಳೆಯದು ಆಗುವುದೆ. ತಪೋಹಾನಿ-ತಪಸ್ಸಿನ ಭಂಗ. ಅಳ್ಳೆಯೊಳ್—ಕಿಬ್ಬದಿಯಲ್ಲಿ. ಕೋಲ್ಗೊಂಡ ತೆರದಲಿ—ಬಾಣವು ಚುಚ್ಚಿಕೊಂಡಂತೆ. "ಮುಳ್ಳಿಡಿದ ಮರನೇಱಿದಂತಾದುದು" ಎಂಬಲ್ಲಿ ಉಪಮಾಲಂಕಾರವಿದೆ. ಇಲ್ಲಿ ಮುಳ್ಳಿಡಿದ ಮರ—ಉಪಮಾನ, ಅಂತೆ—ವಾಚಕಶಬ್ದ. ವಾಚಕಶಬ್ದವು ಉಕ್ತವಾಗಿದೆ. ಚಂಡಿಯನ್ನು ಮದುವೆ ಮಾಡಿಕೊಂಡದ್ದು ಎಂಬ ಉಪಮೇಯವಾಗಲಿ. ಹಿಂಸೆಕೊಡುವುದು ಎಂಬ ಸಮಾನಧರ್ಮವಾಗಲಿ ಹೇಳಿಲ್ಲವಾದುದರಿಂದ ಇದು ಲುಪ್ತೋಪಮಾಲಂಕಾರ ಎನಿಸುವುದು.

ಪದ್ಯ ೩. ಚಿಂತೆವೆತ್ತು—ಚಿಂತೆಯಂ+ಪೆತ್ತು (ಪಕಾರಕ್ಕೆ ವಕಾರಾದೇಶ)—ಯೋಚನೆಯನ್ನು ಹೊಂದಿ. ಬೆಸಗೊಂಡೊಡೆ—ಪ್ರಶ್ನಿಸಲು. ಪ್ರತಿಕೂಲತೆ—ವಿರೋಧವಾಗಿ ನಡೆಯುವಿಕೆ. ಅಂತರಿಸದೆ—ಗುಟ್ಟಾಗಿಟ್ಟುಕೊಳ್ಳದೆ. ಮಾಡಲಾದಪ್ಪುದು—ಮಾಡಲು ಆಗುವುದು (ಇನ್ನು ಮುಂದೆ ಆಗಬೇಕಾದ ಕೆಲಸಕ್ಕೆ ವಿರೋಧವನ್ನು ಸೂಚಿಸುವುದು. ಆಗ ನಿನ್ನ ಇಚ್ಛೆ ನೆರವೇರುವುದು. ನೀನು ಕೆಟ್ಟದ್ದನ್ನು ಹೇಳಿದರೆ, ಅವಳು ಒಳ್ಳೆಯದನ್ನು ಮಾಡುವಳು ಎಂದು

ಭಾವ). ಸಂತಾಪ—ವ್ಯಥೆ. ಐದಿದಂ—ಹೋದನು. ಬೀಳ್ಕೊಡು—ಕಳುಹಿಸಿಕೊಡು. ಕೌಂಡಿನ್ಯ—ವಸಿಷ್ಠಮುನಿಯ ಸಂತತಿಯ ಒಬ್ಬ ಮಹರ್ಷಿ. ಕುಂಡಿನ ಎಂಬ ಮಹರ್ಷಿಯ ಮಗ.

ಪದ್ಯ ೪. ಪಿತೃಶ್ರಾದ್ಧ—ಸತ್ತ ತಂದೆಗೆ ವರ್ಷಕ್ಕೊಮ್ಮೆ ಶ್ರದ್ಧೆಯಿಂದ ಮಾಡಬೇಕಾದ ಕರ್ಮ. ಎಲಗೆ—ಎಲೈ (ಸಂಬೋಧನಾ ಪದ). ಪೈತೃಕ—ಸತ್ತ ತಂದೆಗೆ ಮಾಡುವ ಕರ್ಮ. ಮಾಡೆನು—ಮಾಡುವುದಿಲ್ಲ. (ನಿಷೇಧಾರ್ಥ). ಅಧಮಧಾನ್ಯ—ಕೆಟ್ಟ ಕಾಳುಗಳು ; ಹುಳಿತು ಹೋದ ಧಾನ್ಯ. ವ್ರೀಹಿ—ಅಕ್ಕಿ. ಶಾಕ—ತರಕಾರಿ. ಪೊದ್ದಲೀಯೆಂ—ಹೊಂದಲು ಅವಕಾಶ ಕೊಡುವುದಿಲ್ಲ. (ಈ—ಧಾತು). ತದ್ದಿನ—ತತ್+ದಿನ—ಆ ದಿವಸ. ಅಪಾತ್ರ—ಯೋಗ್ಯನಲ್ಲದವನು.

ಪದ್ಯ ೫. ಬಹೆನು—ಬರುತ್ತೇನೆ. ಆಂ—ನಾನು. ಆಲಯ—ಮನೆ. ಶಾಲಿ—ಬತ್ತ. ಒಲ್ಮೆ—ಪ್ರೀತಿ. ಗುಣಸಂಪನ್ನ—ಸದ್ಗುಣಗಳಿಂದ ಕೂಡಿದವನು. ವೇದಪಾರಂಗತ—ಪೂರ್ಣವಾಗಿ ವೇದವನ್ನು ಓದಿದವನು. ಸುಶೀಲರು—ಯೋಗ್ಯರು. ಅವನಿಯಮರರು—ಭೂಲೋಕದ ದೇವತೆಗಳು ; ಬ್ರಾಹ್ಮಣರು.

ಪದ್ಯ ೬. ಕುತುಪಕಾಲ—ಪಿತೃಅರ್ಚನೆಗೆ ಯೋಗ್ಯವಾದ ಹದಿನೈದರಿಂದ ಇಪ್ಪತ್ತು ನಾಲ್ಕನೆಯ ಗಳಿಗೆ ಕಾಲ. ಬಿಡು—ಅತಿಕ್ರಮಿಸು ; ಮೀರು. ಅರ್ಚನೆ—ಪೂಜೆ. ಆದರಿಸೆನು—ಉಪಚರಿಸುವುದಿಲ್ಲ. ವಿಪ್ರರು—ಬ್ರಾಹ್ಮಣರು. ಪಾಕ—ಪಕ್ವಮಾಡಿದ ಅಡುಗೆ. ನವೋದನ—ಹೊಸದಾದ ಅನ್ನ ; ಬಿಸಿಯನ್ನ. ಸುಪಾಯಸ—ಪರಮಾನ್ನ. ಗುಡ—ಬೆಲ್ಲ. ಆಜ್ಯ—ತುಪ್ಪ. ಮಧು—ಜೇನು. ತೈಲ—ಎಳ್ಳೆಣ್ಣೆ. ಭಕ್ಷ್ಯ—ಕಜ್ಜಾಯ ಮೊದಲಾದ ತಿಂಡಿ. ಭೋಜ್ಯ—ತಿನ್ನತಕ್ಕ ತಿಂಡಿಪದಾರ್ಥ. ಸ್ವಾದು—ರುಚಿಯಾದ. ಶರ್ಕರ (ತ್ಸ)—ಸಕ್ಕರೆ. ವಿನುತ—ಹೊಗಳಲ್ಪಟ್ಟ. ನಿರ್ಮಲ—ಶುದ್ಧವಾದ. ಪಯ—ಹಾಲು. ದಧಿ—ಮೊಸರು. ಕುತ್ಸಿತ—ಕೀಳಾದ. ಸಂಪಾದಿಸು—ಸಿದ್ಧಪಡಿಸು. ಕೊಡೆ—ಕೊಡುವುದಿಲ್ಲ (ನಿಷೇಧಾರ್ಥ).

ಪದ್ಯ ೭. ಪೂಜೆಗೈಸು—ಪೂಜೆಯನ್ನು ಮಾಡಿಸು. ಒಕ್ಕಣಿಸಿದ—ಹೇಳಿದ. ಇನಿತೆಲ್ಲಮಂ—ಎಲ್ಲವನ್ನೂ. ಮಾಣೆನು—ಮಾಡದೆ ಬಿಡುವುದಿಲ್ಲ. ಅಮಲ—ಶುದ್ಧವಾದ. ವರ—ಉತ್ತಮವಾದ. ಶ್ರೇಷ್ಠ. ನಲವು—ಪ್ರೀತಿ. ಒದವಿಸಿದ—ಕೂಡಿಸಿದ ; ಸಿದ್ಧಪಡಿಸಿದ. ಸದ್ದ್ರವ್ಯಮಂ—ಒಳ್ಳೆಯ ಪದಾರ್ಥವನ್ನು.

ಪದ್ಯ ೮. ತೆರ—ರೀತಿ. ಪೊಱಗೆ—ಹೊರಗೆ. ಸಂಪ್ರೀತಿ—ವಿಶ್ವಾಸ ; ಪ್ರೇಮ. ತೊಂಡುತೊಳಸು—ಉದ್ಧಟತನ ; ಸ್ವೇಚ್ಛಾವೃತ್ತಿ. ಕವ್ಯಾಂಗ—ಪಿತೃಕರ್ಮದ ಒಂದು ಅಂಗ. ಮಡು—ಜಲಾಶಯ. ಹಾಯ್ಕು—ಹಾಕು. ಉದ್ದಂಡ—ಉದ್ಧಟತನ. ಎತ್ತಿ—ತೆಗೆದು. ದ್ವಿಜ—ಬ್ರಾಹ್ಮಣ. ರೋಷ—ಕೋಪ. ಭೀಷಣ—ಭಯಂಕರ.

ಪದ್ಯ ೯. ನಾನೇಂ—ನಾನು+ಏಂ—ನಾನು ಯಾವ. ಹೋರು—ಕಾದಾಡು. ಛಲ—ಹಟ. ಅಜಿ—ಬಂಡೆ. ಸಲೆ—ತುಂಬ. ಮುಳಿ—ಕೋಪಿಸು. ಅಧ್ವರ—ಯಾಗ. ಹಯ—ಕುದುರೆ. ಮೋಕ್ಷ—ಬಿಡುಗಡೆ. ಅವನಿ—ಭೂಮಿ.

ಪ್ರಶ್ನೆಗಳು :

೧. ನನಗೆ ಅನುಕೂಲೆಯಾಗಿರು ಎಂದ ಉದ್ದಾಲಕನಿಗೆ ಚಂಡಿ ಹೇಳಿದ ಉತ್ತರವೇನು ?
೨. ಕೌಂಡಿನ್ಯನು ಉದ್ದಾಲಕನಿಗೆ ಸೂಚಿಸಿದ ಉಪಾಯ ಯಾವುದು ?
೩. ಪಿತೃಶ್ರಾದ್ಧವನ್ನು ಹೇಗೆ ಮಾಡುವೆನೆಂದು ಉದ್ದಾಲಕನು ಚಂಡಿಗೆ ಹೇಳಿದನು ?
೪. ಪಿತೃಶ್ರಾದ್ಧವನ್ನು ಹೇಗೆ ಮಾಡುವುದಾಗಿ ಚಂಡಿ ಹೇಳಿದಳು ?
೫. ಉದ್ದಾಲಕನು ಚಂಡಿಗೆ ಶಾಪಕೊಡಲು ಕಾರಣವೇನು ?

ಇವುಗಳ ಅರ್ಥವನ್ನು ಸಂದರ್ಭದೊಡನೆ ಸ್ಪಷ್ಟೀಕರಿಸಿರಿ :

೧. " ಅನುಕೂಲೆಯಾಗಿರ್ದು ಮನೆವಾಳ್ತೆಯಂ ಸಾಗಿಪುದು "
೨. " ಮುಳ್ಳಿಡಿದ ಮರನೇರಿದಂತಾದುದು "
೩. " ಅಳ್ಳಿಯೊಳ್ಕೋಲ್ಗೊಂಡ ತೆಱದಿಂದ ಮರುಗಿ ಚಿಂತಿಪನವಂ "
೪. " ಮುಂತೆ ವಿಪರೀತಮಂ ಮಾಡಲಾದಪುದು "
೫. " ನಿನ್ನೊಡನೆ ನಾನೇಂ ಹಗೆಯ ಹೋರುವೆಂ "

ಇವುಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಪ್ರಯೋಗಿಸಿರಿ :

ತೊಂಡುತೊಳಸು, ಹಗೆಹೋರು, ರೋಷಭೀಷಣ.

ಇವುಗಳ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ :

ಅನುಕೂಲ, ಉತ್ತಮ, ಶುದ್ಧ, ಆದರ.

****

## ೧೫. ಆತನರಮನೆವೊಗಲ್ ಬಸವನುಸಿರಾಡಿದುದು

—ವಿರೂಪಾಕ್ಷ ಪಂಡಿತ

ಬಸವನ ಸುಭಕ್ತಿಯಾತನ ಪವಾಡಂಗಳೊಂ
ದೆಸಕಮಂ ಕರ್ಣಪಾರಂಪರೆಗಳಿಂದವಾ
ಲಿಸಿ ನೋಡಿ ಸಂತಸಂಬಡುವೆನೆಂದೊರ್ವ ಜಂಗಮದೇವರ್ಕೈದೆ ಬಂದು
ಮಿಸುಗುವರಮನೆಯನೊಳಪೊಗೆ ಸಮಯವಲ್ಲದೆಂ
ದುಸಿರಲಾ ನುಡಿಗೇಳಿ ನೊಂದು ತಿರುಗಲ್ ಬಸವ
ನಸು ಪೋದುದವರೊಡನೆ ಪೋಗಿ ತ್ರಿಪುರಾಂತಕಾಲಯದೊಳಗೆ ಮಂಡಿಸಿದರು ॥೧॥

ಆ ಸಮಯದೊಳ್ ಬಿಜ್ಜಳಂ ಬಸವರಾಜನ ನಿ
ವಾಸಕ್ಕೆ ದೂತನಂ ಕರೆಯಲಟ್ಟಲ್ಕವಂ
ಭಾಸುರ ಶಿವಾಚಾರಿಯರ ಮನೆಯ ಬಾಗಿಲೊಳಗಿರ್ದವರಿಗಱಿಪಲೊಡನೆ
ಈಸು ಪೊತ್ತೇಕೆ ಪವಡಿಸಿದನೆಂದೆಬ್ಬಿಸಲ್
ಶ್ವಾಸಮಿಲ್ಲದೆ ಡಿಂಬಮಿರೆ ಕಂಡು ಸರ್ವರುಂ
ಮೋಸವಾದುದು ಬಸವಗೆನುತಳುವ ಕಳಕಳಂ ಪಸರಿಸಿದುದರಮನೆಯೊಳು ॥೨॥

ಆರಮನೆಯ ಕಳಕಳವನರಿದು ದೂತಂ ಮಹೀ
ಶ್ವರನೊಡನೆ ಬಸವರಾಜಂ ಮರಣವಾದನೆಂ
ದೊರೆಯಲಾ ಬಿಜ್ಜಳಂ ಕಾಲ್ನಡೆಯೊಳೈತಂದು ಬಸವನರಮನೆಯ ಪೊಗಲು
ಇರದೆ ಸಮ್ಯಜ್ಞಾನದೃಷ್ಟಿಯಿಂದರಿದು ತ
ನ್ನರಮನೆಯಲೀ ಚೆನ್ನಬಸವೇಶ್ವರಂ ಬಸವ
ನರಮನೆಗೆ ಬರೆ ಬಿಜ್ಜಳಂ ಜನದ ಕಳಕಳವನಾಕ್ಷಣಂ ಮಾಣಿಸಿದನು ॥೩॥

ಬಂದುದಾಗಳೆ ಸಕಲಭಕ್ತಮಾಹೇಶ್ವರರ
ವೃಂದಮಾ ಬಿಜ್ಜಳಂ ಬಸವನಂ ನೋಡಿ ಕಡು
ನೊಂದು ನುಡಿದಂ ಚೆನ್ನಬಸವಣ್ಣನೊಡನಕಾರಣಮೃತಂ ಬಸವಣ್ಣಗೆ
ಬಂದುದೇಕೆನೆ ನಗುತೆ ಬಾಗಿಲ್ಗೆ ಜಂಗಮಂ
ಬಂದು ನಿಲ್ಲೆನೆ ಮುನಿದು ಪೋದನಾತನ ಕೂಡೆ
ಬಂದಿತನಸು ಪೋದುದೆಂದುಸುರಿ ಬಾಗಿಲವರಂ ಕರೆಸಿ ಬೆಸಗೊಂಡನು ॥೪॥

ಆರಾದೊಡಂ ಬಾಗಿಲಕೆ ಬಂದು ಪೋದರೆ ವಿ
ಚಾರದಿಂದುಸಿರನಲ್ಲವರೆಂದರೆಲೆ ದೇವ
ದೂರದೇಶಾಂತರದಿನೊರ್ವ ಜಂಗಮದೇವರೈದೆ ಮನೆಯೊಳಪ್ಪಗಲ್ಕೆ
ಬಾರಿಸಲ್ ಪೋದರೆನೆ ತ್ರಿಪುರಾಂತಕನ ಗುಡಿಯೊ
ಳೋರಂತೆ ಕುಳಿತಿರ್ಪರೀಕ್ಷಣಂ ಪೋಗಿ ಕರೆ
ತಾರೆನಲ್ಕತಿವೇಗದಿಂ ಪೋಗಿ ಬಸವಣ್ಣನರಮನೆಗೆ ಕರೆತಂದರು ॥೫॥

ಅಡಲೇನಾತನರಮನೆಪೊಗಲ್ ಬಸವನುಸಿ
ರಾಡಿದುದು ಮೂಗಿನೊಳ್ ತಾಣತಾಣಂಗಳೊಳ್
ನಾಡಿಗಳ್ ನೆಲೆಗೊಂಡುವತಿ ಸಮೀಪಕೆ ಬರಲ್ ತನು ಚೇತನಂ ಬಡೆದುದು
ಗಾಢದಿಂ ಬಸವನದಿರಿಗೆ ಬರಲೊಡನೆದ್ದು
ಮಾಡೆ ಸಾಷ್ಟಾಂಗಪ್ರಣಾಮಮಂ ಕಂಡು ಕೊಂ
ಡಾಡಿ ಬಿಜ್ಜಳನೃಪಂ ಚೆನ್ನಬಸವಣ್ಣನಂ ತನ್ನರಮನೆಗೆ ಪೋದನು ॥೬॥

## ಟಿಪ್ಪಣಿ

**ಕವಿ–ಕಾವ್ಯ ಪರಿಚಯ :**

ಈ ಪದ್ಯಭಾಗವನ್ನು ವಿರೂಪಾಕ್ಷಪಂಡಿತನ 'ಚೆನ್ನಬಸವಪುರಾಣ'ದಿಂದ ಆಯ್ದುಕೊಳ್ಳ ಲಾಗಿದೆ. ಕ್ರಿ. ಶ. ೧೫೮೪ ರಲ್ಲಿದ್ದ ವಿರೂಪಾಕ್ಷಪಂಡಿತನು ೨,೯೦೦ ಪದ್ಯಗಳಷ್ಟು ವಾರ್ಧಕ ಷಟ್ಪದಿಗಳಲ್ಲಿ ಹಬ್ಬಿರುವ ಚೆನ್ನಬಸವಪುರಾಣವೆಂಬ ಬೃಹತ್ಕಾವ್ಯವನ್ನು ಬರೆದಿದ್ದಾನೆ. ಇದರ ನಾಮಕರಣ ಚೆನ್ನಬಸವಪುರಾಣವೆಂದಿದ್ದರೂ ಇದರಲ್ಲಿನ ಬಹುಭಾಗ ಈಶ್ವರನ ಪಂಚವಿಂಶತಿ ಲೀಲೆಗಳಿಗಾಗಿಯೂ. ವೀರಶೈವದ ಮಹತ್ವ. ಷಟ್ಸ್ಥಲವಿವೇಚನೆ. ಪುರಾತನರು. ವಿರಕ್ತರು. ಅಮರಗಣಂಗಳು ಇತ್ಯಾದಿಗಳ ನಿರೂಪಣೆಗಾಗಿಯೂ ವಿನಿಯೋಗವಾಗಿದೆ. ಕವಿಗೆ ಕಾವ್ಯಕ್ಕಿಂತಲೂ ಧರ್ಮನಿರೂಪಣೆಯ ಕಡೆಗೇ ಹೆಚ್ಚು ದೃಷ್ಟಿ. ಈ ಗ್ರಂಥದಲ್ಲಿ ಪಾಂಡಿತ್ಯ ಪ್ರತಿಭೆ ಗಳನ್ನು ಸಮರಸವಾಗಿ ಬೆರಸಿ ತನ್ನ ಕಾವ್ಯಕರ್ಮಕ್ಕೆ ಅದನ್ನು ಸಾಧನವಾಗಿ ಬಳಸುತ್ತಾನೆ ಕವಿ.

ಇದರಿಂದ ಆತನ ಕಾವ್ಯಕ್ಕೆ ಒಂದು ಹೊಳುಪು ಬರುತ್ತದೆ. ಈ ದೃಷ್ಟಿಯಿಂದ ಈತನನ್ನೂ ಲಕ್ಷ್ಮೀಶನನ್ನೂ ಪರಸ್ಪರ ಹೋಲಿಸಬಹುದು.

ಚೆನ್ನಬಸವಪುರಾಣದಲ್ಲಿ ಹಲವು ಪುರಾತನರ ಕಥೆಗಳು ಕಂಡು ಬರುತ್ತವೆ. ಅವುಗಳಲ್ಲಿ ಬಸವಣ್ಣನವರ ಕಥೆಯೂ ಒಂದು. ಭಕ್ತಿಭಂಡಾರಿ ಬಸವಣ್ಣನವರು ಜಂಗಮ ಜೀವಿಯಾಗಿದ್ದರೆಂಬುದನ್ನು ಇಲ್ಲಿನ ಕಥೆ ಬಹು ಸುಂದರವಾಗಿ ನಿರೂಪಿಸುತ್ತದೆ. ಮನೆಗೆ ಬಂದ ಜಂಗಮರನ್ನು ಬಾಗಿಲುಕಾಯುವವರು ನಿವಾರಿಸಲು ಅವರು ಹೊರಟು ಹೋದರು. ಮನೆಯಲ್ಲಿ ಮಲಗಿದ್ದ ಬಸವಣ್ಣನ ಜೀವ ಆ ಜಂಗಮರ ಹಿಂದೆಯೇ ಹೊರಟು ಹೋಯಿತು. ಅಸುದೊರೆದ ಬಸವಣ್ಣನವರನ್ನು ಕಂಡು ಜನರೆಲ್ಲ ಮರುಗುತ್ತಿರಲು ಇವರ ಗುಟ್ಟನ್ನರಿತ ಚೆನ್ನಬಸವಣ್ಣನು ಜಂಗಮರನ್ನು ಮತ್ತೆ ಕರೆತರಿಸಿದನು. ಅವರೊಡನೆ ಬಸವಣ್ಣನ ಪ್ರಾಣವೂ ಹಿಂದಿರುಗಿತು.

## ಕಠಿಣಪದಗಳ ಅರ್ಥ :

೧. ಪವಾಡ—ಅಮಾನುಷ ಘಟನೆ, ಮನುಷ್ಯ ಮಾತ್ರದವರಿಂದ ಆಗಲಾರದ ಘಟನೆ. ಎಸಕ—ಕೆಲಸ. ಕರ್ಣಪಾರಂಪರೆ—ಕಿವಿಯಿಂದ ಕಿವಿಗೆ ಹರಿದು ಬರುವುದು. ಕರ್ಣಗಳ + ಪಾರಂಪರೆ—ಕರ್ಣಪಾರಂಪರೆ (ಷ. ತ. ಸ.). ಆಲಿಸು—ಕೇಳು. ಸಂತಸ (ದ್ಭ)— ಸಂತೋಷ (ತ್ಸ). ಐದೆ—ಚೆನ್ನಾಗಿ, ಸುಖವಾಗಿ. ಮಿಸುಗು—ಪ್ರಕಾಶಿಸು. ಉಸಿರು—ಹೇಳು. ನುಡಿಯುಂ + ಕೇಳಿ—ನುಡಿಗೇಳಿ(ಕ್ರಿ. ಸ.). ಅಸು—ಪ್ರಾಣ. ತ್ರಿಪುರ + ಅಂತಕ—ತ್ರಿಪುರಾಂತಕ, ಈಶ್ವರ (ಸ. ದೀ. ಸಂ).

೨. ನಿವಾಸ—ಮನೆ. ದೂತ—ಸೇವಕ. ಅಟ್ಟು—ಕಳುಹು. ಭಾಸುರ—ಪ್ರಕಾಶಮಾನವಾದ. ಶಿವಾಚಾರಿ—ಶಿವ + ಆಚಾರಿ (ಸ. ದೀ. ಸಂ.). ಶಿವಾಚಾರವನ್ನು ನಡೆಸುವವನು. ಅರಿಪು—ತಿಳಿಸು. ಈಸು—ಇಷ್ಟು. ಪವಡಿಸು—ಮಲಗು. ಶ್ವಾಸ—ಉಸಿರು. ಡಿಂಬ— ಜೀವವಿಲ್ಲದ ಶರೀರ. ಪಸರ (ದ್ಭ) ಪ್ರಸಾರ(ತ್ಸ)—ಹರಡುವಿಕೆ.

೩. ಕಳಕಳ—ಸಂಕಟದ ಶಬ್ದ. ಮಹೀಶ—ರಾಜ (ಮಹೀ–ಭೂಮಿಗೆ. ಈಶ–ಒಡೆಯ). ಒರೆ—ತಿಳಿಸು. ಐತರು—ಬರು. ಪುಗು—ಪ್ರವೇಶಿಸು. ಸಮ್ಯಜ್ಞಾನ—ಶ್ರೇಷ್ಠವಾದ ಜ್ಞಾನ. ಅರಿ—ತಿಳಿ. ಮಾಣಿಸು—ಹೋಗಲಾಡಿಸು.

೪. ಮಾಹೇಶ್ವರ—ಶಿವಭಕ್ತ. ಅಸು—ಪ್ರಾಣ. ಬೆಸಗೊಳ್—ವಿಚಾರಿಸು ; ಕೇಳು. ವೃಂದ—ಸಮೂಹ. ಕಡು—ಹೆಚ್ಚು. ಮೃತಿ—ಸಾವು.

೫. ದೇಶ + ಅಂತರ—ದೇಶಾಂತರ (ಸ. ದೀ. ಸಂ). ಬಾರಿಸು—ನಿವಾರಿಸು. ಓರಂತೆ — ಒಂದೇ ರೀತಿಯಾಗಿ, ಒಬ್ಬಂಟಿಗನಾಗಿ. ಜಂಗಮದೇವರು—ಚಲಿಸುವ ದೇವರು (ಶಿವಶರಣರು).

೬. ಆಡಲ್—ಹೇಳಲು. ತಾಣ (ದ್ಭ)—ಸ್ಥಾನ (ತ್ಸ). ನೆಲೆಯಂ + ಕೊಳ್—ನೆಲೆಗೊಳ್ (ಕ್ರಿ. ಸ.). ಚೇತನ—ಜೀವವುಳ್ಳ. ಗಾಢ—ಹೆಚ್ಚು. ಸಾಷ್ಟಾಂಗ (ಸ+ಅಷ್ಟಾಂಗ) (ಎಂಟು ಅಂಗಗಳು—ಮೊಳಕಾಲು, ಪಾದ, ಕೈಗಳು, ಎದೆ, ಮನಸ್ಸು, ತಲೆ, ನಾಮಸ್ಮರಣೆ, ದೃಷ್ಟಿ ಈ ಎಂಟು ಅಂಗಗಳಿಂದ ಕೂಡಿ ಮಾಡುವ ನಮಸ್ಕಾರಕ್ಕೆಸಾಷ್ಟಾಂಗ ಪ್ರಣಾಮವೆಂದು ಹೆಸರು). ನಾಡಿಗಳ್ ನೆಲೆಗೊಂಡುವು—ರಕ್ತಪರಿಚಲನೆಯಿಂದ ರಕ್ತನಾಳದಲ್ಲಿ ಬಡಿತ ಕಂಡು ಬರುತ್ತದೆ. ಇದು ಸಜೀವವಾಗಿರುವುದರ ಗುರುತು. ಸತ್ತವನಲ್ಲಿ ನಾಡಿ ಆಡುವುದಿಲ್ಲ.

ತ್ರಿಪುರಾಂತಕ :—ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿಗಳು ಕ್ರಮವಾಗಿ ಭೂಮಿಯ ಮೇಲೆ ಕಬ್ಬಿಣದ ಪುರವನ್ನೂ, ಅಂತರಿಕ್ಷದಲ್ಲಿ ಬೆಳ್ಳಿಯ ನಗರವನ್ನೂ ಅದರ ಮೇಲ್ಭಾಗದಲ್ಲಿ ಸುವರ್ಣಪುರವನ್ನೂ ಕಟ್ಟಿಕೊಂಡಿದ್ದರು. ಶಿವನು ಒಂದೇ ಬಾಣದಿಂದ ಒಂದೇ ಇರಿತದಿಂದ ಸುಟ್ಟು ನಾಶಮಾಡಿದನು—ಆ ಮೂರು ಪುರಗಳನ್ನು.

ಪ್ರಶ್ನೆಗಳು :

೧. ಬಸವಣ್ಣನ ಅಸು ಹೋಗಲು ಕಾರಣವೇನು ?
೨. ಬಸವಣ್ಣನ ಅಸು ಮರಳಿ ಬಂದ ಬಗೆ ಹೇಗೆ ?
೩. ಈ ಕಥೆಯಿಂದ ತೋರಿಬರುವ ಬಸವಣ್ಣನ ಭಕ್ತಿಭಾವವನ್ನು ವಿವರಿಸಿ.

ಕೆಳಗಣ ಪದಪುಂಜಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬರೆಯಿರಿ :

ಶ್ವಾಸಮಿಲ್ಲದ ಡಿಂಬ, ಕರ್ಣಪಾರಂಪರೆ, ಅಳುವ ಕಳಕಳ, ಕಾಲ್ಗಡೆಯೊಳ್ಕೈತರು, ನಾಡಿಗಳ್ ನೆಲೆಗೊಂಡುವು.

ಛಂದಸ್ಸು :

ಇಲ್ಲಿನ ಪದ್ಯಗಳೆಲ್ಲಾ ವಾರ್ಧಕಷಟ್ಪದಿಯಲ್ಲಿವೆ.

****

## ೧೬. ಸೋಮೇಶ್ವರಶತಕ

—ಪಾಲ್ಕುರಿಕೆ ಸೋಮನಾಥ

ಹಿತವಂ ತೋರುವನಾತ್ಮಬಂಧು ಪೊರೆವಾತಂ ತಂದೆ ಸಾಧ್ವೀತ್ವದಾ
ಖಿಯೇ ಸರ್ವಕೆ ಸಾಧನಂ ಕಲಿಸಿದಾತಂ ವರ್ಣಮಾತ್ರಂ ಗುರು
ಥಮಾರ್ಗಂ ಬಿಡದಾತ ಸುವ್ರತಿ ಮಹಾಸದ್ವಿದ್ಯೆಯೇ ಪುಣ್ಯದಂ
ತನೇ ಸದ್ಗತಿದಾತನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥೧॥

ರವಿಯಾಕಾಶಕೆ ಭೂಷಣಂ ರಜನಿಗಂ ಚಂದ್ರಂ ಮಹಾಭೂಷಣಂ
ಬವರಂ ವಂಶಕೆ ಭೂಷಣಂ ಸರಸಿಗಂಭೋಜಾಳಿ ತಾಂ ಭೂಷಣಂ
ವಿ ಯಜ್ಞಾಳಿಗೆ ಭೂಷಣಂ ಸತಿಗೆ ಪಾತಿವ್ರತ್ಯವೇ ಭೂಷಣಂ
ವಿಯಾಸ್ಥಾನಕೆ ಭೂಷಣಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥೨॥

ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ತೀವಿದಾ
ರಗಳ್ ಪುಟ್ಟವೆ ? ಪುಷ್ಪಮೊಂದು ಬಳಲಲ್ ಭೃಂಗಕ್ಕೆ ಪೂವಿಲ್ಲವೇ ?
ರುಳು ಸತ್ಕವಿಗೊರ್ವ ಗರ್ವಿ ಪ್ರಸಿಯಂ ತಾಂ ಪೇಳ್ದೊಡೇಂ ಲೋಭದಿಂ
ಯೊಳ್ ದಾತರು ಪುಟ್ಟರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥೩॥

### ಟಿಪ್ಪಣಿ

೧-ಕಾವ್ಯ ವಿಚಾರ :

'ಹರಹರಾ ಶ್ರೀ ಚೆನ್ನಸೋಮೇಶ್ವರಾ' ಎಂಬ ಅಂಕಿತದಿಂದ ಬರೆದಿರುವ ಸೋಮೇಶ್ವರ ಕವು. ಪಾಲ್ಕುರಿಕೆ ಸೋಮನಾಥನು ಬರೆದುದೆಂದು ಸಂಪ್ರದಾಯವಾದ ತಿಳಿವಳಿಕೆ ಇದೆ. ರೆ ಆದರ ಕರ್ತೃ ಪುಲಿಗೆರೆಯ ಸೋಮನಾಥನೆಂಬುವನು ಇರಬೇಕೆಂದೂ, ಆತನು ೧೪ ನೆಯ ಮಾನದಲ್ಲಿ ಇದ್ದಿರಬೇಕೆಂದೂ ಕೆಲವು ಪಂಡಿತರು ಊಹಿಸುತ್ತಾರೆ. ಭರತೇಶವೈಭವ ಮತ್ತು

ಶತಕತ್ರಯಗಳನ್ನು ಬರೆದ ರತ್ನಾಕರನು ಈ ಸೋಮೇಶ್ವರಶತಕವನ್ನು ಬರೆದನೆಂಬ ಒಂದು ಅಭಿಪ್ರಾಯವೂ ಇದೆ. ಇದು ಹೀಗೆಯೇ ಸರಿ ಎಂದು ಹೇಳಲು ಸಾಕಷ್ಟು ಸಾಧನಗಳಿಲ್ಲ. ಸೋಮೇಶ್ವರಶತಕವನ್ನು ಬರೆದ ಕವಿಯು ಸಾಕಷ್ಟು "ಸ್ವತಂತ್ರವಾದ ಲೋಕಾನುಭವ, ಧರ್ಮವಿವೇಕ, ಪ್ರಾಮಾಣಿಕತೆ, ಕವಿತ್ವಶಕ್ತಿ"ಗಳನ್ನು ಮೆರೆದಿದ್ದಾನೆ. ಅವನ ಶತಕಗಳು ಓದುಗರ ಮೆಚ್ಚುಗೆಗೆ ಪಾತ್ರವಾಗುವಂತಿವೆ.

ಕಠಿಣಪದಗಳ ಅರ್ಥ :

ಪ. ೧. ಆತ್ಮಬಂಧು—ತನ್ನ ಹತ್ತಿರದ ನೆಂಟ. ಪೊರೆ—ಕಾಪಾಡು. ಸಾಧ್ವೀ—ಪತಿವ್ರತೆ. ತನ್ನ ಗಂಡನಲ್ಲಿ ನಿಷ್ಠೆಯಿಂದ ನಡೆದುಕೊಳ್ಳುವವಳು. ವ್ರತಮಾರ್ಗ—ಪೂಜಾಪದ್ಧತಿ, ನಿಷ್ಠೆಯಿಂದ ಕೂಡಿದ ಶಾಸ್ತ್ರೋಕ್ತವಾದ ಪೂಜಾಪದ್ಧತಿ. ಸದ್ಗತಿ - (ಸತ್+ಗತಿ. ಜ. ಸಂ.) ಮೋಕ್ಷ. ಪುಣ್ಯದು—ಪುಣ್ಯವನ್ನು ಕೊಡತಕ್ಕುದು.

ಪ. ೨. ರವಿ— ಸೂರ್ಯ. ಭೂಷಣ—ಅಲಂಕಾರ. ರಜನಿ ರಾತ್ರಿ. ಸರಸಿ— ಸರೋವರ. ಕುವರ (ದ್ಭ)— ಕುಮಾರ (ತ್ಸ). ಅಂಭೋಜ—ಕಮಲ. (ಅಂಭ—ನೀರಿನಲ್ಲಿ ಜ—ಹುಟ್ಟಿದ್ದು). ಹವಿ—ಯಾಗದ ಅಗ್ನಿಯಲ್ಲಿ ಹಾಕುವ ತುಪ್ಪ ಮೊದಲಾದ ವಸ್ತುಗಳಿಗೆ ಹವಿ, ಹವಿಸ್ಸು ಎಂದು ಹೆಸರು: ಯಜ್ಞಾಳಿ—ಯಜ್ಞಗಳ ಸಮೂಹ (ಯಜ್ಞ+ಆಳಿ. ಸ. ದೀ. ಸಂ).

ಪ. ೩. ಚರಿಪ—ಸಂಚರಿಸುವ. ತರು—ಮರ. ಗೊಡ್ಡು—ಫಲವಿಲ್ಲದ್ದು. (ಗೊಡ್ಡ ಪು.; ಗೊಡ್ಡಿ ಸ್ತ್ರೀ. ಗೊಡ್ಡು. ನ.). ಭೃಂಗ—ದುಂಬಿ. ಪುಸಿ—ಸುಳ್ಳು. ದಾತ – ಕೊಡುವವನು.

ಪ್ರಶ್ನೆಗಳು :—

೧. ಆತ್ಮಬಂಧು. ತಂದೆ. ಹೆಂಡತಿ. ಗುರು. ಸುವ್ರತಿ ಈ ಹೆಸರುಗಳು ಯಾರಿಗೆ ಒಪ್ಪುತ್ತವೆ ?

೨. ಆಕಾಶ. ರಜನಿ. ವಂಶ. ಸರಸಿ. ಯಜ್ಞ. ಪಾತಿವ್ರತ್ಯ. ಆಸ್ಥಾನ ಇವುಗಳಿಗೆ ಭೂಷಣವಾದುವುಗಳು ಯಾವುವು ?

೩. "ಚರಿಪಾರಣ್ಯದ...... ..." ಈ ಪದ್ಯದ ಅಭಿಪ್ರಾಯವನ್ನು ವಿವರಿಸಿ.

ಇಲ್ಲಿ ಕೊಟ್ಟಿರುವ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ :
ಹಿತಸಾಧ್ವೀ. ಸದ್ವಿದ್ಯೆ. ಸದ್ಗತಿ. ಸತ್ಕವಿ. ದಾತ.
ಛಂದಸ್ಸು :

ಮೇಲಿನ ಮೂರು ಪದ್ಯಗಳೂ ಮತ್ತೇಭವಿಕ್ರೀಡಿತವೃತ್ತ ಲಕ್ಷಣದಿಂದ ರಚಿತವಾಗಿದೆ.

****

# ೧೭. ಕುಲ ಕುಲ ಕುಲವೆನ್ನುತಿಹರು

—ಕನಕದಾಸ

ಕುಲ ಕುಲ ಕುಲವೆನ್ನುತಿಹರು
ಕುಲಯಾವುದು ಸತ್ಯ ಸುಖವುಳ್ಳ ಜನರಿಗೆ ॥ ಪ ॥

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ ?
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣಲಿಲ್ಲವೆ ? ॥ ೧ ॥

ಮೃಗಗಳ ಮೈಯಲ್ಲಿ ಪುಟ್ಟಲು ಕಸ್ತೂರಿ
ತೆಗೆದು ಪೂಸುವರು ದ್ವಿಜರೆಲ್ಲರು
ಒಗೆಯಿಂದ ನಾರಾಯಣನಾವ ಕುಲವಯ್ಯ
ಅಗಜವಲ್ಲಭನಾವ ಕುಲ ಪೇಳಿರಯ್ಯ ॥ ೨ ॥

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ ಮಹಾತ್ಮನು ನೆಲೆಯಾದಿಕೇಶವ
ಯಾತರ ಕುಲವಯ್ಯ ಆತನೊಲಿದ ಮೇಲೆ ॥ ೩ ॥

## ಟಿಪ್ಪಣಿ

**ಕವಿ–ಕಾವ್ಯ ವಿಚಾರ :**

ಈ ಕೀರ್ತನೆಯನ್ನು ರಚಿಸಿದ ಕನಕದಾಸನು ಕ್ರಿ. ಶ. ೧೫೦೯ ರಿಂದ ೧೬೦೭ ರ ವರೆಗೆ ಬಾಳಿ ಬದುಕಿ " ಮೋಹನತರಂಗಿಣಿ ", " ರಾಮಧ್ಯಾನ ಚರಿತ್ರೆ ". " ನಳಚರಿತ್ರೆ ",

" ಹರಿಭಕ್ತಿಸಾರ " ಎಂಬ ಕಾವ್ಯಗಳನ್ನು ರಚಿಸಿದ ಅಸಾಧಾರಣ ಕವಿಯಾಗಿರುವುದಲ್ಲದೆ ನೂರಾರು ಕೀರ್ತನೆಗಳನ್ನು ರಚಿಸಿದ ಹರಿದಾಸನೂ ಆಗಿದ್ದಾನೆ. ಈತನ ಹುಟ್ಟಿದೂರು ಧಾರವಾಡದ ಸಮೀಪದಲ್ಲಿರುವ ಬಾಡ. ಅಲ್ಲಿನ ಪಾಳೆಯಗಾರನಾದ ಬೀರಪ್ಪನ ಮಡದಿ ಬಚ್ಚಮ್ಮನ ಪುಣ್ಯಗರ್ಭದಲ್ಲಿ ಹುಟ್ಟಿದ ಈತನ ನಿಜವಾದ ಹೆಸರು ತಿಮ್ಮಪ್ಪ. ಆಕಸ್ಮಾತ್ತಾಗಿ ಅಪಾರವಾದ ಧನರಾಶಿ ಈತನಿಗೆ ದೊರೆತುದರಿಂದ ಈತನನ್ನು ' ಕನಕಪ್ಪ ' ಎಂದು ಕರೆದರು. ಧನ, ಯೌವನ, ಅಧಿಕಾರ, ಕೀರ್ತಿ ಇವುಗಳ ಶಿಖರದಲ್ಲಿದ್ದ ಕನಕಪ್ಪ. ಒಮ್ಮೆಗೆ ಎಲ್ಲಕ್ಕೂ ಎರವಾದ ಆತನ ಕೈಹಿಡಿದ ಮಡದಿ ಸತ್ತಳು, ರಾಜ್ಯ ಶತ್ರುಗಳ ಪಾಲಾಯಿತು ; ಆತನು ಯುದ್ಧದಲ್ಲಿ ಗಾಯಗೊಂಡು ನೆಲಕ್ಕುರುಳಿದನು. ಇದರಿಂದ ಆತನ ಮನಸ್ಸು ವೈರಾಗ್ಯಪರ ವಾಯಿತು. ಆತನು ವಿಜಯನಗರದಲ್ಲಿದ್ದ ವ್ಯಾಸರಾಯರ ಶಿಷ್ಯನಾದನು. ಕನಕಪ್ಪನಾಯಕನೆಂಬ ಆತನ ಹೆಸರು ಕನಕದಾಸನೆಂದಾಯಿತು. ಆತನು ಗುರುಗಳ ಜೊತೆಯಲ್ಲಿ ಭಜನೆಮಾಡುತ್ತಾ ದಾಸಕೂಟದ ಸದಸ್ಯರಲ್ಲಿ ಒಬ್ಬನಾದನು. ಅಲ್ಲಿದ್ದ ಪುರಂದರದಾಸನೂ, ಈತನೂ ಜೀವದ ಗೆಳೆಯರಾದರು. ಪುರಂದರದಾಸನು ಇಹಲೋಕವನ್ನು ಬಿಟ್ಟು ಹೋಗುವಾಗ ತನ್ನ ತಂಬೂರಿಯನ್ನು ಕನಕದಾಸನಿಗೆ ಕೊಟ್ಟನಂತೆ. ಕನಕದಾಸನು ತನ್ನ ಜೀವಿತದ ಬಹುಭಾಗವನ್ನು ತಿರುಪತಿಯಲ್ಲಿ ಕಳೆದು ಕಡೆಗಾಲದಲ್ಲಿ ಕಾಗಿನೆಲೆಯ ಕೇಶವದೇವರ ಪಾದದಲ್ಲಿ ತಲೆಯಿಟ್ಟುಕೊಂಡು ಕಡೆಯುಸಿರನ್ನು ಎಳೆದನಂತೆ !

ಕನಕದಾಸನು ಮಹಾವಿದ್ವಾಂಸನಲ್ಲದಿದ್ದರೂ ಬಹು ದೊಡ್ಡ ಜ್ಞಾನಿ. ಇದನ್ನು ತಿಳಿಸುವ ಅನೇಕ ದಂತಕಥೆಗಳು ಪ್ರಚಲಿತವಾಗಿವೆ. ಈತನ ಕೀರ್ತನೆಗಳಲ್ಲಿ ಬರುವ ಉಪಮಾನಗಳೂ, ದೃಷ್ಟಾಂತಗಳೂ ರಮ್ಯವಾಗಿವೆ. ಜನಜೀವನದಲ್ಲಿನ ಲೋಪದೋಷಗಳನ್ನು ಕಂಡಾಗ ಕನಕದಾಸನು ಕೆರಳಿ ಕೆಂಗೆಂಡವಾಗುತ್ತಾನೆ. ಅವುಗಳನ್ನು ಕಟುವಾಗಿ ಟೀಕಿಸುತ್ತಾನೆ. ಆತನ ಮಾತುಗಳು ಅರಳು ಹುರಿದಂತೆ ಪಟಪಟ ಸಿಡಿಯುತ್ತವೆ. ನಮ್ಮ ಸಮಾಜದಲ್ಲಿ ಇರುವ ಹಲವು ಕುಂದುಕೊರತೆಗಳಲ್ಲಿ ಅಗ್ರಗಣ್ಯವಾದ ಜಾತೀಯತೆಯನ್ನು ಖಂಡತುಂಡಾಗಿ ಖಂಡಿಸಿ ನಮ್ಮ ಮುಂದಿಡುತ್ತಾನೆ. ಇಲ್ಲಿನ ಕೀರ್ತನೆಯಲ್ಲಿ.

## ಕಠಿಣಪದಗಳ ಅರ್ಥ :

೧. ಬಿಸಜನಾಭ—ವಿಷ್ಣು (ಬಿಸಜವು ನಾಭಿಯಲ್ಲಿ ಯಾರಿಗೋ ಅವನು ಬಿಸಜನಾಭ, ಬ. ಸ.). ಅರ್ಪಿಸು—ವಿನಯದಿಂದ ಒಪ್ಪಿಸು. ಕ್ಷೀರ—ಹಾಲು. ವಸುಧಾ (ತ್ಸ) ವಸುಧೆ (ದ್ಭ) —ಭೂಮಿ. ಭೂಸುರರು—ಬ್ರಾಹ್ಮಣರು.

ಮೃಗ—ಕಸ್ತೂರಿಮೃಗ. ಪೂಸು ಬಳಿ. ಹಚ್ಚು. ಒಗೆ—ಹುಟ್ಟು. ಅಗಜವಲ್ಲಭ—ಈಶ್ವರ (ಅಗ—ಪರ್ವತದಲ್ಲಿ ಜ—ಹುಟ್ಟಿದವಳು ಪರ್ವತರಾಜನ ಮಗಳಾದ ಪಾರ್ವತಿ; ಇವಳ ವಲ್ಲಭ—ಗಂಡ). ದ್ವಿಜ—ಬ್ರಾಹ್ಮಣ, ದ್ವಿ—ಎರಡುಸಲ ಜ — ಹುಟ್ಟಿದವನು.

ತಾಯಿಯ ಗರ್ಭದಿಂದ ಹುಟ್ಟಿದಾಗ ಒಮ್ಮೆ, ಬ್ರಹ್ಮದೀಕ್ಷೆಯನ್ನು ಪಡೆದ ಮೇಲೆ ಮತ್ತೊಮ್ಮೆ ಹೀಗೆ ಎರಡು ಸಲ.)

ತತ್ತ್ವ—ಪರಮಾತ್ಮನನ್ನು ಕುರಿತ ಪರಾಮರ್ಶೆ. ಇಂದ್ರಿಯ—ಜ್ಞಾನವನ್ನು ಕೊಡುವ ಅವಯವಗಳು (ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ ಇವು ಪಂಚೇಂದ್ರಿಯಗಳು.) ಸ್ಥಿತಿ – ಸ್ಥಿರವಾಗಿರುವಿಕೆ, ನಿಲ್ಲುವಿಕೆ.

ಪ್ರಶ್ನೆಗಳು :

೧. ತಾವರೆ, ಕ್ಷೀರ, ಕಸ್ತೂರಿ ಇವುಗಳ ಹೋಲಿಕೆಯಿಂದ ಕವಿ ಸಾಧಿಸಿರುವುದೇನು ?

೨. ಮನುಷ್ಯರ ಶ್ರೇಷ್ಠತೆಗೆ ಕುಲ ಮುಖ್ಯವಲ್ಲವೆಂಬುದನ್ನು ಕವಿ ಹೇಗೆ ಸಾಧಿಸಿದ್ದಾನೆ ?

****

# ೧೮. ಸಕಲಕೆಲ್ಲಕೆ ನೀನೆ ಅಕಳಂಕ ಗುರು

—ಮುಪ್ಪಿನ ಷಡಕ್ಷರಿ

ಸಕಲಕೆಲ್ಲಕೆ ನೀನೆ
ಅಕಳಂಕ ಗುರುವೆಂದು
ನಿಖಿಳ ಶಾಸ್ತ್ರವು ಪೇಳುತಿರಲರಿದೆನು ॥ಪ॥

ಅವರವರ ದರುಶನಕೆ
ಅವರವರ ವೇಷದಲಿ
ಅವರವರಿಗೆಲ್ಲ ಗುರು ನೀನೊಬ್ಬನೇ
ಅವರವರ ಭಾವಕ್ಕೆ
ಅವರವರ ಪೂಜೆಗಂ
ಅವರವರಿಗೆಲ್ಲ ಶಿವ ನೀನೊಬ್ಬನೇ ॥೧॥

ಹೋರಾಟವಿಕ್ಕಿಸಲು
ಬೇರಾದೆಯಲ್ಲದೆ
ಬೇರುಂಟೆ ಜಗದೊಳಗೆ ಎಲೆ ದೇವನೆ
ಆರು ಅರಿಯರು ನೀನು
ಬೇರಾದ ಪರಿಗಳನು
ಮಾರಾರಿ ಶಿವ ಷಡಕ್ಷರಿ ಲಿಂಗವೆ ॥೨॥

# ಟಿಪ್ಪಣಿ

## ಕವಿ-ಕಾವ್ಯ ಪರಿಚಯ :

ಮುಪ್ಪಿನ ಷಡಕ್ಷರಿಯೆಂಬ ಕವಿಯು ಬರೆದ ಈ ಕವಿತೆಯನ್ನು ಆ ಕವಿಯ ಕೃತಿಗಳ ಸಂಗ್ರಹವಾದ 'ಸುಬೋಧಸಾರ'ದಿಂದ ಆಯ್ದುಕೊಳ್ಳಲಾಗಿದೆ. ಈತನು ಕ್ರಿ. ಶ. ಸುಮಾರು ೧೫೦೦ ರಲ್ಲಿದ್ದ ನಿಜಗುಣಶಿವಯೋಗಿಯ ಸಮಕಾಲೀನನೆಂದೂ, ಮೈಸೂರಿನಿಂದ ಕೊಳ್ಳೆಗಾಲಕ್ಕೆ ಹೋಗುವ ಹಾದಿಯಲ್ಲಿರುವ ಶಂಭುಲಿಂಗನ ಬೆಟ್ಟದಲ್ಲಿರುವ ಒಂದು ಗುಹೆಯು ಆತನು ವಾಸಿಸುತ್ತಿದ್ದ ಗುಹೆಯೆಂದೂ ಹೇಳುತ್ತಾರೆ.

ಬುದ್ಧಿಗೆ ಬೆಳಕನ್ನೂ, ಹೃದಯಕ್ಕೆ ಶಾಂತಿಯನ್ನೂ ನೀಡಬಲ್ಲ ಈ ಕವಿಯ ಹೃದಯವೈಶಾಲ್ಯ, ಸುಸ್ಥಿರಬುದ್ಧಿ ಜನರಲ್ಲಿ ಪ್ರಚಾರವಾದರೆ ನಮ್ಮ ಜನರ ಬಾಳು ಬಂಗಾರವಾದೀತು. ಈತನ ಈ ಕವಿತೆ ಸುಂದರವಾದ ಒಂದು ಭಾವಗೀತೆ. ಸಂತಕವಿಯ ಆಧ್ಯಾತ್ಮಚೇತನದ ಹಂಬಲು ಬಳ ಸುಂದರವಾದ ಶ್ರಾವ್ಯಗಂಗೆಯಾಗಿ ಹರಿದು ಬಂದಿರುವುದನ್ನು ನಾವಿಲ್ಲಿ ಕಾಣುತ್ತೇವೆ.

ಬೇರೆ ಬೇರೆ ಜನರು ತಮತಮಗೆ ಸರಿದೋರಿದಂತೆ ಭಗವಂತನನ್ನು ಚಿತ್ರಿಸಿಕೊಳ್ಳುತ್ತಾರೆ ; ಬೇರೆ ಬೇರೆ ಭಾವಗಳಿಂದ ಆರಾಧಿಸುತ್ತಾರೆ. ಅವರವರ ಚಿತ್ರಣಕ್ಕೂ, ಭಾವಕ್ಕೂ ಅನುಸಾರವಾಗಿ ಭಗವಂತನು ಮೈದೋರುತ್ತಾನೆ. ಬೇರೆ ಬೇರೆ ದೇವರ ಹೆಸರಿನಲ್ಲಿ ಆಗುವ ರಾಗದ್ವೇಷಗಳನ್ನು ಕವಿ ಇಲ್ಲಿ ಮಾರ್ಮಿಕವಾಗಿ ಖಂಡಿಸಿದ್ದಾನೆ.

## ಕಠಿಣಪದಗಳ ಅರ್ಥ :

ಅಕಳಂಕ—ಕಳಂಕವಿಲ್ಲದ, ಶುದ್ಧವಾದ. ನಿಖಿಲ—ಸಮಸ್ತ, ಎಲ್ಲ. ಶಾಸ್ತ್ರ—ಜನರ ನಡೆ-ನುಡಿಗಳನ್ನು, ರೀತಿ-ನೀತಿಗಳನ್ನು ಬೋಧಿಸುವ ಧರ್ಮಗ್ರಂಥ ; ವೇದಾದಿಗಳು.

(೧) ದರುಶನ. (ದ್ಭ) ದರ್ಶನ (ತ್ಸ). ಭಾವ—ಸಂಕಲ್ಪ.

(೨) ಇಕ್ಕಿಸು—ಇಡಿಸು. ಪರಿ—ರೀತಿ. ಮಾರಾರಿ—ಮನ್ಮಥನನ್ನು ಕೊಂದವನು, ಶಿವ (ಮಾರ + ಅರಿ = ಮಾರಾರಿ. ಸ. ದೀ. ಸಂ.)

## ಪ್ರಶ್ನೆಗಳು :

೧. 'ನಿಖಿಳ ಶಾಸ್ತ್ರವು ಪೇಳುತಿರಲರಿದೆನು'—ಏನನ್ನು ?

೨. ಭಗವಂತನು ಬೇರೆ ಬೇರೆ ರೂಪಗಳಲ್ಲಿ ಕಾಣಿಸಿಕೊಂಡಿರುವುದಕ್ಕೆ ಕವಿ ಇಲ್ಲಿ ಕೊಟ್ಟಿರುವ ಕಾರಣವೇನು ?

ಛಂದಸ್ಸು :

ಈ ಪದ್ಯಗಳು ಕುಸುಮಷಟ್ಪದಿಯಲ್ಲಿವೆ. ಆರು ಪಾದಗಳ ಈ ಕುಸುಮಷಟ್ಪದಿಯಲ್ಲಿ ಒಂದು, ಎರಡು, ನಾಲ್ಕು, ಐದನೆ ಸಾಲುಗಳಲ್ಲಿ ಐದು ಮಾತ್ರೆಯ ಗಣಗಳು ಎರಡೆರಡೂ, ಮೂರು ಮತ್ತು ಆರನೆ ಪಾದಗಳಲ್ಲಿ ಐದು ಮಾತ್ರೆಯ ಮೂರು-ಮೂರು ಗಣಗಳೂ ಮತ್ತು ಒಂದು ಗುರುವೂ ಇರಬೇಕು.

ಉದಾಹರಣೆ—

U U U U U | U U U U U
ಅ ವ ರ ವ ರ | ದ ರು ಶ ನ ಕೆ

U U U U U | — U U U
ಅ ವ ರ ವ ರ | ವೇ ಷ ದ ಲಿ

U U U U U | — U U U | — — U | —
ಅ ವ ರ ವ ರಿ | ಗೆ ಲ್ಲ ಗು ರು | ನೀ ನೊ ಬ್ಬ | ನೇ

****

# ೧೯. ತಾಯಿ-ಮಗು

—ಜನಪದ ಸಾಹಿತ್ಯ

ಆಡಿಬಾ ನನ ಕಂದ ಅಂಗಾಲ ತೊಳೆದೇನು
ತೆಂಗಿನಕಾಯಿ ತಿಳಿನೀರು । ತಕ್ಕೊಂಡು
ಬಂಗಾರ ಪೋರೆ ತೊಳೆದೇನು ॥ ೧ ॥

ಬಾಲಕರಿಲ್ಲದ ಬಾಲೀದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದಂಗ । ಬಾಳೆಲೆಯು
ಹಾಸ್ಕುಂಡು ಬೀಸಿ ಒಗೆದಂಗ ॥ ೨ ॥

ಕಂದನ ಕುಡು ಶಿವನೆ ಬಂಧನ ಬಡಲಾರೆ
ಹಂಗೀನ ಬಾನ ಉಣಲಾರೆ । ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ ॥ ೩ ॥

ಹಾವಿನ ಹೆಡೆ ಚೆಂದ ಮಾವಿನ ಮಿಡಿ ಚೆಂದ
ಹಾರಾಡಿ ಬರುವ ಗಿಣಿ ಚೆಂದ । ಕಂದಯ್ಯ
ನೀ ಚೆಂದ ನಮ್ಮ ಮನೆಗೆಲ್ಲ ॥ ೪ ॥

## ಟಿಪ್ಪಣಿ

ಕವಿ–ಕಾವ್ಯ ಪರಿಚಯ :

ನಮ್ಮ ಜನ 'ಚದುರರ್ ನಿಜದಿಂ ; ಕುರಿತೋದದೆಯುಂ ಕಾವ್ಯಪ್ರಯೋಗಪರಿಣತ ಮತಿಗಳ್' ಎಂದು ಕವಿರಾಜಮಾರ್ಗಕರ್ತೃ ಹೇಳಿದ ಮಾತು ನಮ್ಮ ಜಾನಪದ ಕವಿಗಳಿಗೆ ಬಹು ಚೆನ್ನಾಗಿ ಒಪ್ಪುತ್ತದೆ. ಅಜ್ಞಾತರಾದ ಆ ಕವಿಗಳು ಯಾರ ಮೆಚ್ಚಿಗೆಗಾಗಿಯೂ ಕಾವ್ಯ ಸೃಷ್ಟಿಗೆ ಕೈಹಾಕಿದವರಲ್ಲ. ತಾವು ಅನುಭವಿಸಿದ ಸುಖ-ದುಃಖಗಳನ್ನೂ, ಆಸೆ-ನಿರಾಸೆಗಳನ್ನೂ ಅವರು ಹೃದಯ ತುಂಬಿ ಬಂದು ಹಾಡಿದರು. ಅದು ಕೇಳಿದವರ ಹೃದಯವನ್ನು ನೇರವಾಗಿ

ಮುಟ್ಟಿ ನೆಲಸಿತು. ಅವರು ಅದನ್ನು ಹಾಡಿ ರಸಾನುಭವ ಮಾಡಿದರು. ಅದನ್ನು ಕೇಳಿದವರು ತಾವೂ ಹಾಡಿದರು. ಹೀಗೆ ಕಿವಿಯಿಂದ ಕಿವಿಗೆ ಹರಿದು ಬಂದ ಈ ಸಾಹಿತ್ಯ ಮಲೆನಾಡಿನ ಕಾನನದಂತೆ ಸಹಜ ಸುಂದರವಾದುದು. ತಿಳಿಯಾದ. ಇಂಪಾದ. ಹುರುಳಾದ ಕನ್ನಡ ನುಡಿಗಟ್ಟಿನಿಂದ ಕೂಡಿದ ಈ ಸಾಹಿತ್ಯ ಶತಶತಮಾನಗಳಿಂದಲೂ ಅಳಿಯದೆ ಉಳಿದು ಬಂದಿರುವುದನ್ನು ನೋಡಿದಾಗ ಇದು ಎಷ್ಟು ಜನಪ್ರಿಯವೆಂಬುದೂ. ಎಷ್ಟು ಸತ್ಯಯುಕ್ತವಾದುದೆಂಬುದೂ ಸ್ಪಷ್ಟವಾಗುತ್ತದೆ. 'ಜನವಾಣಿ ಬೇರು ಕವಿವಾಣಿ ಹೂವು' ಎಂದು ಶ್ರೀಯವರು ಹೇಳಿರುವ ಮಾತು ಅತ್ಯಂತ ಮಾರ್ಮಿಕವಾದುದು. ಮಹಾಕಾವ್ಯ ಸೃಷ್ಟಿಗೆ ಈ ಜನಪದ ಸಾಹಿತ್ಯ ಪ್ರೇರಕ. ಪೋಷಕ. ಜನಪದಗೀತೆಗಳು ನಮ್ಮ ಹಳ್ಳಿಯ ಬಾಳಿನ ವಿಶ್ವಕೋಶ. ನಮ್ಮ ಜನಸಾಮಾನ್ಯರ ಜೀವನದ ಸಹಸ್ರ ಮುಖಗಳು ಇವುಗಳಲ್ಲಿ ಪ್ರತಿಬಿಂಬಿತವಾಗಿವೆ. ಪ್ರಸ್ತುತ ಪದ್ಯಭಾಗದಲ್ಲಿ ಹೆಣ್ಣಿನ ತಾಯ್ತನದ ಆಸೆ. ಆಕಾಂಕ್ಷೆ. ಹಂಬಲಗಳು ಮನೋಹರವಾಗಿ ಚಿತ್ರಿತವಾಗಿವೆ.

ಕಠಿಣಪದಗಳ ಅರ್ಥ :

ಪ. ೨. ಬಾಲೀ—ಬಾಲೆ. ಹೆಣ್ಣು. ಹಾಸ್ಯುಂಡು—ಹಾಸಿ+ಉಂಡು—ಹಾಸಿಕೊಂಡು ಊಟಮಾಡಿ. ಒಗೆ—ಎಸೆ. ಬಿಸಾಡು.

೩. ಬಂಧನ—ಸಂಕಟ. ಹಿಂಸೆ. ಹಂಗು—ಮೂದಲಿಕೆ. ಬಾಸ—(ಬೋಸ) ಅನ್ನ. ಮರ್ತ್ಯ—ಭೂಮಿ. ಜಗತ್ತು. ಬಂಜೆ—ಮಕ್ಕಳಿಲ್ಲದವಳು. ವಂಧ್ಯಾ (ತ್ಸ). ಶಬುದ (ದ್ಭ) ಶಬ್ದ (ತ್ಸ).

೪. ಮಿಡಿ—ಕಾಯಿ.

ಪ್ರಶ್ನೆಗಳು :

೧. ತಾಯಿ ತನ್ನ ಕಂದನಲ್ಲಿ ತೋರುವ ಅಕ್ಕರೆ ಇಲ್ಲಿ ಹೇಗೆ ಚಿತ್ರಿತವಾಗಿದೆ ? ಇದರ ಸ್ವಾರಸ್ಯವೇನು ?

೨. ಬಂಜೆಯ ಬಾಳು ವ್ಯರ್ಥವೆಂಬುದನ್ನು ಕವಿ ಹೇಗೆ ಚಿತ್ರಿಸಿದ್ದಾನೆ ? ಇದರ ಸ್ವಾರಸ್ಯವೇನು ?

೩. ಮಕ್ಕಳಿಲ್ಲದ ತಾಯಿ ಮಗುವಿಗಾಗಿ ಹಂಬಲಿಸುವುದನ್ನು ನಿಮ್ಮ ಮಾತುಗಳಲ್ಲಿ ಚಿತ್ರಿಸಿ.

೪. ಹೆಣ್ಣುಮಗಳು ಕಂದನನ್ನು ಬೇಡುತ್ತ ಶಿವನ ಮುಂದೆ ತೋಡಿಕೊಂಡ ಸಂಕಟವೇನು ?

೫. ಇದರಲ್ಲಿ ಕಾಣಬರುವ ಕಾವ್ಯಸೌಂದರ್ಯವನ್ನು ನಿರೂಪಿಸಿ.

ಈ ವಾಕ್ಯಗಳಿಗೆ ಸಂದರ್ಭಸಹಿತ ಅರ್ಥ ವಿವರಣೆಯನ್ನು ಕೊಡಿ :

೧. "ಬಾಡೀಗಿ ಎತ್ತು ಮಡಿದಂಗ."

೨. "ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದಂಗ."—

ಮೇಲಿನ ಎರಡು ವಾಕ್ಯಗಳಲ್ಲಿ ಕಾಣಬರುವ ಅಲಂಕಾರವನ್ನು ತಿಳಿಸಿ.

***

# ೨೦. ಕನ್ನಡ ಜನಪದ

**ನೃಪತುಂಗ**

ಕಾವೇರಿಯಿಂದಮಾ ಗೋ
ದಾವರಿವರಮಿರ್ಪ ನಾಡದಾ ಕನ್ನಡದೊಳ್‌
ಭಾವಿಸಿದ ಜನಪದಂ ವಸು
ಧಾವಳಯವಿಲೀನವಿಶದವಿಷಯವಿಶೇಷಂ ॥ ೧ ॥

ಅದಱೊಳಗಂ ಕಿಸುವೊೞಲಾ
ವಿದಿತಮಹಾಕೊಪಣನಗರದಾ ಪುಲಿಗೆಱೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್‌ ॥ ೨ ॥

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್‌
ಚದುರರ್‌ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್‌ ॥ ೩ ॥

ಕುಱಿತವರಲ್ಲದೆ ಮತ್ತಂ
ಪೆಱರುಂ ತಂತಮ್ಮ ನುಡಿಯೊಳೆಲ್ಲರ್‌ ಜಾಣರ್‌
ಕಿಱುವಕ್ಕಳುಮಾ ಮೂಗರು
ಮಱಿಪಲ್ಕಱಿವರ್‌ ವಿವೇಕಮಂ ಮಾತುಗಳಂ ॥ ೪ ॥

## ಟಿಪ್ಪಣಿ

ಕವಿ–ಕಾವ್ಯಪರಿಚಯ :—

ಈ ಪದ್ಯಗಳನ್ನು 'ಕವಿರಾಜಮಾರ್ಗ'ದಿಂದ ಆಯ್ದುಕೊಳ್ಳಲಾಗಿದೆ. ಇದರ ಕರ್ತೃ ಯಾರೆಂಬುದರ ಬಗ್ಗೆ ಒಮ್ಮತ ಅಭಿಪ್ರಾಯವಿಲ್ಲ. ಇದರ ಕರ್ತೃ ರಾಷ್ಟ್ರಕೂಟರಾಜನಾದ ನೃಪತುಂಗನೆಂದು ಕೆಲವರೂ, ಆತನ ಆಸ್ಥಾನಕವಿ ಶ್ರೀವಿಜಯನೆಂದು ಮತ್ತೆ ಕೆಲವರೂ ಅಭಿಪ್ರಾಯಪಡುತ್ತಾರೆ. 'ಕವಿರಾಜಮಾರ್ಗ' ವು ಕಾವ್ಯಲಕ್ಷಣವನ್ನು ತಿಳಿಸುವ ಒಂದು ಶಾಸ್ತ್ರ ಗ್ರಂಥ. ಕಾವ್ಯಲಕ್ಷಣವನ್ನು ತಿಳಿಯಬೇಕೆಂಬ ಕವಿಗಳಿಗೆ ಇದೊಂದು ರಾಜಮಾರ್ಗವಿದ್ದಂತೆ. ಈಗ ಸಮಗ್ರವಾಗಿ ಸಿಕ್ಕಿರುವ ಕನ್ನಡಗ್ರಂಥಗಳಲ್ಲಿ ಇದೇ ಮೊಟ್ಟಮೊದಲನೆಯದು.

ಕವಿರಾಜಮಾರ್ಗದ ಕರ್ತೃ ಕನ್ನಡನಾಡು, ನುಡಿ, ಸಂಸ್ಕೃತಿಗಳನ್ನು ಕುರಿತು ಆರ್ದ್ರ ಹೃದಯದಿಂದ ಬರೆದಿದ್ದಾನೆ. ಇಲ್ಲಿ ಕೊಟ್ಟಿರುವ ನಾಲ್ಕು ಪದ್ಯಗಳು ಇದಕ್ಕೆ ಸೊಗಸಾದ ಉದಾಹರಣೆಗಳು.

ಕಠಿಣಪದಗಳ ಅರ್ಥ :

ಪದ್ಯ ೧ : ವರಂ—ವರೆಗೆ. ಜನಪದ—ದೇಶ. ವಸುಧಾವಳಯ—ಭೂಮಂಡಲ. ವಸುಧೆ(ದ್ಭ) ವಸುಧಾ (ತ್ಸ). ವಿಲೀನ—ಸೇರಿದ ; ಒಳಗೊಂಡ. ವಿಶೇಷ—ವಿಶಿಷ್ಟವಾದ ಭೂಮಿ. ವಿಶದ—ಸುಂದರವಾದ ; ಪ್ರಕಾಶಮಾನವಾದ.

ಈ ಪದ್ಯದಲ್ಲಿ ಒಂಬತ್ತನೆಯ ಶತಮಾನದ ಕನ್ನಡನಾಡಿನ ಎಲ್ಲೆಯನ್ನು ಸೂಚಿಸಲಾಗಿದೆ.

ಪದ್ಯ ೨ : ಸದಭಿಸ್ತುತ—ಸ್ತೋತ್ರಪಾತ್ರವಾದ ; ಹೊಗಳಿಕೆಗೆ ಯೋಗ್ಯವಾದ. ನಾಡೆ—ದೇಶವೇ. ನಾಡೆ—ವಿಶೇಷವಾಗಿ.

ಪದ್ಯ ೩ : ಪದನಱಿದು—ಹದವರಿತು. ನುಡಿದುದನು + ಅಱಿದು + ಆರಯಲು + ಆರ್ಪರ್. ಆರಯ್—ವಿಮರ್ಶಿಸು ; ವಿಚಾರಮಾಡು. ಆರ್ಪರ್—ಸಮರ್ಥರಾಗುತ್ತಾರೆ. ನಾಡವರ್—ನಾಡ+ಅವರ್ (ಸ್ವ.ಲೋ.ಸಂ) ನಾಡಿನವರು. ನಿಜದಿಂ—ಸ್ವಾಭಾವಿಕವಾಗಿಯೇ. ಕುಱಿತು—ಉದ್ದೇಶಿಸಿ. ಪರಿಣತಮತಿ—ಪ್ರೌಢವಾದ ಬುದ್ಧಿ. ಅಱಿ—ತಿಳಿ. ಅರಿ—ಶತ್ರು (ನಾ), ಅರಿ—ಕತ್ತರಿಸು (ಧಾ)

ಈ ಪದ್ಯದಲ್ಲಿ ಕನ್ನಡಿಗರ ಪ್ರೌಢಿಮೆಯನ್ನು ಸೂಚಿಸಲಾಗಿದೆ.

ಕಿಸುವೊಳಲು, ಕೊಪಣನಗರ, ಪುಲಿಗೆಱೆ ಮತ್ತು ಒಕ್ಕುಂದ ಈ ನಾಲ್ಕುನಗರಗಳೂ ಈಗ ಕ್ರಮವಾಗಿ ಪಟ್ಟದಕಲ್ಲು, ಕೊಪ್ಪಳ, ಲಕ್ಷ್ಮೇಶ್ವರ ಮತ್ತು ಒಕ್ಕುಂದ ಎಂಬ ಹೆಸರುಗಳಿಂದ ಉಳಿದುಕೊಂಡು ಬಂದಿವೆ. ಈ ನಾಲ್ಕು ನಗರಗಳು ಕನ್ನಡನುಡಿದೇವಿಯ ಚಿತ್ರಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಹಚ್ಚಿಟ್ಟ ನಂದಾದೀಪಗಳಂತೆ ಭಾಸವಾಗುತ್ತವೆ.

ಪದ್ಯ ೪ : ಕಿಱುವಕ್ಕಳು—ಕಿಱು + ಮಕ್ಕಳು—ಎಳೆಯ ಮಕ್ಕಳು (ಇಲ್ಲಿ ಮಕಾರಕ್ಕೆ ವಕಾರ ಬಂದಿರುವುದನ್ನು ಗಮನಿಸಿ).

ಪ್ರಶ್ನೆಗಳು :

೧. ಕನ್ನಡನಾಡಿನ ಎಲ್ಲೆ ಮತ್ತು ನಾಡಿನವರ ಗುಣ ಸ್ವಭಾವಗಳು ಹೇಗಿದ್ದುವೆಂದು ನೃಪತುಂಗನು ವರ್ಣಿಸಿದ್ದಾನೆ ? ತಿಳಿಸಿ.

೨. ಕನ್ನಡದ ತಿರುಳಿನಂತಿದ್ದ ಊರುಗಳಾವುವು ?

ಈ ಮಾತುಗಳನ್ನು ಸಂದರ್ಭದೊಡನೆ ಸ್ಪಷ್ಟೀಕರಿಸಿ :

೧. " ಕುಱಿತೋದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ "

೨. " ನುಡಿದುದನಱಿದಾರಯಲುಮಾರ್ಪರಾ ನಾಡವರ್ಗಳ್ "

೩. " ಕಿಱುವಕ್ಕಳುಮಾ ಮೂಗರುಮಱಿಪಲ್ಕಱಿವರ್ ವಿವೇಕಮಂ ಮಾತುಗಳಂ "

ಛಂದಸ್ಸು :

ಪದ್ಯನಿಯಮವನ್ನು ತಿಳಿಸುವ ಶಾಸ್ತ್ರಕ್ಕೆ ಛಂದಶ್ಶಾಸ್ತ್ರವೆಂದು ಹೆಸರು. ಗಣ ಮತ್ತು ಪ್ರಾಸಗಳ ನಿಯಮಕ್ಕೆ ಅನುಗುಣವಾಗಿ ಜೋಡಿಸಿರುವ ಪದಗಳ ಸಮೂಹಕ್ಕೆ ಪದ್ಯವೆಂದು ಕರೆಯುವರು. ಪದ್ಯವು ಪಾದಗಳಿಂದ ಕೂಡಿರುವುದು. ಕನ್ನಡಸಾಹಿತ್ಯದಲ್ಲಿ ಸಂಸ್ಕೃತದಿಂದ ತೆಗೆದುಕೊಂಡಿರುವ ಛಂದಸ್ಸುಗಳೂ ಮತ್ತು ಅಚ್ಚಗನ್ನಡದ ಛಂದಸ್ಸುಗಳೂ ಇವೆ.

ಪ್ರಾಸ :—ಪದ್ಯದ ಪ್ರತಿಪಾದದ ಆದಿಯಲ್ಲಿಯೂ ಒಂದು ಮತ್ತು ಎರಡನೆಯ ಸ್ವರಗಳ ನಡುವೆ ಬರುವ ಒಂದೇ ವಿಧವಾದ ವ್ಯಂಜನಾಕ್ಷರವು ಪ್ರಾಸವೆನಿಸುವುದು.

ಉದಾ. :— ಕಾವೇರಿಯಿಂದಮಾ ಗೋ
ದಾವರಿವರಮಿರ್ಪ ನಾಡದಾ ಕನ್ನಡದೊಳ್

ಮಾತ್ರೆ :— ಒಂದು ಹ್ರಸ್ವಸ್ವರವನ್ನು ಉಚ್ಚರಿಸಲು ಬೇಕಾಗುವ ಕಾಲಪರಿಮಾಣಕ್ಕೆ " ಮಾತ್ರೆ " ಎಂದು ಹೆಸರು. (ಒಂದು ಚುಟಿಕೆ ಹೊಡೆಯುವಷ್ಟು ಕಾಲಪ್ರಮಾಣ).

ಲಘು :—ಒಂದು ಹ್ರಸ್ವಸ್ವರವನ್ನಾಗಲೀ, ಹ್ರಸ್ವಸ್ವರದೊಡನೆ ಕೂಡಿದ ವ್ಯಂಜನವನ್ನಾಗಲೀ ಉಚ್ಚರಿಸುವ ಕಾಲಕ್ಕೆ ಒಂದು ಮಾತ್ರೆ ಎಂದೂ, ಲಘುವೆಂದೂ ಕರೆಯುವರು. ಲಘುವಿಗೆ (◡) ಈ ಗುರುತು ಇಟ್ಟುಕೊಂಡಿರುವುದು ರೂಢಿ.

ಉದಾ. :— ◡ ◡ ◡   ◡ ◡
ಅ ವ ನು ; ವ ನ.

ಗುರು :—ಒಂದು ದೀರ್ಘಸ್ವರವನ್ನು ಉಚ್ಚರಿಸಲು " ಎರಡು ಮಾತ್ರೆ " ಯಷ್ಟು ಕಾಲಾವಧಿ ಬೇಕು. ಇದಕ್ಕೆ " ಗುರು " ಎಂದು ಹೆಸರು. ಗುರುವನ್ನು (—) ಈ ಚಿಹ್ನೆಯಿಂದ ಗುರುತಿಸುವುದು ವಾಡಿಕೆ.

ಗುರು ಆಗುವ ಸಂದರ್ಭಗಳನ್ನು ಈ ಕೆಳಗೆ ಉದಾಹರಣೆಯೊಂದಿಗೆ ತಿಳಿಸಿದೆ :—

೧. ದೀರ್ಘಸ್ವರ ಮತ್ತು ದೀರ್ಘಸ್ವರದಿಂದ ಕೂಡಿದ ವ್ಯಂಜನಾಕ್ಷರ.

ಊ ರು ; ಮೂ ಡು.

೨. ಅನುಸ್ವಾರ ಮತ್ತು ವಿಸರ್ಗದಿಂದ ಕೂಡಿದ ಅಕ್ಷರ.

ಭಂ ಗ ; ಅಂ ತಃ ಪು ರ.

೩. ಒತ್ತಕ್ಷರದ ಹಿಂದಿನ ಅಕ್ಷರ.

ಕ ಣ್ಣು ; ಮ ಕ್ಕ ಳು.

೪. ಸ್ವರರಹಿತ ವ್ಯಂಜನದ ಹಿಂದಿನ ಅಕ್ಷರ.

ಒಳ್ ; ಉಣ್.

[ಸ್ವರರಹಿತ ವ್ಯಂಜನ(ಸಹಜವ್ಯಂಜನ)ಕ್ಕೆ ಯಾವ ಗುರುತನ್ನೂ ಮಾಡಬಾರದು. ಅದರ ಹಿಂದಿನ ಅಕ್ಷರ ಮಾತ್ರ ಗುರುವಾಗುವುದು. ಇಲ್ಲಿ " ಳ್ " " ಣ್ " ಗಳು ಸ್ವರರಹಿತ ವ್ಯಂಜನಗಳು] .

೫. ಮಾತ್ರಾಗಣ ನಿಯಮದ ಪದ್ಯಾರ್ಧದ ಕಡೆಯ ಹ್ರಸ್ವಾಕ್ಷರ.

ಇನತನೂಜನ ಕೂಡೆ ಮೈದುನ
ತನದ ಸರಸವನೆಸಗಿ ರಥದಲಿ
ದನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀಠದಲಿ ॥

ಇಲ್ಲಿ ಪದ್ಯಾರ್ಧದ ಕೊನೆಯ ಹ್ರಸ್ವವಾದ ' ಲಿ ' ಎಂಬುದು ಲಘುವಾಗಿದ್ದರೂ ಸಹ ಛಂದೋನಿಯಮದಂತೆ ' ಗುರು 'ವಾಗುವುದು.

ಎರಡು ಕಾರಣಗಳಿಂದ ಗುರುಸಂಜ್ಞೆ ಬರುವಂತಿದ್ದರೂ ಸಹ ಒಂದೇ ಗುರುವನ್ನು ಮಾತ್ರ ಗುರುತಿಸಬೇಕು.

ಪ್ರಾ ರ್ಥ ನೆ ; ಶಾ ಸ್ತ್ರ.

ಇಲ್ಲಿ 'ಪ್ರಾ' ಮತ್ತು 'ಶಾ' ಗಳು ದೀರ್ಘಾಕ್ಷರಗಳಾಗಿರುವುದರಿಂದ ಗುರುವಾಗುವುವು. ಅಲ್ಲದೆ, ಅವರ ಮುಂದಿನ ಅಕ್ಷರಗಳು ಒತ್ತಕ್ಷರವಾಗಿರುವುದರಿಂದಲೂ ಗುರುವಾಗುವುವು. ಗುರುವಾಗಲು ಎರಡು ಕಾರಣಗಳಿದ್ದರೂ ಸಹ ಒಂದೇ ಗುರುವಾಗುವುದು.

ಒತ್ತಕ್ಷರವನ್ನು ತೇಲಿಸಿ ಉಚ್ಚರಿಸುವುದಕ್ಕೆ ಶಿಥಿಲದ್ವಿತ್ವವೆಂದು ಹೆಸರು. ಶಿಥಿಲದ್ವಿತ್ವದ ಹಿಂದಿನ ಹ್ರಸ್ವವು ಗುರುವಾಗದೆ ಲಘುವಾಗಿಯೇ ಉಳಿಯುವುದು.

⏑ ×<br>ಎ ರ್ದೆ ;

⏑ ⏑ ×<br>ಪೊ ಗ ಟ್ದೆ.

ಗಣಗಳು—ಗಣವೆಂದರೆ ಕೆಲವು ನಿಯಮಗಳಿಗನುಸಾರವಾಗಿ ವಿಂಗಡಿಸಿದ ಅಕ್ಷರಗಳ ಅಥವಾ ಮಾತ್ರೆಗಳ ಗುಂಪು. ಗಣಗಳಲ್ಲಿ ವರ್ಣಗಣ(ಅಕ್ಷರಗಣ)ವೆಂದೂ, ಮಾತ್ರಾಗಣವೆಂದೂ, ಅಂಶಗಣವೆಂದೂ ಮೂರು ವಿಧ.

ವರ್ಣಗಣ (ಅಕ್ಷರಗಣ)—ವರ್ಣಗಣದಿಂದ ಕೂಡಿದ ಪಾದವುಳ್ಳ ವೃತ್ತಗಳನ್ನು ಮೂರು ಮೂರು ಅಕ್ಷರಗಳ ಒಂದೊಂದು ಗುಂಪುಮಾಡಿ ಅದನ್ನು ಒಂದು 'ಗಣ'ವೆಂದು ಗಣಿಸಿರುವರು. ಈ ವರ್ಣಗಣಗಳನ್ನು ಮಗಣ, ನಗಣ, ಭಗಣ, ಯಗಣ, ಜಗಣ, ರಗಣ, ಸಗಣ ಮತ್ತು ತಗಣಗಳೆಂದು ಎಂಟು ವಿಧವಾಗಿ ವಿಂಗಡಿಸಿದ್ದಾರೆ. ಇವುಗಳ ಲಕ್ಷಣವನ್ನು ಈ ಕೆಳಗಿನ ಪದ್ಯದಲ್ಲಿ ಸೂಚಿಸಲಾಗಿದೆ :—

ಗುರು ಲಘು ಮೂರಿರೆ ಮ ನಗಣ
ಗುರು ಲಘು ಮೊದಲಲ್ಲಿ ಬರಲು ಭ ಯಗಣಮಿತ್ತಾ
ಗುರು ಲಘು ನಡುವಿರೆ ಜ ರಗಣ
ಗುರು ಲಘು ಕಡೆಯಲ್ಲಿ ಬರಲು ಸ ತಗಣಮಕ್ಕುಂ ॥

ಇವುಗಳನ್ನು ಹೀಗೆ ವಿಂಗಡಿಸಬಹುದು.

ಗುರು ಮೂರಿರೆ — — — (ಸರ್ವಗುರು) ಮಗಣ.
ಲಘು ಮೂರಿರೆ ⏑ ⏑ ⏑ (ಸರ್ವಲಘು) ನಗಣ.
ಗುರು ಮೊದಲಲ್ಲಿ ಬರೆ — ⏑ ⏑ (ಆದಿಗುರು) ಭಗಣ.
ಲಘು ಮೊದಲಲ್ಲಿ ಬರೆ ⏑ — — (ಆದಿಲಘು) ಯಗಣ.
ಗುರು ನಡುವಿರೆ ⏑ — ⏑ (ಮಧ್ಯಗುರು) ಜಗಣ.
ಲಘು ನಡುವಿರೆ — ⏑ — (ಮಧ್ಯಲಘು) ರಗಣ.
ಗುರು ಕಡೆಯಲ್ಲಿ ಬರೆ ⏑ ⏑ — (ಅಂತ್ಯಗುರು) ಸಗಣ.
ಲಘು ಕಡೆಯಲ್ಲಿ ಬರೆ — — ⏑ (ಅಂತ್ಯ ಲಘು) ತಗಣ

ಸಂಸ್ಕೃತ ಭಾಷೆಯಲ್ಲಿ ಅಪಾರ ವೃತ್ತಗಳಿವೆ. ಅವುಗಳಲ್ಲಿ ಆರು ವೃತ್ತಗಳು ಕನ್ನಡ ಭಾಷೆಯಲ್ಲಿ ವಿಶೇಷವಾಗಿ ಪ್ರಚಾರದಲ್ಲಿವೆ. ಆ ಆರು ವೃತ್ತಗಳ ಹೆಸರನ್ನೂ ಮತ್ತು ಅವುಗಳ ಲಕ್ಷಣಗಳನ್ನೂ ನಾಗವರ್ಮನು ಈ ಕೆಳಗಿನ ವೃತ್ತದಲ್ಲಿ ನಿರೂಪಿಸಿದ್ದಾನೆ :—

ಗುರುವೊಂದಾದಿಯೊಳುತ್ಪಲಂ, ಗುರು ಮೊದಲ್ ಮೂಱಾಗೆ ಶಾರ್ದೂಲಮಾ
ಗುರುನಾಲ್ಕಾಗಿರಲಂತು ಸ್ರಗ್ಧರೆ, ಲಘುದ್ವಂದ್ವಂ ಗುರುದ್ವಂದ್ವಮಾ
ಗಿರೆ ಮತ್ತೇಭ, ಲಘುದ್ವಯಂ ತ್ರಿಗುರುವಿಂದಕ್ಕುಂ ಮಹಾಸ್ರಗ್ಧರಂ.
ಹರಿಣಾಕ್ಷೀ, ಲಘುನಾಲ್ಕು [illegible]ಮಾಱುಂ ಖ್ಯಾತಕರ್ಣಾಟಕಂ ॥

೧. ಉತ್ಪಲಮಾಲಾವೃತ್ತ :—

ಉತ್ಪಲಮಾಲೆಯಪ್ಪುದು ಭರಂ ಸ[illegible]ಂ ರಲಗಂನೆಗಟ್ಟಿರಲ್

| ಭ | ರ | ಸ | ಭ | ಭ | ರ | ಲ | ಗು |
|---|---|---|---|---|---|---|---|
| — U U | — U — | U U U | — U U | — U U | — U — | U | — |
| ಪಂ ಕ ಜ | ಮಾಂ ಸುಹೃ | ದ್ವ ದ ನ | ಪಂ ಕ ಜ | ಮಾಂ ಮುಗಿ | ವ ನ್ನ ಮ | ಗ್ರ | ತೇ |

ವೃತ್ತಗಳಲ್ಲಿ ನಾಲ್ಕು ಪಾದಗಳಿದ್ದು, ಪ್ರತಿಪಾದವೂ ಸಮವಾಗಿರುತ್ತವೆ.

ಉತ್ಪಲಮಾಲಾವೃತ್ತದ ಪ್ರತಿಪಾದದಲ್ಲಿಯೂ ಇಪ್ಪತ್ತು ಅಕ್ಷರಗಳಿದ್ದು ಭ. ರ. ನ, ಭ, ಭ, ರ ಗಣಗಳೂ, ಒಂದು ಲಘು ಮತ್ತು ಒಂದು ಗುರುವೂ ಇರುತ್ತವೆ.

೨. ಶಾರ್ದೂಲವಿಕ್ರೀಡಿತ :—

ಕಣ್ಗೊಪ್ಪಲ್ ಮಸಜಂ ಸತಂತಗಮುಮಾ ಶಾರ್ದೂಲವಿಕ್ರೀಡಿತಂ

| ಮ | ಸ | ಜ | ಸ | ತ | ತ | ಗು |
|---|---|---|---|---|---|---|
| — — — | U U — | U — U | U U — | — — U | — — U | — |
| ಸೊಲ್ಲುಂ ಜೇ | ವಗುಣಂ | ಗಳೇವ | ಋಷಿದಯರ್ | ರ ತ್ನಾ ಕ | ರಾಧೀಶ್ವ | ರಾ |

ಶಾರ್ದೂಲವಿಕ್ರೀಡಿತವೃತ್ತದ ಪ್ರತಿಪಾದದಲ್ಲಿಯೂ ಮ. ಸ, ಜ, ಸ. ತ, ತ, ಗಣಗಳೂ ಮತ್ತು ಒಂದು ಗುರುವೂ ಇರುತ್ತವೆ.

೩. ಸ್ರಗ್ಧರಾವೃತ್ತ :—

ತೋಱಲ್ ಮಂರಂಭನಂ ಮೂಯಗಣಮುಮದೆತಾಂ ಸ್ರಗ್ಧರಾವೃತ್ತಮಕ್ಕುಂ.

| ಮ | ರ | ಭ | ಸ | ಯ | ಯ | ಯ |
|---|---|---|---|---|---|---|
| — — — | — U — | — U U | U U U | U — — | U — — | U — — |
| ತೀ ವೃತ್ತಿ | ಪರ್ಣ್ಣಗಂ | ಭೂಷಣ | ರುಚಿ ಕ | ಕುಭಾಸೀ | ಕಮಂರಾ | ಜಲೋಕಂ |

ಸ್ರಗ್ಧರಾವೃತ್ತದ ಪ್ರತಿಪಾದದಲ್ಲಿಯೂ ಮ. ರ. ಭ. ಸ, ಯ. ಯ, ಯ, ಗಣಗಳು ಇರುತ್ತವೆ,

೪. ಮತ್ತೇಭವಿಕ್ರೀಡಿತ :—

ಸಭರಂ ನಂಮಯ ಲಂಗಮುಂ ಬಗೆಗೊಳಲ್ ಮತ್ತೇಭವಿಕ್ರೀಡಿತಂ.

| ಸ | ಭ | ರ | ನ | ಮ | ಯ | ಲ | ಗು |
|---|---|---|---|---|---|---|---|
| ∪ ∪ — | — ∪ ∪ | — ∪ — | ∪ ∪ ∪ | — — — | ∪ — — | ∪ | — |
| ಇ ದುಪಂ | ನೋಡುವ | ನಿನ್ನು ಮ | ನ್ನೊಡಲೊ | ಳೆ ನ್ನೀ ಪ್ರಾ | ಣಮುಳ್ಳ | ನ್ನ | ಮೋ |

ಮತ್ತೇಭವಿಕ್ರೀಡಿತವೃತ್ತದ ಪ್ರತಿಪಾದದಲ್ಲಿಯೂ ಸ, ಭ, ರ, ನ, ಮ, ಯ ಗಣಗಳೂ ಮತ್ತು ಒಂದು ಲಘು ಮತ್ತು ಒಂದು ಗುರು ಇರುತ್ತವೆ.

೫. ಮಹಾಸ್ರಗ್ಧರಾವೃತ್ತ :—

ಸತತಂ ನಂಸಂರರಂಗಂ ನೆರೆದೆಸೆಯೆ ಮಹಾಸ್ರಗ್ಧರಾವೃತ್ತಮಕ್ಕುಂ.

| ಸ | ತ | ತ | ನ | ಸ | ರ | ರ | ಗು |
|---|---|---|---|---|---|---|---|
| ∪ ∪ — | — — ∪ | — — ∪ | ∪ ∪ ∪ | ∪ ∪ — | — ∪ — | — ∪ — | — |
| ಮೊದಲೊಳ್ | ರಾಜ್ಯಾಭಿ | ಷೇಕ ಪ್ರ | ಬಲಜ | ಲಮೆಕ | ರ್ಚಿ ತ್ತುದಾ | ಕ್ಷಿಣ್ಯಮಂ | ಹೋ |

ಮಹಾಸ್ರಗ್ಧರಾವೃತ್ತದ ಪ್ರತಿಪಾದದಲ್ಲಿಯೂ ಸ, ತ, ತ, ನ, ಸ. ರ. ರ ಗಣಗಳೂ ಮತ್ತು ಒಂದು ಗುರುವೂ ಇರುತ್ತವೆ.

೬. ಚಂಪಕಮಾಲಾವೃತ್ತ :—

ನಜಭಜ ಜಂಜರಂ ಬಗೆಗೊಳ್ಳುತ್ತಿರೆ ಚಂಪಕಮಾಲೆಯೆಂದಪರ್.

| ನ | ಜ | ಭ | ಜ | ಜ | ಜ | ರ |
|---|---|---|---|---|---|---|
| ∪ ∪ ∪ | ∪ — ∪ | — ∪ ∪ | ∪ — ∪ | ∪ — ∪ | ∪ — ∪ | — ∪ — |
| ಬೆಳೆದ | ಜಿಗಿರ್ದ | ಕಯ್ಪೊಲ | ನೆಕಯ್ಪೊ | ಲನಂಬ | ಳಸಿರ್ದ | ಪೂತಪೂ |

ಚಂಪಕಮಾಲಾವೃತ್ತದ ಪ್ರತಿ ಪಾದದಲ್ಲಿಯೂ ನ, ಜ. ಭ, ಜ. ಜ, ಜ, ರ, ಗಣಗಳು ಇರುತ್ತವೆ.

ಮಾತ್ರಾಗಣ :—ಅಕ್ಷರಗಳನ್ನು ಗುಂಪುಗಳಾಗಿ ಮಾಡಿದಂತೆಯೇ ಮೂರು. ನಾಲ್ಕು, ಐದು ಮಾತ್ರೆಗಳನ್ನು ಒಂದೊಂದು ಗುಂಪನ್ನಾಗಿ ಮಾಡಿ ಅವುಗಳನ್ನು ಮಾತ್ರಾಗಣವೆಂದು ಕರೆಯುತ್ತಾರೆ. ಷಟ್ಪದಿ. ಕಂದ ಮೊದಲಾದುವು ಮಾತ್ರಾಗಣಕ್ಕೆ ಸೇರಿವೆ.

---

ಷಟ್ಪದಿ :—ಷಟ್ಪದಿಗಳಲ್ಲಿ ಆರು ಪಾದಗಳಿರುತ್ತವೆ. ಒಂದು, ಎರಡು, ನಾಲ್ಕು ಮತ್ತು ಐದನೆಯ ಪಾದಗಳು ಒಂದು ಸಮವಾಗಿಯೂ; ಮೂರು ಮತ್ತು ಆರನೆಯ ಪಾದಗಳು ಒಂದು ಸಮವಾಗಿಯೂ ಇರುತ್ತವೆ. ಮೂರು ಮತ್ತು ಆರನೆಯ ಪಾದಗಳು ಉಳಿದ ನಾಲ್ಕು ಪಾದಗಳ ಒಂದೂವರೆಯಷ್ಟಿರುತ್ತವೆ.

ಷಟ್ಪದಿಗಳಲ್ಲಿ ಶರ. ಕುಸುಮ. ಭೋಗ. ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕ ಷಟ್ಪದಿಗಳೆಂದು ಆರು ವಿಧ. ಇಲ್ಲಿ ನಿಮ್ಮ ಪಠ್ಯಭಾಗದಲ್ಲಿ ಬಂದಿರುವ ಭಾಮಿನಿ ಮತ್ತು ವಾರ್ಧಕಷಟ್ಪದಿಯ ಲಕ್ಷಣಗಳನ್ನು ಮಾತ್ರ ಕೊಡಲಾಗಿದೆ.

ಭಾಮಿನೀಷಟ್ಪದಿ :

UUU | —UU | —U | —UU |
ಇನಸುತ | ನೂಜನ | ಕೊಡೆ | ಮೈದುನ |

UUU | UUUU | UUU | UUUU |
ತನದ | ಸರಸವ | ನೆಸಗಿ | ರಥದಲಿ |

UUU | UUUU | UUU | —UU | UUU | —UU | —
ದನುಜ | ರಿಪ್ರಬರ | ಸೆಳೆದು | ಕುಳ್ಳಿರಿ | ಸಿದನು | ಪೀತದ | ಲಿ

ಒಂದು. ಎರಡು. ನಾಲ್ಕು. ಐದನೆಯ ಪಾದಗಳಲ್ಲಿ ಮೂರುಮಾತ್ರೆಯ ಗಣದ ಮುಂದೆ ನಾಲ್ಕುಮಾತ್ರೆಯ ಗಣಗಳು ಎರಡೆರಡೂ; ಮತ್ತು. ಮೂರು. ಆರನೆಯ ಪಾದಗಳಲ್ಲಿ ಮೂರು ಮಾತ್ರೆಯ ಗಣದ ಮುಂದೆ ನಾಲ್ಕುಮಾತ್ರೆಯ ಗಣಗಳು ಮೂರುಮೂರೂ ಮತ್ತು ಒಂದು ಗುರುವೂ ಇರುತ್ತವೆ.

ಪಾದ ಒಂದು—೩ + ೪; + ೩ + ೪ = ೧೪.
ಪಾದ ಎರಡು—೩ + ೪; + ೩ + ೪ = ೧೪.
ಪಾದ ಮೂರು—೩ + ೪; + ೩ + ೪; + ೩ + ೪; + ೨ = ೨೩ = ೫೧.

ಪದ್ಯದ ಮೊದಲ ಮೂರು ಸಾಲುಗಳಿಗೆ ಪೂರ್ವಾರ್ಧವೆಂದೂ. ಕೊನೆಯ ಮೂರು ಸಾಲುಗಳಿಗೆ ಉತ್ತರಾರ್ಧವೆಂದೂ ಹೆಸರು. ಇಲ್ಲಿ ಪೂರ್ವಾರ್ಧಕ್ಕೆ ಮಾತ್ರ ಪ್ರಸ್ತಾರ ಹಾಕಲಾಗಿದೆ. ಉತ್ತರಾರ್ಧವೂ ಇದೇ ಲಕ್ಷಣವನ್ನು ಹೊಂದಿರುತ್ತದೆ. ಭಾಮಿನೀ ಷಟ್ಪದಿಯಲ್ಲಿ ಒಟ್ಟು ೧೦೨ ಮಾತ್ರೆಗಳಿರುತ್ತವೆ.

ವಾರ್ಧಕಷಟ್ಪದಿ :—

—U— | U U —U | —U — | — U— |
ಆಲಿಸ | ಜರ್ಣಿ ಮುನ್ನ | ವಿಪ್ರನುಂ | ಟೋರ್ವನು | ೫ × ೪ = ೨೦

— U — — U U U | U U U — | — U — |
ದ್ದಾ ಲಿ ಕಾ ಪ್ರಿಂ ತಿ ಳಿ ದ | ನ ಶಿ ಲಿ ಶಾ | ಸ್ತ್ರಂ ಗ ಳಂ | ೫ × ೪ = ೨೦

—U— | —U — | U U—U | — —U | —U — | —UU U—
ಮೇಲೆಪ್ಪ | ವಾಹದೊಳ್ | ವಧುವಾದ | ಛಾತಂಗೆ | ಚಂಡಿಯೆಂ | ಬಾಕೆ ಬಳಿಕ

= ೫ × ೬ = ೩೦ + ೨ = ೩೨.

ಒಂದು, ಎರಡು, ನಾಲ್ಕು ಮತ್ತು ಐದನೆಯ ಪಾದಗಳಲ್ಲಿ ಐದುಮಾತ್ರೆಯ ನಾಲ್ಕು ಗಣಗಳೂ; ಮೂರು ಮತ್ತು ಆರನೆಯ ಪಾದಗಳಲ್ಲಿ ಐದುಮಾತ್ರೆಯ ಆರು ಗಣಗಳೂ ಮತ್ತು ಒಂದು ಗುರುವೂ ಇರುವುವು.

ಒಂದು, ಎರಡು, ನಾಲ್ಕು ಮತ್ತು ಐದನೆಯ ಪಾದಗಳಲ್ಲಿ ಪ್ರತಿಪಾದದಲ್ಲಿಯೂ ೨೦ಮಾತ್ರೆಗಳೂ, ಮೂರು, ಆರನೆಯ ಪಾದಗಳಲ್ಲಿ ಪ್ರತಿಪಾದದಲ್ಲಿಯೂ ೩೦+೨=೩೨ ಮಾತ್ರೆಗಳೂ ಇದ್ದು ವಾರ್ಧಕಷಟ್ಪದಿಯಲ್ಲಿ ಒಟ್ಟು ೧೪೪ ಮಾತ್ರೆಗಳು ಇರುತ್ತವೆ.

ಕಂದಪದ್ಯ :

೧ ೨ ೩
— — | ∪ — ∪ | — — |
ಕಾ ವೇ | ರಿ ಯಿಂದ | ಮಾ ಗೋ | ೪ × ೩ = ೧೨

೪ ೫ ೬ ೭ ೮
— ∪ ∪ | ∪ ∪ — | ∪ — ∪ | — — | ∪ ∪ — |
ದಾವರಿ | ಪರ ಮಿ | ರ್ಷನಾಡ | ದಾ ಕ | ನ್ನಡದೊಳ್ | ೪ × ೫ = ೨೦

೯ ೧೦ ೧೧
— ∪ ∪ | ∪ ∪ ∪ ∪ | — ∪ ∪
ಭಾವಿಸಿ | ದ ಜನಪ | ದಂ ವಸು ೪ × ೩ = ೧೨

೧೨ ೧೩ ೧೪ ೧೫ ೧೬
— ∪ ∪ | ∪ ∪ — | ∪ ∪ ∪ ∪ | ∪ ∪ ∪ ∪ | — — |
ಧಾ ವಳ | ಯುವಿ ಲೀ | ನ ವಿ ಶ ದ | ವಿಷಯ ವಿ | ಶೇ ಷಂ | ೪ × ೫ = ೨೦

೬೪

ಕಂದಪದ್ಯದಲ್ಲಿ ನಾಲ್ಕು ಪಾದಗಳಿರುತ್ತವೆ. ಒಂದು ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕುಮಾತ್ರೆಯ ಮೂರು ಗಣಗಳೂ: ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ ನಾಲ್ಕುಮಾತ್ರೆಯ ಐದು ಗಣಗಳೂ ಇರುತ್ತವೆ. ಇವುಗಳಲ್ಲಿ ಒಂದು, ಮೂರು, ಐದು, ಏಳನೆಯ ಗಣಗಳು ಜಗಣ(∪—∪)ವಾಗಿರಬಾರದು. ಪದ್ಯದ ಆರನೆಯ ಸ್ಥಾನದಲ್ಲಿ ಜಗಣ(∪—∪)ವಾಗಲಿ, ಸರ್ವಲಘು(∪∪∪∪)ವುಳ್ಳ ಗಣವಾಗಲೀ ಇರಬೇಕು. ಎಂಟನೆಯ ಸ್ಥಾನದಲ್ಲಿ ಅಂತ್ಯಗುರುವುಳ್ಳ(∪ ∪ —)ಗಣ ಅಥವಾ( — —)ಎರಡು ಗುರುವುಳ್ಳ ಗಣವಾಗಲೀ ಇರಬೇಕು.

ಅಂಶಗಣ :

ತ್ರಿಪದಿ, ಸಾಂಗತ್ಯಗಳು ಅಂಶಗಣಕ್ಕೆ ಸೇರಿವೆ.

ತ್ರಿಪದಿ :

ಜಾನಪದ ಗೀತೆಗಳಾದ ಗರತಿಯ ಹಾಡುಗಳು ತ್ರಿಪದಿಯಲ್ಲಿ ರಚಿತವಾಗಿವೆ. ತ್ರಿಪದಿಯು ಮೂಲತಃ ಅಂಶಗಣದಿಂದ ಕೂಡಿದ್ದು, ಕಾಲಾನಂತರದಲ್ಲಿ ಈ ಅಂಶಗಣ ಮಾತ್ರಾಗಣವಾಗಿ ಮಾರ್ಪಟ್ಟು ಐದುಮಾತ್ರೆಯ ಗಣದ ಧಾಟಿಯಲ್ಲಿ ಹರಿಯುತ್ತದೆ.

ತ್ರಿಪದಿಯಲ್ಲಿ ಮೂರು ಚರಣಗಳು. ಮೊದಲನೆಯ ಚರಣದ ಎರಡು ಗಣಗಳಾದ ಮೇಲೆ ಅನುಪ್ರಾಸ, ಮತ್ತೆ ಎರಡು ಗಣಗಳು ; ಎರಡನೆಯ ಚರಣದ ಮೂರು ಗಣಗಳಾದ ಮೇಲೆ ಯತಿ ಮತ್ತು ಪುನರಾವೃತ್ತಿ, ಮತ್ತೆ ಒಂದು ಗಣ; ಮೂರನೆಯ ಚರಣದಲ್ಲಿ ೩ ಗಣಗಳು.

ಉದಾ. :—

| ವಿ | ವಿ | ವಿ | ವಿ |
|---|---|---|---|
| — U — | U U — U | — — U | U U — U |
| ಆಡಿಬಾ | ನನಕಂದ | ಅಂಗಾಲ | ತೊಳೆದೇನು |

| ವಿ | ಬ್ರ | ವಿ | ವಿ |
|---|---|---|---|
| — U U | — U | U U — U | — — U |
| ತೆಂಗಿನ | ಕಾಯಿ | ತಿಳಿನೀರು | ತಕ್ಕೊಂಡು |

| ವಿ | ಬ್ರ | ವಿ |
|---|---|---|
| — — U | — U | U U — U |
| ಬಂಗಾರ | ಮೋರೆ | ತೊಳೆದೇನು |

ಸಾಂಗತ್ಯದ ಒಂದು ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ವಿಷ್ಣುಗಣಗಳೂ, ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ ಎರಡು ವಿಷ್ಣುಗಣಗಳೂ. ಕೊನೆಯಲ್ಲಿ ಒಂದು ಬ್ರಹ್ಮಗಣವೂ ಇರಬೇಕು. ವಿಷ್ಣುವಿಗೆ ಬದಲಾಗಿ ಅಲ್ಲಲ್ಲಿ ಬ್ರಹ್ಮಗಣವೂ ಬರಬಹುದು.

****

# ೨೧. ಕನ್ನಡನಾಡಿನ ಹಿರಿಮೆ

—ಪಂಪ

ಬೆಳೆದೆಸೆಗಿರ್ದ ಕಯ್ವೊಲನೆ ಕಯ್ವೊಲನಂ ಬಳಸಿರ್ದ ಪೂತ ಪೂ
ಗೊಳಗಳೆ ಪೂತ ಪೂಗೊಳಗಳಂ ಬಳಸಿರ್ದ ವಿಚಿತ್ರನಂದನಾ
ವಳಿಗಳೆ ನಂದನಾವಳಿಗಳಂ ಬಳಸಿರ್ದ ಮದಾಳಿಸಂಕುಲಂ
ಗಳೆ ವಿಷಯಾಂಗನಾಲುಳಿತಕುಂತಳದಂತೆವೊಲೊಪ್ಪಿ ತೋಱುಗುಂ ॥ ೧ ॥

ಆವಲರುಂ ಪಣ್ಣುಂ ಬೇ
ತೋವವು ಗಡ ಬೇಯುವಲ್ಲಿ ಮಲ್ಲಿಗೆಗಳುಮಿ
ಮ್ಮಾವುಗಳುಮಂದೊಡಿನ್ ಪೆಱ
ತಾವುದು ಸಂಸಾರಸಾರಸರ್ವಸ್ವಫಲಂ ॥ ೨ ॥

ಮಿಡಿದೊಡೆ ತನಿಗರ್ಬಿ ರಸಂ
ಬಿಡುವುವು ಬಿರಿದೊಂದು ಮುಗುಳ ಕಂಪಿನೊಳೆ ಪೊಗಂ
ಗಿಡುವುವು ತುಂಬಿಗಳಟ್ಟಿಮೆ
ಪಡುವುವು ಕುಡಿದೊಂದು ಪಣ್ಣರಸದೊಳೆ ಗಿಳಿಗಳ್ ॥ ೩ ॥

## ಟಿಪ್ಪಣಿ

ಕವಿ—ಕಾವ್ಯ ಪರಿಚಯ :

ಸ್ವರ್ಗಕ್ಕೆ ದೇವೇಂದ್ರನು ಹೇಗೋ, ಆಕಾಶಕ್ಕೆ ಸೂರ್ಯನು ಹೇಗೋ ಹಾಗೆ ಅಖಂಡ ಕನ್ನಡ ಜಗತ್ತಿಗೆ ಸತ್ಕವಿ ಪಂಪನು ಏಕೈಕಪ್ರಭುವಾಗಿರುವನೆಂದು ನಾಗರಾಜನೆಂಬ ಕನ್ನಡಕವಿಯೊಬ್ಬನು ಪಂಪನನ್ನು ಹೊಗಳಿದ್ದಾನೆ. ಹೀಗೆಯೇ ಇನ್ನೂ ಅನೇಕ ಕವಿಗಳು ಆತನ ರಸ, ಭಾವ, ಇಂಪು ಬೆಡಂಗುಗಳು ತಮ್ಮ ಕಾವ್ಯದಲ್ಲಿಯೂ ಬಂದು ನೆಲಸಲೆಂದು ಸ್ತುತಿರೂಪದ ಪುಷ್ಪಾಂಜಲಿಯನ್ನು

ಆತನಿಗೆ ಅರ್ಪಿಸುತ್ತಾರೆ. ಆದರೆ ಯಾರೂ ಆತನ ಮಟ್ಟವನ್ನು ಮುಟ್ಟಲಾರದೆ "ಕನ್ನಡಕ್ಕೊಬ್ಬನೆ ಕವಿ–ಪಂಪ" ಎಂಬ ವಾಣಿ ಅಮರವಾಣಿಯಾಗಿ ನಿಂತಿದೆ. ಸಂಸ್ಕೃತದಲ್ಲಿ ಕಾಳಿದಾಸನು ಹೇಗೋ ಹಾಗೆ ಕನ್ನಡದಲ್ಲಿ ಅಗ್ರಗಣ್ಯನೂ, ಅದ್ವಿತೀಯನೂ ಆದ ಈ ಮಹಾಕವಿಯನ್ನು 'ಆದಿಕವಿ' ಎಂದು ಕರೆಯುವುದು ವಾಡಿಕೆ.

ಕ್ರಿ. ಶ. ಹತ್ತನೆಯ ಶತಮಾನದ ಪೂರ್ವಾರ್ಧ (೯೦೨ ಅಥವಾ ೯೦೩ ನೆ ದುಂದುಭಿ ಸಂವತ್ಸರದಲ್ಲಿ ಜನಿಸಿದ ಪಂಪನು ಚಾಲುಕ್ಯರಾಜನಾದ ಅರಿಕೇಸರಿಯ ಮಂತ್ರಿಯಾಗಿ, ಸೇನಾಪತಿಯಾಗಿ, ಆಸ್ಥಾನಕವಿಯಾಗಿ, ಜೀವದ ಗೆಳೆಯನಾಗಿ ತುಂಬುಜೀವನವನ್ನು ನಡೆಸಿದಂತೆ ಕಂಡುಬರುತ್ತದೆ. ಈತನು ಎರಡು ಕೃತಿರತ್ನಗಳನ್ನು ಕನ್ನಡಕ್ಕೆ ನೀಡಿದ್ದಾನೆ. ಒಂದು ಜಿನಾಗಮವನ್ನು ಬೋಧಿಸುವ 'ಆದಿಪುರಾಣ', ಮತ್ತೊಂದು ಲೌಕಿಕವನ್ನು ಬೆಳಗುವ 'ವಿಕ್ರಮಾರ್ಜುನ ವಿಜಯ'. ಒಂದನ್ನು ಮೂರುತಿಂಗಳಿನಲ್ಲಿಯೂ, ಮತ್ತೊಂದನ್ನು ಆರು ತಿಂಗಳಲ್ಲಿಯೂ ಬರೆದು ಮುಗಿಸಿದುದಾಗಿ ಕವಿ ಹೇಳಿಕೊಂಡಿದ್ದಾನೆ. ಇದನ್ನು ನೋಡಿದರೆ ಆತನ ಕವಿತಾಶಕ್ತಿ ಅದ್ಭುತವಾದುದೆನಿಸುತ್ತದೆ.

ಇಲ್ಲಿ ಕೊಟ್ಟಿರುವ ಪದ್ಯಗಳನ್ನು 'ಪಂಪಭಾರತ'ದಿಂದ ಉದ್ಧರಿಸಲಾಗಿದೆ. ವ್ಯಾಸ ಮಹಾಭಾರತದ ಕಥೆಯನ್ನು ಪಂಪಕವಿ ಸಂಗ್ರಹಿಸಿ 'ಪಂಪಭಾರತ'ವನ್ನು ಬರೆದಿರುವನಾದರೂ—ಮೂಲಕಥೆಯ 'ಮೆಯ್ಗಿಡಲೀಯದೆ', ಆನೆಯನ್ನು ಕನ್ನಡಿಯಲ್ಲಿ ತೋರುವಂತೆ ಸಮಗ್ರಚಿತ್ರವನ್ನು ಕೊಟ್ಟಿರುವನಾದರೂ—ಕವಿಯ ಅದ್ಭುತ ಪ್ರತಿಭೆ, ಕಲ್ಪನಾಶಕ್ತಿಗಳ ಪ್ರಭಾವದಿಂದ ಮೂಲದ ಕಥೆ ಮರುಹುಟ್ಟನ್ನು ಪಡೆದಿದೆ. 'ಪಂಪಭಾರತ'ದಲ್ಲಿ ಅರ್ಜುನ ಕಥಾನಾಯಕ. ಕವಿಯು ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಅರ್ಜುನನೊಡನೆ ಸಮೀಕರಿಸಿ, ಈತನನ್ನು 'ವಿಕ್ರಮಾರ್ಜುನ'ನೆಂದು ಕರೆದು, ತನ್ನ ಕಾವ್ಯವು 'ಸಮಸ್ತ ಭಾರತ'ವೆಂದು ಹೇಳಿಕೊಂಡಿದ್ದಾನೆ. ಕವಿಯು ಜಂಬೂದ್ವೀಪದ ಕುರುಜಾಂಗಣ ವಿಷಯ (ರಾಜ್ಯ)ವನ್ನು ವರ್ಣಿಸುತ್ತಾ ಈ ಪದ್ಯಗಳನ್ನು ಬರೆದಿದ್ದಾನೆ. ರಸಿಕರಸಚಕ್ರವರ್ತಿಯಾದ ಆತನಿಗೆ ಹೂ, ಹಣ್ಣುಗಳಲ್ಲಿ ಅಪಾರವಾದ ಮಮತೆ. ಅದರಲ್ಲಿಯೂ ಕನ್ನಡನಾಡಿನಲ್ಲಿ ಹೇರಳವಾಗಿ ದೊರೆವ ಮಾವಿನಹಣ್ಣು, ಮಲ್ಲಿಗೆಹೂಗಳಲ್ಲಿ ಪರಮಾದರ. ಆತನ ವರ್ಣನೆ ಇಲ್ಲಿ ಎಷ್ಟು ಸತ್ವಯುಕ್ತವಾಗಿದೆ !

### ಕಠಿಣಪದಗಳ ಅರ್ಥ :

ಪದ್ಯ ೧. ಎಱಗಿರ್ದ–ನೆಲಕ್ಕೆ ಬಾಗಿದ್ದ. ಕಪ್ಪೊಲ—ಕಪ್ + ಪೊಲ–ಗದ್ದೆ. ಪೂತ–ಅರಳಿದ. ಪೂಗೊಳ—ಪೂ + ಕೊಳ–ಹೂಗಳಿಂದ ಕೂಡಿದ ಸರೋವರ. ನಂದನಾವಳಿ—ನಂದನ + ಆವಳಿ (ಸ. ದೀ. ಸಂ.) ಉದ್ಯಾನವನಗಳ ಸಮೂಹ. ಮದಾಳಿ—ಮದ + ಅಳಿ—ಮದಿಸಿದ ದುಂಬಿ. ಸಂಕುಲ—ಹಿಂಡು, ಗುಂಪು. ವಿಷಯಾಂಗನಾ—ವಿಷಯ + ಅಂಗನಾ—ವಿಷಯವೆಂಬ ಅಂಗನೆ (ರೂಪಕ)—ದೇಶವೆಂಬ ಹೆಣ್ಣು. ಲುಳಿತ—ಅಲ್ಲಾಡುವ. ಕುಂತಳ—ಮುಂಗುರುಳು.

ಪದ್ಯ ೨. ಅಲರ್—ಹೂವು. ಬೀತೋವವು—ಬೀತು+ಓವವು— ಫಲ ಕೊಡುವುದನ್ನು ನಿಲ್ಲಿಸಿ ಸೌಖ್ಯದಾಯಕವಾಗುವುದಿಲ್ಲ. ಬೀಯವು—ಬೀಕಳಿಯಾಗುವುದಿಲ್ಲ ; ಫಲಪುಷ್ಪ ಬಿಡುವುದನ್ನು ನಿಲ್ಲಿಸುವುದಿಲ್ಲ. ಇಮ್ಮಾವು—ಇನಿದು+ಮಾವು (ಕ. ಸ.) ಸಿಹಿಮಾವು. ಆವಲರುಂ ಪಣ್ಣುಂ ಬೀತೋವವು—ಯಾವ ಕಡೆಯಲ್ಲಿ ಬೆಳೆಯುವ ಹಣ್ಣುಗಳಾದರೂ ಬೀಕಲಾಗಿ (ಫಲ ಕೊಡು ವುದನ್ನು ನಿಲ್ಲಿಸಿ) ಹಾಗೆ ಬೀಕಲಾದಾಗ ಸುಖದಾಯಕವಾಗುವುದಿಲ್ಲ. ಆದರೆ ಕನ್ನಡನಾಡಿನಲ್ಲಿರುವ ಮಲ್ಲಿಗೆ ಬಳ್ಳಿ ಮತ್ತು ಮಾವಿನ ವೃಕ್ಷಗಳು ಮಾತ್ರ ಎಂದೂ ಬೀಕಳಿಯಾಗುವುದೇ ಇಲ್ಲ. ಅವು ಸದಾ ಪುಷ್ಪಫಲಗಳಿಂದ ಸಮೃದ್ಧವಾಗಿರುತ್ತವೆ. ಸಂಸಾರಸಾರಸರ್ವಸ್ವಫಲಂ—ಮಾವು ಮಲ್ಲಿಗೆಗಳೊಂದಿದ್ದರೆ ಸಂಸಾರದಲ್ಲಿ ಎಲ್ಲವೂ ಇದ್ದಂತೆ.

ಮೇಲಿನ ಪದ್ಯಗಳು ಪಂಪಕವಿ ಎಂತಹ ರಸಋಷಿ ಎಂಬುದನ್ನು ಸೂಚಿಸುತ್ತವೆ. ಕುರುಜಾಂಗಣ ನಾಡಿನ ವಸ್ತುಗಳೆಲ್ಲವೂ ಬಹು ಸಾರವತ್ತಾದುವು. ಅದರಲ್ಲಿಯೂ ಮಾವು ಮಲ್ಲಿಗೆಗಳು ಇಲ್ಲಿ ಸದಾ ಫಲದಾಯಕವಾಗಿಯೇ ಇರುತ್ತವೆಂದು ಕವಿಯ ಹೇಳಿಕೆ.

ಪದ್ಯ ೩. ಮಿಡಿ—ಬೆರಳಿನಿಂದ ಮೀಟು. ತನಿಗರ್ಬು—ರಸವತ್ತಾದ ಕಬ್ಬು. ಬಿರಿದ— ಅರಳಿದ. ಮುಗುಳ್—ಮೊಗ್ಗು. ಕಂಪು—ಸುವಾಸನೆ. ಮೊಗಂಗಿಡು—ಅಸಹ್ಯವಾಗು, ಸಹಿಸಲಸಾಧ್ಯವಾದಷ್ಟು ಸುವಾಸನೆಯಿಂದ ಕೂಡಿರು. ಅಟ್ಕಿಮು—ಅಜೀರ್ಣ. ಅಟ್ಕಿಮೆವಡು— ಅಟ್ಕಿಮು+ಪಡು—ಅಜೀರ್ಣವಾಗು. ಪಣ್ಬರಸ—ಪಣ್ಣಿನ+ರಸ (ಷ. ತ. ಸ.).

ಛಂದಸ್ಸು :

ಒಂದನೆಯ ಪದ್ಯವು ಚಂಪಕಮಾಲಾವೃತ್ತಜಾತಿಗೂ. ಉಳಿದೆರಡು ಪದ್ಯಗಳು ಕಂದ ಪದ್ಯಜಾತಿಗೂ ಸೇರಿವೆ.

ಪ್ರಶ್ನೆಗಳು :

೧. ಪಂಪಕವಿಯು ಕನ್ನಡನಾಡು ಹೇಗಿದ್ದಿತ್ತೆಂದು ವರ್ಣಿಸಿದ್ದಾನೆ?
೨. 'ತುಂಬಿಗಳಟ್ಕಿಮೆವಡುವುವು' ಯಾವುದರಿಂದ ?
೩. 'ಸಂಸಾರಸಾರಸರ್ವಸ್ವಫಲಂ'—ಯಾವುವು ?
೪. ಪಂಪಕವಿಯ ಮೇಲಿನ ಪದ್ಯಗಳಲ್ಲಿ ಕಂಡುಬರುವ ಭಾವಗಳನ್ನು ನಿಮ್ಮ ಸ್ವಂತ ಮಾತುಗಳಲ್ಲಿ ಬರೆದು ಅದರ ಸ್ವಾರಸ್ಯವನ್ನು ಬರೆಯಿರಿ.

ಇವುಗಳನ್ನು ಸಂದರ್ಭದೊಡನೆ ಸ್ಪಷ್ಟೀಕರಿಸಿರಿ :

೧. "ಬೀಯವಲ್ಲಿ ಮಲ್ಲಿಗೆಗಳುಮಿಮ್ಮಾವುಗಳುಮ್"
೨. "ಬಿರಿದೊಂದು ಮುಗುಳ ಕಂಪಿನೊಳೆ ಮೊಗಂಗಿಡುವುವು"

ಈ ವಾಕ್ಯದಲ್ಲಿ ಕಂಡುಬರುವ ಅಲಂಕಾರಗಳನ್ನು ವಿವರಿಸಿ :

"ವಿಷಯಾಂಗನಾಲುಳಿತಕುಂತಳದಂತವೊಲೊಪ್ಪಿ ತೋಱುಗುಂ"

****

# ೨೨. ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್

—ರನ್ನ

**ವಚನ** —ಭೀಮಸೇನನ ಗದಾಘಾತದೊಳೂರುಭಂಗಮುಂ ಪದಾಘಾತದೊಳ್ ಮಕುಟ ಭಂಗಮುಂ ಆಗಿ ಸುರುಳ್ದು ತೆರಳ್ದು ಸುಯೋಧನನಿರೆ ಗುರುನಂದನಂ ನೋಡಿ —

ಕುಳಿಕನ ಪಲ್ಗಳಂ ಮುಱಿಯೆ ಪೋದಿದರಾರ್ ಪಿಡಿದೊತ್ತಿ ಸಿಂಹಮಂ
ಪೞಿಯಿಸಿ ದಾಡೆಯಂ ಪಿಡಿದು ಕಿಟ್ಟಿವರಾರ್ ಮದಹಸ್ತಿಯುನೆ [ಱಂ]
ಗೊಳೆ ನೆಲಕಿಕ್ಕಿ ಕೋಡೆರಡುಮಂ ಕುಸಿಯೊತ್ತಿದರಾರ್ ಸುರಾದ್ರಿಸಿ
ಶ್ಚಳನಿಬಿಡೋರುಮಂಡಲಮನಾರುಡಿದರ್ ಫಣಿರಾಜಕೇತನಾ ॥ ೧ ॥

ವ । ಎಂದು ಗುರುನಂದನಂ ವಿಪ್ರಳಾಪಂ ಗೆಯ್ದು ತನ್ನ ಮೇಲುದಱ ಸೆಱಂಗಿಂದಾತನ ತಲೆಯ ಮೇಲೆ ಕೆದಱಿರ್ದ ಭೀಮಸೇನನ ಚರಣರಜಮಂ ತೊಡೆದು ಕಳೆದು ಮನದೊಳ್ ಕಟ್ಟುಕಡೆದು

ಎನ್ನಂ ವಂಚಿಸಿ ಬಂದುದ
ಱಂ ನಿನಗಿನಿತಾಯ್ತುವಸ್ಥೆ ಕುರುಪತಿ ಕೇಳ್ ನೀ
ನಿನ್ನುಂ [ಪ್ರತಿಕಾರ] ಮನಱ
[ಪಿ] ನ್ನುಂ ನೋಡೆನ್ನ ಶಕ್ತಿಯಂ ಭಕ್ತಿಯುಮಂ ॥ ೨ ॥

ವ । ಎಂದು ನುಡಿದ ಭಾರದ್ವಾಜ ತನೂಜನ ನುಡಿಗೆ ರಾಜರಾಜನವಧಾರಿಸಿ

ಅರಿಚರಣಪಾಂಸು ಪತ್ತಿರೆ
ಶರೀರಮಂ ತೊಡೆದು ಕಳೆದೆ ವಸ್ತ್ರಾಂಚಲದಿಂ
ಗುರುನಂದನ ನೀನೆನ್ನೀ
ಪರಿಭವಪಾಂಸುವನದೆಂತು ಪೇೞ್ ಕಳೆದಪೆಯೋ ॥ ೩ ॥

ಇದುಪಂ ನೋಡುವೆನಿನ್ನುಮೆನ್ನೊಡಲೊಳೆನ್ನೀ ಪ್ರಾಣಮುಳ್ಳನ್ನಮೋ
ವದೆ ಕೌಂತೇಯರನಿಕ್ಕಿ ಪಂದಲೆಗಳಂ ತಂದೆನ್ನಮುಂದಿಕ್ಕು ಕೂ
ರದ ದಾಯಾದರ ಮಿಕ್ಕ ಪಂದಲೆಗಳಂ ಕಣ್ಣಾರೆ ಕಂಡೆನ್ನ ಚಿ
ತ್ತದೊಳೊಂದುಂ ತೊದಳಿಲ್ಲದೆನ್ನಸುಗಣಕ್ಕುತ್ಕ್ರಾಂತಿಯಂ ಮಾಡುವೆಂ ॥ ೪ ॥

ವ ॥ ಎಂಬುದುಂ ಅದಾವಗಹನಂ ಅಂತೆಗೆಯ್ವೆನೆಂದು ಪೂಣ್ದು,—ನಿಜಪತಿಯಂ ಬೀೞ್ಕೊಂಡು ಪಯಣಂ ಪೋಗಿ ಹಸ್ತಿನಪುರಮಂ ಪೊಕ್ಕು ಅಲ್ಲಿ ಪೆಂಡಿರ್ ಮಕ್ಕಳೆನ್ನದೆ ನಿವಳಿ ವಟ್ಟಮಪ್ಪಿನಂ ಒಂದಕ್ಷೋಹಿಣೀಬಲಮೆಲ್ಲಮಂ ಪೇೞ್ ಪೆಸರಿಲ್ಲವೆಂಬಂತೆ ಕೊಂದು ಪಾಂಡವರ ಶಂಕೆಯಿಂ ಶ್ರುತಸೋಮಕಪ್ರಭೃತಿಗಳಪ್ಪ ಪಂಚಪಾಂಡವರ ತಲೆಗಳಂ ಕೊಂಡು ಥಳಥಳನೆ ನೇಸಱ್ ಮೂಡುವಾಗಳ್ ಬಂದು ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳಿವೆಯೆಂದು ದುರ್ಯೋಧನನ ಮುಂದಿಕ್ಕಿದೊಡೆ ಆ ಮಹಾನುಭಾವನಾ ತಲೆಗಳಂ ನೀಡುಂ ಭಾವಿಸಿ ನೋಡಿ,

ಚಂ ॥ ಮಾ ॥ ಪವನಜನಾಸ್ಯಮಲ್ತಿದವನಾನನಮಪ್ಪೊಡೆ ಮಟ್ಟಮಿರ್ದು ನೋ
ಡುವುದೆ ಮದೀಯವಕ್ತ್ರಮನೆ ಕೆಮ್ಮನೆ ಪೋಯ್ತುಱಿವಿಲ್ಲದಾಯ್ತು ಪಾಂ
ಡವರ ಶಿರಂಗಳಲ್ಲಿವಿವು ಪಾಂ[ಡವ]ಸೂನುಗಳಪ್ಪ ಪಂಚಪಾಂ
ಡವರ ಶಿರಂಗಳಂ ನೆಱೆ ವಿಚಾರಿಸದಕ್ಕಟ ಕೊಂಡು ಬರ್ಪುದೇ ॥ ೫ ॥

ಕಂ ॥ ಪರಮೇಶ್ವರಾವತಾರನೆ
ಪರಮಜ್ಞಾನಿಯೆ ವಿವೇಕವಿಕಳರವೋಲ್ ಬಾ
ಲರ ತಲೆಯನರಿದು ತಂದೆಯೊ
ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ ॥ ೬ ॥

ವ ॥ ಅದು ಕಾರಣಂ ರೌದ್ರಪ್ರಾಯಶ್ಚಿತ್ತಪ್ರವರ್ತನಾರ್ಥಂ ಹಿಮವತ್ಪರ್ವತಕ್ಕೆ ಪೋಪು [ದೆಂದು] ಚಿತ್ತಸಮಾಧಾನಂಗೆಯ್ದು—ಸುರಲೋಕಮಂ ಸಾಧಿಸುವೆನೆಂದು ಅಶ್ವತ್ಥಾಮಾದಿಗಳಂ ವಿಸರ್ಜಿಸಿ ತದ್ದಿನಾವಸಾನದೊಳ್ ದುರ್ಯೋಧನಂ ಪ್ರಾಣವಿಸರ್ಜನೋನ್ಮುಖನಾದಂ.

ಉ॥ ಮಾ ॥ ಪಂಕಜಮುಂ ಸುಹೃದ್ವದನಪಂಕಜಮುಂ ಮುಗಿವನ್ನಮುಗ್ರತೇ
ಜಂ ಕಿಡುತಿರ್ಪಿನಂ ನಿಜಕರಂಗಳನಂದುಡುಗುತ್ತುಮಿರ್ಪ ಚ
ಕ್ರಾಂಕಮಗಲ್ವಿನಂ ಕ್ರಮದಿನಂಬರಮಂ ಬಿಸುಟುರ್ವಿಗಂಧಕಾ
ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್ ॥ ೭ ॥

## ಟಿಪ್ಪಣಿ

### ಕವಿ–ಕಾವ್ಯ ಪರಿಚಯ :

ಬೆಳುಗಲಿನಾಡಿನ ಮುದುವೊಳಲು ಅಥವಾ ಮುಧೋಳದಲ್ಲಿದ್ದ ಜಿನವಲ್ಲಭನೆಂಬ ಬಳೆಗಾರನ ಮಡದಿ ಅಬ್ಬಲಬ್ಬೆಯ ಪುಣ್ಯಗರ್ಭದಲ್ಲಿ ಕ್ರಿ.ಶ. ೯೪೯ರಲ್ಲಿ ಜನಿಸಿದ, ರನ್ನ. ಈತನು ಶ್ರವಣಬೆಳುಗೊಳದಲ್ಲಿದ್ದ ಅಜಿತಸೇನಾಚಾರ್ಯರೆಂಬ ಗುರುಗಳಲ್ಲಿ ವಿದ್ಯಾಭ್ಯಾಸ ಮಾಡಿ ದಾನಚಿಂತಾಮಣಿಯೆಂದು ಪ್ರಸಿದ್ಧಳಾಗಿರುವ ಅತ್ತಿಮಬ್ಬೆಯೆಂಬ ಶ್ರೀಮಂತಳ ಬಳಿಯಲ್ಲಿಯೂ,

ಗಂಗರಾಜ್ಯದಲ್ಲಿ ಮಂತ್ರಿಯಾಗಿದ್ದ ಚಾವುಂಡರಾಯನ—ಈತನೇ ಶ್ರವಣಬೆಳುಗೊಳದಲ್ಲಿ ಲೋಕ ಪ್ರಸಿದ್ಧವಾಗಿರುವ ಗೊಮ್ಮಟೇಶ್ವರನ ವಿಗ್ರಹವನ್ನು ಕೆತ್ತಿಸಿದವನು—ಬಳಿಯಲ್ಲಿಯೂ ಆಶ್ರಯವನ್ನು ಪಡೆದು. ಉದಿತೋದಿತನಾಗಿ ಚಾಲುಕ್ಯ ಚಕ್ರವರ್ತಿಯ ಆಸ್ಥಾನಕವಿಯಾದನು. ಈತನು ತೈಲಪಚಕ್ರವರ್ತಿಯಿಂದ 'ಕವಿಚಕ್ರವರ್ತಿ'ಎಂಬ ಬಿರುದನ್ನೂ. ಅನೇಕ ಮರ್ಯಾದೆ ಗಳನ್ನೂ ಪಡೆದು. ವೈಭವದಿಂದ ಬಾಳಿ ಕೀರ್ತಿಶಾಲಿಯಾದನು.

ರನ್ನಕವಿಯು 'ಅಜಿತಪುರಾಣ' 'ಗದಾಯುದ್ಧ' 'ರನ್ನಕಂದ' 'ಚಕ್ರೇಶ್ವರ ಚರಿತೆ' 'ಪರಶುರಾಮ ಚರಿತೆ' ಎಂಬ ಗ್ರಂಥಗಳನ್ನು ಬರೆದಿರುವುದಾಗಿ ತಿಳಿಯುಬರುವುದಾದರೂ. ಅವುಗಳಲ್ಲಿ ಮೊದಲೆರಡು ಸಮಗ್ರವಾಗಿಯೂ. ರನ್ನಕಂದದ ಕೆಲವು ಪದ್ಯಗಳು ಮಾತ್ರವೂ ಈಗ ಉಪಲಬ್ಧವಾಗಿವೆ. ಪಂಪನಂತೆ ರನ್ನಕವಿಯೂ ಜಿನಾಗಮದ ದಿಗ್ದರ್ಶನಕ್ಕಾಗಿ ಅಜಿತ ತೀರ್ಥಂಕರನ ಪುಣ್ಯಕಥೆಯನ್ನು ಒಳಗೊಂಡ 'ಅಜಿತಪುರಾಣ'ವನ್ನೂ. ಲೌಕಿಕವನ್ನು ಬೆಳಗುವುದಕ್ಕಾಗಿ 'ಸಾಹಸಭೀಮವಿಜಯ' ಅಥವಾ 'ಗದಾಯುದ್ಧ'ವನ್ನೂ ಬರೆದಿದ್ದಾನೆ. ಇಲ್ಲಿನ ಪದ್ಯ ಭಾಗವನ್ನು ಗದಾಯುದ್ಧದಿಂದ ಆಯ್ದುಕೊಂಡಿದೆ.

ಮಹಾಭಾರತದಲ್ಲಿ ಬರುವ ಗದಾಪರ್ವ. ಸೌಪ್ತಿಕಪರ್ವಗಳ ತಿರುಳನ್ನು ಒಳಗೊಂಡಿದೆ. ರನ್ನಕವಿಯ 'ಗದಾಯುದ್ಧ'. ಯುದ್ಧದಲ್ಲಿ ಅಪಜಯ ಹೊಂದಿದ ದುರ್ಯೋಧನ ವೈಶಂಪಾಯನ ಕೊಳದಲ್ಲಿ ತಲೆ ಮರೆಸಿಕೊಂಡಿರಲು. ಇದರ ಸುಳಿವನ್ನು ಅರಿತ ಪಾಂಡವರು ಆ ಕೊಳದ ಬಳಿಗೆ ಹೋಗಿ. ಆತನನ್ನು ಯುದ್ಧಕ್ಕೆ ಆಹ್ವಾನಿಸುತ್ತಾರೆ. ಭೀಮನ ಧ್ವನಿಯನ್ನು ಕೇಳುತ್ತಲೇ ಕೊಳದಿಂದ ಹೊರಕ್ಕೆ ಹಾರಿ ಬಂದ ದುರ್ಯೋಧನನು ಭೀಮನೊಡನೆ ಯುದ್ಧಮಾಡಿ, ಶತ್ರುವಿನ ಪೋಟುಕ್ಕೊಳಗಾಗಿ ತೊಡೆಯೊಡೆದು ನೆಲಕ್ಕೆ ಬೀಳುತ್ತಾನೆ. ಭೀಮನು ಕಾಲಿಂದ ಒದೆದು ಮಕುಟಭಂಗ ಮಾಡುತ್ತಾನೆ. ಕೆಲಕಾಲದ ಮೇಲೆ ಅಶ್ವತ್ಥಾಮ ಆತನ ಬಳಿಗೆ ಬಂದು ಶುಶ್ರೂಷೆ ಮಾಡಹೊರಡುತ್ತಾನೆ. ಅಲ್ಲಿಂದ ಮುಂದಿನ ಭಾಗವನ್ನು ಇಲ್ಲಿ ಉದ್ಧರಿಸಿದೆ.

ರಸವತ್ತಾದ ಸಂಭಾಷಣಾಶೈಲಿ. ನಾಟಕೋಚಿತವಾದ ಕ್ರಿಯಾಸನ್ನಿವೇಶಗಳು. ಸರಳವಾಗಿ. ಸಾರವತ್ತಾಗಿ. ಸಂಗ್ರಹವಾಗಿ ಕಥಾನಿರೂಪಣೆ—ಇವುಗಳಿಂದ ಕೂಡಿದ ಈ ಕಾವ್ಯವನ್ನು ದಿವಂಗತ ಬಿ. ಎಂ. ಶ್ರೀಕಂಠಯ್ಯನವರು ಅತ್ಯಲ್ಪವಾದ ಬದಲಾವಣೆಗಳೊಡನೆ ಒಂದು ಸೊಗಸಾದ ರುದ್ರನಾಟಕವಾಗಿ ಪರಿವರ್ತಿಸಿದ್ದಾರೆ. ರನ್ನನು ದುರ್ಯೋಧನನ ಪಾತ್ರಸೃಷ್ಟಿಯಲ್ಲಿ ಅದ್ಭುತವಾದ ಪ್ರತಿಭೆ. ಅಪಾರವಾದ ಅನುಕಂಪಗಳನ್ನು ತೋರಿಸಿ. ಆ ಪಾತ್ರವನ್ನು ಮಹಾನುಭಾವನ ಪಟ್ಟಕ್ಕೆ ಏರಿಸಿದ್ದಾನೆ.

ಕಠಿಣಪದಗಳ ಅರ್ಥ :

ವ || ಘಾತ—ಪೆಟ್ಟು; ಹೊಡೆತ. ಊರು—ತೊಡೆ. ಭಂಗ—ಮುರಿಯುವಿಕೆ. ಮಕುಟ— ಕಿರೀಟ. ಸುರುಳ್ದು—ಮುದುರಿಕೊಂಡು. ತೆರಳ್ದು—ಮುದ್ದೆಯಾಗಿ. ಗುರುನಂದನ— ದ್ರೋಣಪುತ್ರ; ಅಶ್ವತ್ಥಾಮ.

ಪದ್ಯ ೧. ಕುಳಿಕ—ಒಂದು ಜಾತಿಯ ವಿಷಸರ್ಪ. ಪೋದಿದರಾರ್—ಪೋದಿದರ್+ಆರ್—ಗುದ್ದಿದವರು ಯಾರು ? ಮುಳಿಯಿಸಿ—ಕೋಪ ಬರುವಂತೆ ಮಾಡಿ. ದಾಡೆ—ಕೋರೆಹಲ್ಲು. ಮದಹಸ್ತಿ—ಮದಿಸಿದ ಆನೆ. ನೆಱಂಗೊಳೆ—ಮರ್ಮಸ್ಥಾನಕ್ಕೆ ತಾಕುವಂತೆ. ಕೋಡು—ದಂತ. ಇಕ್ಕು—ಹೊಡೆ. ಕುಸಿಯೊತ್ತು—ಕುಸಿದು ಬೀಳುವಂತೆ ಒತ್ತುವುದು. ಸುರಾದ್ರಿ—ಸುರ+ಅದ್ರಿ—ದೇವತೆಗಳ ಪರ್ವತ. ಮೇರುಪರ್ವತ. ನಿಶ್ಚಳ—ಅಲ್ಲಾಡದ; ಸ್ಥಿರವಾದ. ನಿಬಿಡೋರು—ನಿಬಿಡ+ಊರು (ಗು.ಸಂ.) ದಷ್ಟಪುಷ್ಟವಾದ ತುಂಬಿದ ತೊಡೆ. ಉಡಿದರ್—ಮುರಿದರು. ಫಣಿರಾಜಕೇತನ—ಸರ್ಪಧ್ವಜ. ದುರ್ಯೋಧನ. ಉಗ್ರಸರ್ಪದ ಹಲ್ಲನ್ನು ಮುರಿಯುವುದು, ಕೆರಳಿದ ಸಿಂಹದ ದಾಡೆಯನ್ನು ಕೀಳುವುದು, ಮದಿಸಿದ ಆನೆಯ ಮರ್ಮಸ್ಥಳಕ್ಕೆ ಹೊಡೆದು ಅದರ ದಂತವನ್ನು ಮುರಿಯುವುದು ಹೇಗೆ ಅಸಾಧ್ಯವಾದ ಕಾರ್ಯವೋ ಹಾಗೆಯೇ ಮಹಾವೀರನೆನಿಸಿದ ದುರ್ಯೋಧನನ ತೊಡೆಯನ್ನು ಮುರಿಯುವುದೂ ಸಹ ಅಶಕ್ಯವಾದ ಕಾರ್ಯ; ಇಂತಹ ಕಾರ್ಯ ಹೇಗೆ, ಯಾರಿಂದ ಆಯಿತು ಎಂಬುದು ಅಶ್ವತ್ಥಾಮನಿಗೆ ಆಶ್ಚರ್ಯ ಹಾಗೂ ದುಃಖವನ್ನುಂಟುಮಾಡಿದೆ.

ವ॥ ವಿಪ್ರಳಾಪ—ಹೆಚ್ಚಾದ ದುಃಖ. ಮೇಲುದಱ—ಮೇಲೆ ಹೊದೆದುಕೊಳ್ಳುವ ವಸ್ತ್ರದ; ಉತ್ತರೀಯದ. ಸೆಱಂಗು—ಸೆರಗು; ಬಟ್ಟೆಯ ತುದಿ. ಕೆದಱರ್ದ—ಹರಡಿದ್ದ. ಚರಣರಜ—ಪಾದದ ಧೂಳು. ತೊಡೆ—ಒರಸು. ಕಟ್ಟುಕಡೆದು—ನಿಶ್ಚಯಿಸಿ.

ಪದ್ಯ ೨. ಇನಿತು—ಇಷ್ಟು. ಇನ್ನುಂ—ಇನ್ನೂ; ಈಗಲೂ. ಅಱಪು—ಹೇಳು. ಪ್ರತಿಕಾರ—ಸೇಡು ತೀರಿಸಿಕೊಳ್ಳುವುದು.

ಅಶ್ವತ್ಥಾಮನಿಗೆ ದುರ್ಯೋಧನನಲ್ಲಿ ಅಚಲವಾದ ಭಕ್ತಿ ಹಾಗೂ ಪ್ರೀತಿಯಿದೆ. ನನಗೆ ಹೇಳದೆ ಮರೆಮಾಚಿ ಬಂದುದರಿಂದ ನಿನಗೀ ಗತಿಯೊದಗಿತು. ನನ್ನೊಡನಿದ್ದರೆ ನಿನಗೀ ಗತಿ ಬರುತ್ತಿರಲಿಲ್ಲ. ಈಗಲೂ ಕಾಲ ಮಿಂಚಿಹೋಗಿಲ್ಲ. ನಿನ್ನ ಅಭಿಲಾಷೆಯಾದರೂ ಏನು, ಹೇಳು. ನಿನ್ನ ಇಚ್ಛೆಯನ್ನು ನೆರವೇರಿಸುತ್ತೇನೆ ಎಂದು ಹೇಳುವನು.

ವ॥ ಭಾರದ್ವಾಜತನೂಜ—ಭರದ್ವಾಜನ ಮಗ; ಭಾರದ್ವಾಜ—ದ್ರೋಣ; ಅವನ ಮಗ ಅಶ್ವತ್ಥಾಮ. ರಾಜರಾಜ—ಚಕ್ರವರ್ತಿ; ದುರ್ಯೋಧನ. ಅವಧಾರಿಸಿ—ವಿಚಾರಮಾಡಿ; ಯೋಚಿಸಿ.

ಪದ್ಯ ೩. ಅರಿ—ಶತ್ರು. ಪಾಂಸು—ಧೂಳು. ಪತ್ತಿರೆ—ಹತ್ತಿಕೊಂಡಿರಲು. ಕಳೆದೆ—ಹೋಗಲಾಡಿಸಿದೆ. ವಸ್ತ್ರಾಂಚಲ—ವಸ್ತ್ರದ ಕೊನೆ; ಸೆರಗು. ಪರಿಭವಪಾಂಸು—ಅಪಮಾನವೆಂಬ ಧೂಳು.

ಶತ್ರುವಿನ ಪಾದದ ಧೂಳು. ನನ್ನ ಮೈಯಲ್ಲಿ ಅಂಟಿಕೊಂಡಿರಲು. ನಿನ್ನ ವಸ್ತ್ರದಿಂದ ಒರಸಿ ಹೋಗಲಾಡಿಸಿದೆ. ಆದರೆ ನನ್ನ ಮನಸ್ಸಿಗೆ ಹತ್ತಿರುವ ಅಪಮಾನವೆಂಬ ಧೂಳನ್ನು ಹೇಗೆ ಹೋಗಲಾಡಿಸಲು ಸಾಧ್ಯವೆಂದು ದುರ್ಯೋಧನನು ಅಶ್ವತ್ಥಾಮನನ್ನು ಕೇಳುತ್ತಾನೆ.

ಪದ್ಯ ೪. ಇದುವಂ—ಇದನ್ನೂ. ನೋಡುವೆನ್—ನೋಡುತ್ತೇನೆ. ಎನ್ನೊಡಲೊಳ್—ಎನ್ನ+ಒಡಲೊಳ್—ನನ್ನ ಶರೀರದಲ್ಲಿ. ಅನ್ನಂ—ವರೆಗೆ. ಓವದೆ— ಪ್ರೀತಿಸದೆ. ಪಂದಲೆ—ಹಸಿಯ ತಲೆ; ರಕ್ತ ಸೋರುವ ತಲೆ. ಕೂರದ—ಪ್ರೀತಿಯಿಡದ. ದಾಯಾದರ—ದಾಯಾದಿಗಳ; ಪಾಂಡವರ. ಕಣ್ಣಾರೆ—ಕಣ್ಣಿಗೆ ತೃಪ್ತಿಯಾಗುವವರೆಗೆ. ಒಂದುಂ ತೊಡಳಿಲ್ಲದೆ—ಯಾವ ಹುಸಿಯೂ ಇಲ್ಲದೆ; ಯಾವ ಯೋಜನೆಯನ್ನೂ ಇಟ್ಟುಕೊಳ್ಳದೆ. ಅಸುಗಣಕ್ಕೆ—ಪ್ರಾಣಗಳಿಗೆ. ಉತ್ಕ್ರಾಂತಿಯಂ ಮಾಡುವೆಂ—ಹಾರಿಹೋಗುವಂತೆ ಮಾಡುತ್ತೇನೆ; ಪ್ರಾಣ ತ್ಯಾಗ ಮಾಡುತ್ತೇನೆ. ಪಾಂಡವರ ತಲೆಗಳನ್ನು ಕಡಿದು ತಂದು ನನ್ನ ಮುಂದಿಟ್ಟರೆ ಅವುಗಳನ್ನು ನೋಡಿ ನಿಶ್ಚಿಂತೆಯಾಗಿ ಪ್ರಾಣ ಬಿಡುತ್ತೇನೆ.

ವ ॥ ಗಹನ—ಕಷ್ಟ. ಅಂತೆಗೆಯ್ವೆಂ—ಹಾಗೆಯೇ ಮಾಡುತ್ತೇನೆ. ಪೂಣ್ದು—ಶಪಥಮಾಡಿ. ಪಯಣಂ ಭೋಗಿ—ಪ್ರಯಾಣಮಾಡಿ. ನಿವಳಿವಟ್ಟವಪ್ಪಿನಂ—ಬಲಿಕೊಟ್ಟು ನಿವಾಳಿಸಿ ಎಸೆದಂತೆ (ಇಳಿ ತೆಗೆದು ಎಸೆಯುವಂತೆ). ಪೇಟಿ ಪೆಸರಿಲ್ಲವೆಂಬಂತೆ—ಹೆಸರು ಹೇಳಲೂ ಸಹ ಒಬ್ಬರೂ ಇಲ್ಲದಂತೆ. ಶಂಕೆ—ಸಂದೇಹ. ಪ್ರಭೃತಿ—ಮೊದಲಾದ. ನೇಸಱ್—ಸೂರ್ಯ. ನೀಡುಂ—ದೀರ್ಘಕಾಲ. ಭಾವಿಸಿ—ಯೋಚಿಸಿ.

ಪದ್ಯ ೫. ಪವನಜ—ಪವನ—ವಾಯುವಿನಿಂದ. ಜ—ಹುಟ್ಟಿದವನು, ವಾಯುಪುತ್ರ, ಭೀಮ. ಆಸ್ಯ—ಮುಖ. ಅಲ್ತು—ಅಲ್ಲ. ಆನನ—ಮುಖ. ಅಪ್ಪೊಡೆ—ಆಗಿದ್ದರೆ. ಮಟ್ಟಮಿರ್ದು—ಮಟ್ಟಂ+ಇರ್ದು—ಭೂಮಿಯ ಮೇಲೆ ನೇರವಾಗಿದ್ದು. ಮದೀಯ—ನನ್ನ. ವಕ್ತ್ರ—ಮುಖ. ಕೆಮ್ಮನೆ—ಸುಮ್ಮನೆ.

ಇದು ಭೀಮನ ತಲೆಯಲ್ಲ. ಏಕೆಂದರೆ ಭೀಮನ ತಲೆಯೇ ಇದಾಗಿದ್ದರೆ ಸುಮ್ಮನೆ ನೆಲದ ಮೇಲೆ ಬಿದ್ದುಕೊಂಡಿದ್ದು ನನ್ನ ಮುಖವನ್ನೇ ನೋಡುತ್ತಾ ಇರುತ್ತಿತ್ತೇ ? ದುರ್ಯೋಧನನು ಕೊಡುವ ಕಾರಣ ತುಂಬ ಸುಂದರವಾಗಿದೆ. ಈ ತಲೆಯಲ್ಲಿ ಜೀವವಿಲ್ಲದಿದ್ದರೂ ನನ್ನನ್ನು ಕಂಡಕೂಡಲೇ ಸಿಡಿದು ಬೀಳಬೇಕಾಗಿದ್ದಿತು. ಭೀಮನಿಗೂ ದುರ್ಯೋಧನನಿಗೂ ಅಷ್ಟು ಬದ್ಧ ದ್ವೇಷ. ಅಱಿವಿಲ್ಲದಾಯ್ತು—ತಿಳುವಳಿಕೆ ಇಲ್ಲವಾಯಿತು. ಸೂನು—ಮಗ. ನೆಱೆ—ಚೆನ್ನಾಗಿ.

ಪದ್ಯ ೬. ಪರಮೇಶ್ವರಾವತಾರ—ರುದ್ರಾವತಾರನೆನಿಸಿರುವ ಅಶ್ವತ್ಥಾಮ. ವಿವೇಕ ವಿಕಳರು—ಬುದ್ಧಿಶೂನ್ಯರು. ಅರಿದು—ಕತ್ತರಿಸಿ. ಬಾಲವಧ—ಬಾಲಕರನ್ನು ಕೊಂದ. ಪಾತಕ—ಪಾಪ. ದೊರೆಕೊಂಡುದು—ಪ್ರಾಪ್ತವಾಯಿತು ; ಉಂಟಾಯಿತು.

ವ ॥ ರೌದ್ರ—ಭಯಂಕರ. ಪ್ರಾಯಶ್ಚಿತ್ತ—ಪಾಪಪರಿಹಾರಕ್ಕಾಗಿ ಮಾಡುವ ಕ್ರಿಯೆ. ಪ್ರವರ್ತನಾರ್ಥಂ—ಕೈಗೊಳ್ಳುವ ಸಲುವಾಗಿ. ಚಿತ್ತಸಮಾಧಾನಂ ಗೆಯ್ದು—

ಮನಸ್ಸನ್ನು ಸಮಾಧಾನಪಡಿಸಿ. ಸುರಲೋಕ—ದೇವಲೋಕ; ಸ್ವರ್ಗ, ಸಾಧಿಸು—ಹೊಂದು; ಪಡೆ. ವಿಸರ್ಜಿಸು—ಬಿಡು. ತದ್ದಿನಾವಸಾನ—ತತ್ + ದಿನ + ಅವಸಾನ—ಆ ದಿನದ ಕೊನೆ; ಆ ದಿನ ಸಾಯಂಕಾಲ. ಪ್ರಾಣವಿಸರ್ಜನೋನ್ಮುಖನಾದಂ—ಪ್ರಾಣ ವಿಸರ್ಜನ + ಉನ್ಮುಖ ನಾದಂ (ಗು. ಸಂ.) ಪ್ರಾಣ ಬಿಡಲು ಸಿದ್ಧನಾದನು.

ಪದ್ಯ ೭. ಈ ಪದ್ಯದಲ್ಲಿ ದುರ್ಯೋಧನನ ಮರಣವು ವರ್ಣಿಸಲ್ಪಟ್ಟಿದೆ. ಸೂರ್ಯನೂ, ಕುರುಕುಲಾರ್ಕನಾದ ದುರ್ಯೋಧನನೂ ಒಟ್ಟಿಗೆ ಮುಳುಗಿದರು. ಅಂದರೆ ದುರ್ಯೋಧನನೂ ಮಡಿದನು. ಸೂರ್ಯನೂ ಮುಳುಗಿದನು. ಅನೇಕ ಸಮಾನಧರ್ಮಗಳನ್ನು ಕವಿ ಇಲ್ಲಿ ಹೇಳಿರುವುದಲ್ಲದೆ ಅಲ್ಲಲ್ಲಿ ಶ್ಲೇಷೆಯನ್ನೂ ಹೇಳಿದ್ದಾನೆ. ಪಂಕಜಮುಂ...ಮುಗಿವನ್ನಂ.

೧. ಸೂರ್ಯನ ಪರವಾಗಿ: ಪಂಕಜಮುಂ—ಪಂಕ—ಕೆಸರಿನಲ್ಲಿ, ಜ—ಹುಟ್ಟಿದ್ದು; ಕಮಲ; ತಾವರೆಯೂ. ೨ ದುರ್ಯೋಧನನ ಪರವಾಗಿ:— ಸುಹೃದ್ವದನಪಂಕಜಮುಂ; ಸುಹೃತ್ + ವದನ—ಮಿತ್ರರ ಮುಖವೆಂಬ ತಾವರೆಯೂ; ಸ್ನೇಹಿತರ ಮುಖ ಕಮಲಗಳೂ. ಮುಗಿವನ್ನಂ—ಮುಚ್ಚಿಕೊಳ್ಳುತ್ತಿರಲು. ಉಗ್ರತೇಜಂ—ಪ್ರಖರವಾದ ಬಿಸಲು. (೧), ರಾಜತೇಜಸ್ಸು (೨); ಕಿಡುತಿರ್ಪಿನಂ-ಕಡಿಮೆಯಾಗುತ್ತಿರಲು. ಕರಂಗಳಂ—ಕಿರಣಗಳನ್ನು (೧), ಹಸ್ತಗಳನ್ನು (೨); ಉಡುಗುತ್ತುಂ—ಮರೆಯಾಗುತ್ತಲೂ (೧), ಮುದುರಿಕೊಳ್ಳುತ್ತಲೂ (೨), ಇರ್ಪ—ಕೂಡಿರುವ. ಚಕ್ರಾಂಕಂ—ಚಕ್ರವಾಕ ಪಕ್ಷಿಗಳು (೧), ಚಕ್ರವರ್ತಿಯೆಂಬ ಹೆಸರು (೨), ಅಗಲ್ವಿನಂ—ಬಿಟ್ಟು ಹೋಗುತ್ತಿರಲು. (ಸೂರ್ಯಾಸ್ತವಾದ ಮೇಲೆ ಚಕ್ರವಾಕ ದಂಪತಿಗಳಿಗೆ ಅಗಲಿಕೆಯುಂಟಾಗುವುದೆಂದು ಕವಿಗಳು ವರ್ಣಿಸಿದ್ದಾರೆ). ಅಂಬರಮುಂ—ಆಕಾಶವನ್ನು (೧), ವಸ್ತ್ರವನ್ನು (೨), ಬಿಸುಟು—ಬಿಟ್ಟು, ಉರ್ವಿಗೆ—ಭೂಮಿಗೆ ಅಂದಕಾರ—ಕತ್ತಲು (೧), ದುಃಖವೆಂಬ ಕತ್ತಲು (೨), ಕವಿತರ್ಪಿನಂ—ಆವರಿಸುತ್ತಿರಲು ಕುರುಕುಲಾರ್ಕ—ಕುರುಕುಲ + ಅರ್ಕ (ಸ. ದೀ. ಸಂ.)—ಕುರುವಂಶದ ಸೂರ್ಯನಾದ ದುರ್ಯೋಧನ. ಅಸ್ತಮಯಿದ್ದಿದರ್—ಮುಳುಗಿದರು. (ಶ್ಲೇಷಾಲಂಕಾರ).

ಮೇಲಿನ ಪದ್ಯದಲ್ಲಿ ಪ್ರತಿಪದಕ್ಕೂ ಎರಡೆರಡು ಅರ್ಥ ಬಂದಿರುವುದನ್ನು ಗಮನಿಸಿ. ಒಂದು ಪದಕ್ಕೆ ನಾನಾರ್ಥಗಳು ತೋರಿಬಂದರೆ ಅದು ಶ್ಲೇಷಾಲಂಕಾರವೆನಿಸುವುದು.

## ಪ್ರಶ್ನೆಗಳು :

೧. ಅಶ್ವತ್ಥಾಮನು ದುರ್ಯೋಧನನ ಅವಸ್ಥೆಯನ್ನು ನೋಡಿ ಏನೆಂದು ಮರುಗಿದನು?

೨. ದುರ್ಯೋಧನನು ತನಗಾಗಿ ಏನು ಮಾಡಬೇಕೆಂದು ಅಶ್ವತ್ಥಾಮನಿಗೆ ಸೂಚಿಸಿದನು?

೩. ಶಪಥಮಾಡಿ ಹೊರಟ ಗುರುಸೂನುವು ಮಾಡಿದ ಕೃತ್ಯವೇನು ? ಬರೆಯಿರಿ.

೪. ಅಶ್ವತ್ಥಾಮನು ಕತ್ತರಿಸಿ ತಂದ ತಲೆಗಳನ್ನು ನೋಡಿ ದುರ್ಯೋಧನನು ಏನು ಹೇಳಿದನು ?

೫. ದುರ್ಯೋಧನನ ಅವಸಾನವನ್ನು ಕವಿ ಹೇಗೆ ವರ್ಣಿಸಿದ್ದಾನೆ ?

ಶತ್ರುವಿನ ಪಾದದ ಧೂಳು. ನನ್ನ ಮೈಯಲ್ಲಿ ಅಂಟಿಕೊಂಡಿರಲು. ನಿನ್ನ ವಸ್ತ್ರದಿಂದ ಒರಸಿ ಹೋಗಲಾಡಿಸಿದೆ. ಆದರೆ ನನ್ನ ಮನಸ್ಸಿಗೆ ಹತ್ತಿರುವ ಅಪಮಾನವೆಂಬ ಧೂಳನ್ನು ಹೇಗೆ ಹೋಗಲಾಡಿಸಲು ಸಾಧ್ಯವೆಂದು ದುರ್ಯೋಧನನು ಅಶ್ವತ್ಥಾಮನನ್ನು ಕೇಳುತ್ತಾನೆ.

ಪದ್ಯ ೪. ಇದುವಂ—ಇದನ್ನೂ. ನೋಡುವೆನ್—ನೋಡುತ್ತೇನೆ. ಎನ್ನೊಡಲೊಳ್—ಎನ್ನ+ಒಡಲೊಳ್—ನನ್ನ ಶರೀರದಲ್ಲಿ. ಅನ್ನಂ—ವರೆಗೆ. ಓವದೆ— ಪ್ರೀತಿಸದೆ. ಪಂದಲೆ—ಪಸಿಯ ತಲೆ; ರಕ್ತ ಸೋರುವ ತಲೆ. ಕೂರದ—ಪ್ರೀತಿಯಿಡದ. ದಾಯಾದರ—ದಾಯಾದಿಗಳ; ಪಾಂಡವರ. ಕಣ್ಣಾರೆ—ಕಣ್ಣಿಗೆ ತೃಪ್ತಿಯಾಗುವವರೆಗೆ. ಒಂದುಂ ತೊದಳಿಲ್ಲದೆ—ಯಾವ ಹುಸಿಯೂ ಇಲ್ಲದೆ; ಯಾವ ಯೋಚನೆಯನ್ನೂ ಇಟ್ಟುಕೊಳ್ಳದೆ. ಅಸುಗಣಕ್ಕೆ—ಪ್ರಾಣಗಳಿಗೆ. ಉತ್ಕ್ರಾಂತಿಯಂ ಮಾಡುವೆಂ—ಹಾರಿಹೋಗುವಂತೆ ಮಾಡುತ್ತೇನೆ; ಪ್ರಾಣ ತ್ಯಾಗ ಮಾಡುತ್ತೇನೆ. ಪಾಂಡವರ ತಲೆಗಳನ್ನು ಕಡಿದು ತಂದು ನನ್ನ ಮುಂದಿಟ್ಟರೆ ಅವುಗಳನ್ನು ನೋಡಿ ನಿಶ್ಚಿಂತೆಯಾಗಿ ಪ್ರಾಣ ಬಿಡುತ್ತೇನೆ.

ವ ॥ ಗಹನ—ಕಷ್ಟ. ಅಂತೆಗೆಯ್ವೆಂ—ಹಾಗೆಯೇ ಮಾಡುತ್ತೇನೆ. ಪೂಣ್ದು—ಶಪಥಮಾಡಿ. ಪಯಣಂ ಪೋಗಿ—ಪ್ರಯಾಣಮಾಡಿ. ನಿವಳಿವಟ್ಟವಪ್ಪನಂ—ಬಲಿಕೊಟ್ಟು ನಿವಾಳಿಸಿ ಎಸೆದಂತೆ (ಇಳಿ ತೆಗೆದು ಎಸೆಯುವಂತೆ). ಪೇಟಿ ಪೆಸರಿಲ್ಲವೆಂಬಂತೆ—ಹೆಸರು ಹೇಳಲೂ ಸಹ ಒಬ್ಬರೂ ಇಲ್ಲದಂತೆ. ಶಂಕೆ—ಸಂದೇಹ. ಪ್ರಭೃತಿ—ಮೊದಲಾದ. ನೇಸಱ್—ಸೂರ್ಯ. ನೀಡುಂ—ದೀರ್ಘಕಾಲ. ಭಾವಿಸಿ—ಯೋಚಿಸಿ.

ಪದ್ಯ ೫. ಪವನಜ—ಪವನ—ವಾಯುವಿನಿಂದ. ಜ—ಹುಟ್ಟಿದವನು, ವಾಯುಪುತ್ರ, ಭೀಮ. ಆಸ್ಯ—ಮುಖ. ಅಲ್ತು—ಅಲ್ಲ. ಆನನ—ಮುಖ. ಅಪ್ಪೊಡೆ—ಆಗಿದ್ದರೆ. ಮಟ್ಟಮಿರ್ದುದೆ—ಮಟ್ಟಂ+ಇರ್ದುದೆ—ಭೂಮಿಯ ಮೇಲೆ ನೇರವಾಗಿದ್ದು. ಮದೀಯ—ನನ್ನ. ವಕ್ತ್ರ—ಮುಖ. ಕೆಮ್ಮನೆ—ಸುಮ್ಮನೆ.

ಇದು ಭೀಮನ ತಲೆಯಲ್ಲ. ಏಕೆಂದರೆ ಭೀಮನ ತಲೆಯೇ ಇದಾಗಿದ್ದರೆ ಸುಮ್ಮನೆ ನೆಲದ ಮೇಲೆ ಬಿದ್ದುಕೊಂಡಿದ್ದು ನನ್ನ ಮುಖವನ್ನೇ ನೋಡುತ್ತಾ ಇರುತ್ತಿತ್ತೇ ? ದುರ್ಯೋಧನನು ಕೊಡುವ ಕಾರಣ ತುಂಬ ಸುಂದರವಾಗಿದೆ. ಈ ತಲೆಯಲ್ಲಿ ಜೀವವಿಲ್ಲದಿದ್ದರೂ ನನ್ನನ್ನು ಕಂಡಕೂಡಲೇ ಸಿಡಿದು ಬೀಳಬೇಕಾಗಿದ್ದಿತು. ಭೀಮನಿಗೂ ದುರ್ಯೋಧನನಿಗೂ ಅಷ್ಟು ಬದ್ಧ ದ್ವೇಷ. ಅಱಿವಿಲ್ಲದಾಯ್ತು—ತಿಳುವಳಿಕೆ ಇಲ್ಲವಾಯಿತು. ಸೂನು—ಮಗ. ನೆಱೆ—ಚೆನ್ನಾಗಿ.

ಪದ್ಯ ೬. ಪರಮೇಶ್ವರಾವತಾರ—ರುದ್ರಾವತಾರನೆನಿಸಿರುವ ಅಶ್ವತ್ಥಾಮ. ವಿವೇಕ ವಿಕಳರು—ಬುದ್ಧಿಶೂನ್ಯರು. ಅರಿದು—ಕತ್ತರಿಸಿ. ಬಾಲವಧ—ಬಾಲಕರನ್ನು ಕೊಂದ. ಪಾತಕ—ಪಾಪ. ದೊರೆಕೊಂಡುದು—ಪ್ರಾಪ್ತವಾಯಿತು ; ಉಂಟಾಯಿತು.

ವ ॥ ರೌದ್ರ—ಭಯಂಕರ. ಪ್ರಾಯಶ್ಚಿತ್ತ—ಪಾಪಪರಿಹಾರಕ್ಕಾಗಿ ಮಾಡುವ ಕ್ರಿಯೆ. ಪ್ರವರ್ತನಾರ್ಥಂ—ಕೈಗೊಳ್ಳುವ ಸಲುವಾಗಿ. ಚಿತ್ತಸಮಾಧಾನಂ ಗೆಯ್ದು—

ಮನಸ್ಸನ್ನು ಸಮಾಧಾನಪಡಿಸಿ. ಸುರಲೋಕ—ದೇವಲೋಕ; ಸ್ವರ್ಗ, ಸಾಧಿಸು—ಹೊಂದು; ಪಡೆ. ವಿಸರ್ಜಿಸು—ಬಿಡು. ತದ್ದಿನಾವಸಾನ—ತತ್ + ದಿನ + ಅವಸಾನ—ಆ ದಿನದ ಕೊನೆ; ಆ ದಿನ ಸಾಯಂಕಾಲ. ಪ್ರಾಣವಿಸರ್ಜನೋನ್ಮುಖನಾದಂ—ಪ್ರಾಣ ವಿಸರ್ಜನ + ಉನ್ಮುಖ ನಾದಂ (ಗು. ಸಂ.) ಪ್ರಾಣ ಬಿಡಲು ಸಿದ್ಧನಾದನು.

ಪದ್ಯ ೭. ಈ ಪದ್ಯದಲ್ಲಿ ದುರ್ಯೋಧನನ ಮರಣವು ವರ್ಣಿಸಲ್ಪಟ್ಟಿದೆ. ಸೂರ್ಯನೂ, ಕುರುಕುಲಾರ್ಕನಾದ ದುರ್ಯೋಧನನೂ ಒಟ್ಟಿಗೆ ಮುಳುಗಿದರು. ಅಂದರೆ ದುರ್ಯೋಧನನೂ ಮಡಿದನು. ಸೂರ್ಯನೂ ಮುಳುಗಿದನು. ಅನೇಕ ಸಮಾನಧರ್ಮಗಳನ್ನು ಕವಿ ಇಲ್ಲಿ ಹೇಳಿರುವುದಲ್ಲದೆ ಅಲ್ಲಲ್ಲಿ ಶ್ಲೇಷೆಯನ್ನೂ ಹೇಳಿದ್ದಾನೆ. ಪಂಕಜಮುಂ... ಮುಗಿವನ್ನಂ.

೧. ಸೂರ್ಯನ ಪರವಾಗಿ: ಪಂಕಜಮುಂ—ಪಂಕ—ಕೆಸರಿನಲ್ಲಿ, ಜ—ಹುಟ್ಟಿದ್ದು; ಕಮಲ; ತಾವರೆಯೂ. ೨ ದುರ್ಯೋಧನನ ಪರವಾಗಿ:— ಸುಹೃದ್ವದನಪಂಕಜಮುಂ; ಸುಹೃತ್ + ವದನ—ಮಿತ್ರರ ಮುಖವೆಂಬ ತಾವರೆಯು; ಸ್ನೇಹಿತರ ಮುಖ ಕಮಲಗಳೂ. ಮುಗಿವನ್ನಂ—ಮುಚ್ಚಿಕೊಳ್ಳುತ್ತಿರಲು. ಉಗ್ರತೇಜಂ—ಪ್ರಖರವಾದ ಬಿಸಲು. (೧), ರಾಜತೇಜಸ್ಸು (೨); ಕಿಡುತಿರ್ಪಿನಂ-ಕಡಿಮೆಯಾಗುತ್ತಿರಲು. ಕರಂಗಳಂ—ಕಿರಣಗಳನ್ನು (೧), ಹಸ್ತಗಳನ್ನು (೨); ಉಡುಗುತ್ತುಂ-ಮರೆಯಾಗುತ್ತಲೂ (೧), ಮುದುರಿಕೊಳ್ಳುತ್ತಲೂ (೨), ಇರ್ಪ—ಕೂಡಿರುವ. ಚಕ್ರಾಂಕಂ—ಚಕ್ರವಾಕ ಪಕ್ಷಿಗಳು (೧), ಚಕ್ರವರ್ತಿಯೆಂಬ ಹೆಸರು (೨), ಅಗಲ್ವಿನಂ—ಬಿಟ್ಟು ಹೋಗುತ್ತಿರಲು. (ಸೂರ್ಯಾಸ್ತವಾದ ಮೇಲೆ ಚಕ್ರವಾಕ ದಂಪತಿಗಳಿಗೆ ಅಗಲಿಕೆಯುಂಟಾಗುವುದೆಂದು ಕವಿಗಳು ವರ್ಣಿಸಿದ್ದಾರೆ). ಅಂಬರಮಂ— ಆಕಾಶವನ್ನು (೧), ವಸ್ತ್ರವನ್ನು (೨), ಬಿಸುಟು—ಬಿಟ್ಟು, ಉರ್ವಿಗೆ—ಭೂಮಿಗೆ ಅಂದಕಾರ—ಕತ್ತಲು (೧), ದುಃಖವೆಂಬ ಕತ್ತಲು (೨), ಕವಿತರ್ಪಿನಂ—ಆವರಿಸುತ್ತಿರಲು ಕುರುಕುಲಾರ್ಕ—ಕುರುಕುಲ + ಅರ್ಕ (ಸ. ದೀ. ಸಂ.)—ಕುರುವಂಶದ ಸೂರ್ಯನಾದ ದುರ್ಯೋಧನ. ಅಸ್ತಮೆಯ್ದಿದರ್—ಮುಳುಗಿದರು. (ಶ್ಲೇಷಾಲಂಕಾರ).

ಮೇಲಿನ ಪದ್ಯದಲ್ಲಿ ಪ್ರತಿಪದಕ್ಕೂ ಎರಡೆರಡು ಅರ್ಥ ಬಂದಿರುವುದನ್ನು ಗಮನಿಸಿ. ಒಂದು ಪದಕ್ಕೆ ನಾನಾರ್ಥಗಳು ತೋರಿಬಂದರೆ ಅದು ಶ್ಲೇಷಾಲಂಕಾರವೆನಿಸುವುದು.

## ಪ್ರಶ್ನೆಗಳು :

೧. ಅಶ್ವತ್ಥಾಮನು ದುರ್ಯೋಧನನ ಅವಸ್ಥೆಯನ್ನು ನೋಡಿ ಏನೆಂದು ಮರುಗಿದನು?
೨. ದುರ್ಯೋಧನನು ತನಗಾಗಿ ಏನು ಮಾಡಬೇಕೆಂದು ಅಶ್ವತ್ಥಾಮನಿಗೆ ಸೂಚಿಸಿದನು?
೩. ಶಪಥಮಾಡಿ ಹೊರಟ ಗುರುಸೂನುವು ಮಾಡಿದ ಕೃತ್ಯವೇನು? ಬರೆಯಿರಿ.
೪. ಅಶ್ವತ್ಥಾಮನು ಕತ್ತರಿಸಿ ತಂದ ತಲೆಗಳನ್ನು ನೋಡಿ ದುರ್ಯೋಧನನು ಏನು ಹೇಳಿದನು ?
೫. ದುರ್ಯೋಧನನ ಅವಸಾನವನ್ನು ಕವಿ ಹೇಗೆ ವರ್ಣಿಸಿದ್ದಾನೆ ?

ಇವುಗಳ ಅರ್ಥವನ್ನು ಸಂದರ್ಭದೊಡನೆ ಸ್ಪಷ್ಟೀಕರಿಸಿರಿ :

೧. " ಎನ್ನೀ ಪರಿಭವಪಾಂಸುವನದೆಂತು ಪೇಟಿಪ್ ಕಳೆದಪೆಯೋ "

೨. " ಒಂದುಂ ತೊದಳಿಲ್ಲದೆನ್ನಸುಗಣಕ್ಕುತ್ಕ್ರಾಂತಿಯಂ ಮಾಡುವೆಂ "

೩. " ಪವನಜನಾಸ್ಯಮಲ್ಲಿದವನಾನನಮಪ್ಪೊಡೆ ಮಟ್ಟಮಿರ್ದು ನೋಡುವುದೆ "

೪. " ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ "

ಇವುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಪ್ರಯೋಗಿಸಿ :

ಕಣ್ಣಾರೆ; ಬೀಳ್ಕೊಡು; ಪಯಣಂಬೋಗು; ಪ್ರಾಯಶ್ಚಿತ್ತ; ಗದಾಘಾತ; ಪದಾಘಾತ

## ಅಲಂಕಾರ :

ಕಾವ್ಯದಲ್ಲಿ ಶಬ್ದ, ಅರ್ಥ—ಇವುಗಳ ವೈಚಿತ್ರ್ಯದಿಂದ ಉಂಟಾಗುವ ಸೌಂದರ್ಯಕ್ಕೆ ಅಲಂಕಾರವೆಂದು ಹೆಸರು. ಶಬ್ದಗಳ ಜೋಡಣೆಯಿಂದ ಉಂಟಾದ ಸೌಂದರ್ಯಕ್ಕೆ ಶಬ್ದಾಲಂಕಾರವೆಂದೂ, ಅರ್ಥ ಸ್ವಾರಸ್ಯದಿಂದ ಉಂಟಾದ ಸೊಬಗಿಗೆ ಅರ್ಥಾಲಂಕಾರವೆಂದೂ ಹೇಳಬಹುದಾಗಿದೆ.

### ೧. ಶಬ್ದಾಲಂಕಾರ :—

ಶಬ್ದಾಲಂಕಾರಗಳಲ್ಲಿ ಅನುಪ್ರಾಸ, ಯಮಕ, ಚಿತ್ರಕವಿತ್ವ ಎಂದು ಮುಖ್ಯವಾಗಿ ಮೂರು ವಿಧ. ಅಕ್ಷರಗಳ ಆವೃತ್ತಿಯು " ಅನುಪ್ರಾಸ "ವೆನಿಸುವುದು. ಅನುಪ್ರಾಸದಲ್ಲಿ ಒಂದು, ಎರಡು ಅಥವಾ ಮೂರು ಅಕ್ಷರಗಳು ಮತ್ತೆ ಮತ್ತೆ ಆವೃತ್ತಿಯಾದರೆ (ಬಂದರೆ) ಅದನ್ನು " ವೃತ್ತ್ಯನುಪ್ರಾಸ " ಎಂದೂ, ಎರಡೆರಡು ಅಕ್ಷರಗಳು ಜತೆಜತೆಯಾಗಿ ಹಲವು ಕಡೆ ಬಂದರೆ " ಛೇಕಾನುಪ್ರಾಸ " ವೆಂದೂ ಕರೆಯುವರು.

ವೃತ್ತ್ಯನುಪ್ರಾಸ :—

ಎಳಗಿಳಿಗಳ ಬಳಗಂ ಗಳ
ಗಳನಿಳಿತಂದೆಳಸಿ ಬಳಸಿ ಸುಳಿದೊಳವುಗುತುಂ ।
ನಳನಳಿಸಿ ಬೆಳೆದು ಕಳಿಯದ
ಕಳಮೆಯ ಕಣಿಶಂಗಳಂ ಕರಂ ಖಂಡಿಸುಗುಂ ॥

ಮೇಲಿನ ಪದ್ಯದಲ್ಲಿ 'ಗ' ಕಾರ ಮತ್ತು 'ಳ' ಕಾರಗಳ ಆವೃತ್ತಿಯನ್ನು ಗಮನಿಸಿ.

ಛೇಕಾನುಪ್ರಾಸ :—

ಕೆಲದೊಳ್ ಪುಳಿಂದಿಯಿರೆ ಪೆ—
ರ್ಬುಲಿ ಬಂದೊಡಮುಂಜನಳ್ಕ **ನೋಡಂ ನೋಡಂ** ।
ಚಲದಿಂ **ಕಾಡಂ ಕಾಡಂ**
ಸಲೆ ಪಸಿವಂ ಮುಟ್ಟಿದು ತಣಿದು **ಬೇಡಂ ಬೇಡಂ** ॥

ಮೇಲಿನ ಪದ್ಯದಲ್ಲಿ ಎರಡೆರಡು ಅಕ್ಷರಗಳು ಜೊತೆಜೊತೆಯಾಗಿ ಬಂದಿರುವುದನ್ನು ಗಮನಿಸಿ.

೨. ಅರ್ಥಾಲಂಕಾರ :—

ಅರ್ಥಾಲಂಕಾರಗಳು ನೂರಾರು ಸಂಖ್ಯೆಯಲ್ಲಿ ಪ್ರಸಿದ್ಧವಾಗಿವೆ. ಆದರೆ ಬಳಕೆಯಲ್ಲಿರುವುವು ಕೆಲವು ಮಾತ್ರ. ಅಂತಹವುಗಳಲ್ಲಿ ಇಲ್ಲಿ ಕೆಲವು ಅಲಂಕಾರಗಳ ಲಕ್ಷಣವನ್ನು ಮಾತ್ರ ಹೇಳಲಾಗಿದೆ.

(೧) ಉಪಮಾಲಂಕಾರ :—ಉಪಮಾ ಎಂದರೆ ಹೋಲಿಕೆ ಎಂದರ್ಥ. ಎರಡು ವಸ್ತುಗಳಿಗೆ ಪರಸ್ಪರವಾಗಿರುವ ಸಾದೃಶ್ಯವನ್ನು ಹೇಳುವುದು ಉಪಮಾಲಂಕಾರವೆನಿಸುವುದು. ಇದರಲ್ಲಿ ಹೋಲಿಸಲ್ಪಡುವ ವಸ್ತುವಿಗೆ ಉಪಮೇಯವೆಂದೂ, ಹೋಲಿಸುವ ವಸ್ತುವಿಗೆ ಉಪಮಾನವೆಂದೂ, ಎರಡು ವಸ್ತುಗಳಲ್ಲಿಯೂ ಕಂಡುಬರುವ ಧರ್ಮ(ಸ್ವಭಾವ)ವನ್ನು ಸಮಾನಧರ್ಮವೆಂದೂ, ಹೋಲಿಕೆಯನ್ನು ಹೇಳುವುದಕ್ಕಾಗಿ ಉಪಯೋಗಿಸುವ "ಅಂತೆ". "ವೋಲ್" ಮೊದಲಾದ ತದ್ಧಿತ ಅವ್ಯಯಕ್ಕೆ ಉಪಮಾವಾಚಕ ಶಬ್ದವೆಂದೂ ಹೆಸರು. ಇವೆಲ್ಲ ಸಂಪೂರ್ಣವಾಗಿ ಇದ್ದರೆ ಪೂರ್ಣೋಪಮಾಲಂಕಾರ ಎಂದೂ. ಇವುಗಳಲ್ಲಿ ಯಾವುದಾದರೂ ಒಂದು ಲೋಪವಾಗಿದ್ದರೆ ಲುಪ್ತೋಪಮಾಲಂಕಾರವೆಂದೂ ಹೆಸರು.

ಉದಾ. :— "ಪದ್ಮಪತ್ರದ ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ" ಇಲ್ಲಿ ಪದ್ಮಪತ್ರದ ಜಲಬಿಂದು—ಉಪಮಾನ ; (ರಾವಣನ) ಚಿತ್ತ—ಉಪಮೇಯ; ಚಲಿತಮಾದುದು —ಸಮಾನಧರ್ಮ; ಅಂತೆ—ಉಪಮಾವಾಚಕ. ಆದ್ದರಿಂದ ಇದು ಪೂರ್ಣೋಪಮಾಲಂಕಾರ.

(೨) ಶ್ಲೇಷಾಲಂಕಾರ :—ಒಂದೇ ಶಬ್ದದಲ್ಲಿ ನಾನಾರ್ಥಗಳನ್ನಿಟ್ಟು ಆ ಅರ್ಥಗಳ ಮೂಲಕ ಬೇರೆ ಬೇರೆ ವಸ್ತುಗಳನ್ನು ವರ್ಣಿಸುವುದು ಶ್ಲೇಷಾಲಂಕಾರವೆನಿಸುವುದು.

ಉದಾ. :— "ಪಂಕಜಮುಂ .... ಸುಹೃದ್ವದನಪಂಕಜಮುಂ . . . . ಕುರುಕುಲಾರ್ಕನು ಮರ್ಕನುಮಸ್ತಮೆಯ್ದಿದರ್"

(ಏಳನೆಯ ಪದ್ಯದ ಟಿಪ್ಪಣಿಯಲ್ಲಿ ಇವರ ವಿವರಣೆಯನ್ನು ಕೊಡಲಾಗಿದೆ.)

(೩) ರೂಪಕಾಲಂಕಾರ :— ಉಪಮಾನ ಮತ್ತು ಉಪಮೇಯ ವಸ್ತುಗಳಲ್ಲಿ ಒಂದು ಇನ್ನೊಂದರಂತೆ ಇದೆಯೆಂದು ಹೇಳದೆ, ಉಪಮಾನವೂ ಉಪಮೇಯವೂ ಒಂದೇ ಎಂದು ಕಲ್ಪಿಸಿಕೊಂಡು ಅಭೇದವಾಗಿ ವರ್ಣಿಸಿದಲ್ಲಿ ಅದು ರೂಪಕಾಲಂಕಾರವೆನಿಸುವುದು.

ಉದಾ. :—"ವಿಷಯಾಂಗನಾಲುಳಿತಕುಂತಳದಂತೆವೊಲೊಪ್ಪಿ ತೋಟುಗುಂ" ಇಲ್ಲಿ ವಿಷಯ ಮತ್ತು ಅಂಗನಾ (ದೇಶ ಮತ್ತು ಹೆಂಗಸು)—ಇವುಗಳಿಗೆ ಅಭೇದವನ್ನು ಹೇಳಲಾಗಿದೆ. ಆದುದರಿಂದ ಇದು ರೂಪಕಾಲಂಕಾರ.

(೪) ಅರ್ಥಾಂತರನ್ಯಾಸಾಲಂಕಾರ :— ಸಾಮಾನ್ಯವಾದ ಒಂದು ಮಾತನ್ನು ಲೋಕಪ್ರಸಿದ್ಧವಾದ ಇನ್ನೊಂದು ಮಾತಿನ ಆಧಾರದಿಂದ ಸಮರ್ಥಿಸಿದಲ್ಲಿ ಅಥವಾ ವಿಶೇಷವಾದ ಉಕ್ತಿಯನ್ನು ಸಾಮಾನ್ಯವಾದ ಉಕ್ತಿಯಿಂದ ಸಮರ್ಥಿಸಿದಲ್ಲಿ ಅರ್ಥಾಂತರನ್ಯಾಸಾಲಂಕಾರವೆನಿಸುವುದು.

ಉದಾ. :—ವಿಹಿತಾಚಾರಮನನ್ವಯಾಗತಗುಣಪ್ರಖ್ಯಾತಿಯಂ ದುಷ್ಟನಿ
ಗ್ರಹಶಿಷ್ಟಪರಿಪಾಲನಕ್ಷಮೆಯಂ ಕಯ್ಗೊಯದನ್ಯಾಂಗನಾ
ಸ್ಪೃಹೆಯಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ ವಿಸ್ಮಯಾ
ವಹಮಲ್ತಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ ॥

ಇಲ್ಲಿ " ಕಾಲವಶದಿಂದ ಒಮ್ಮೊಮ್ಮೆ ಅಬ್ಧಿಯುಂ ಮರ್ಯಾದೆಯಂ ದಾಂಟದೇ " ಎಂಬುದು ಸಾಮಾನ್ಯಾರ್ಥ ; " ಅಂಗನಾಸ್ಪೃಹೆಯಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ " ಎಂಬುದು ವಿಶೇಷಾರ್ಥ. ಇಲ್ಲಿ ಸಾಮಾನ್ಯಾರ್ಥದಿಂದ ವಿಶೇಷಾರ್ಥವನ್ನು ಸಮರ್ಥಿಸಿದೆ. ಆದ್ದರಿಂದ ಇದು ಅರ್ಥಾಂತರನ್ಯಾಸಾಲಂಕಾರವೆನಿಸುವುದು.

****

# ೨೩. ಚಲಿತವಾದುದು ಚಿತ್ತಂ

—ನಾಗಚಂದ್ರ

ವಚನ ॥ ಆ ಸಮಯದೊಳ್ ದಶಾಸ್ಯನೊಂದು ತಣ್ಪುಟಿಲ ತಾಣದೊಳ್ ಬಱಸಿಡಿಲು ಬಟ್ಟಿಡಿದು ಪೊಳೆವ ಕುಡುಮಿಂಚಿನಂತೆ ಬಲಭದ್ರನ ಕೆಲದೊಳಿರ್ದ ಸೀತೆಯಂ ಕಂಡು

ಕಂದ ॥ ಬಲೆ ದೃಷ್ಟಿಗೆ ವಜ್ರದ ಸಂ-
ಕಲೆ ಹೃದಯಕ್ಕೆನಿಪ ರೂಪವತಿ ಜಾನಕಿ ಕ ।
ಣ್ಬೊಲದೊಳಿರೆ ಪದ್ಮಪತ್ರದ
ಜಲಬಿಂದುವಿನಂತೆ ಚಲಿತವಾದುದು ಚಿತ್ತಂ ॥ ೧ ॥

ಕಂದ ॥ ತಳತಳಿಸಿ ಪೊಳೆಯೆ ಸೀತೆಯ
ಚಳನಯನಂ ಖಚರಚಕ್ರವರ್ತಿಯ ಚಿತ್ತಂ ।
ಕೊಳದೊಳಗೆಳವಾಳೆ ತೆಱಂ-
ಬೊಳೆವಂತೆ ಕಲಂಕಿ ಕದಡಿದತ್ತಾಕ್ಷಣದೊಳ್ ॥ ೨ ॥

ಮ ॥ ವಿ ॥ ವಿಹಿತಾಚಾರಮನನ್ವಯಾಗತಗುಣಪ್ರಖ್ಯಾತಿಯಂ ದುಷ್ಟನಿ-
ಗ್ರಹಶಿಷ್ಟಪರಿಪಾಲನ ಕ್ಷಮೆಯುಂ ಕಯ್ಗಾಯದನ್ಯಾಂಗನಾ
ಸ್ಪೃಹೆಯುಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ ವಿಸ್ಮಯಾ
ವಹಮಲ್ತಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ ॥ ೩ ॥

ಕಂದ ॥ ಅವಿವೇಕಿ ದಶಮುಖಂ ದೃ-
ಷ್ಟಿವಿಷಾಹಿಯ ಪೆಡೆಯ ಮಣಿಶಲಾಕೆಗೆ ಕಯ್ ನೀ-।
ಡುವ ಗಾಂಪನಂತೆ ರಘುವೀ-
ರವಧೂ ಜನಕಜೆಗೆ ಮನದೊಳಳಿಪಂ ತಂದಂ ॥ ೪ ॥

## ಟಿಪ್ಪಣಿ

### ಕವಿ ಕಾವ್ಯಪರಿಚಯ :

ನಾಗಚಂದ್ರ ಕವಿ ಸುಮಾರು ಕ್ರಿ.ಶ. ೧೧೦೦ ರಲ್ಲಿ ಇದ್ದನೆಂದೂ, ಬಿಜಾಪುರವು ಆತನ ಸ್ಥಳವೆಂದೂ ತಿಳಿದು ಬಂದಿದೆ. ಈತನು 'ಮಲ್ಲಿನಾಥಪುರಾಣ' ಎಂಬ ಹೆಸರಿನಿಂದ ಹತ್ತೊಂಬತ್ತನೆಯ ತೀರ್ಥಂಕರನ ಪುಣ್ಯಕಥೆಯನ್ನೂ, 'ರಾಮಚಂದ್ರಚರಿತಪುರಾಣ' ಎಂಬ ಜೈನರಾಮಾಯಣವನ್ನೂ ಬರೆದಿದ್ದಾನೆ. ಕ್ರಿ.ಶ. ಒಂದನೆಯ ಶತಮಾನದಲ್ಲಿದ್ದ ವಿಮಲಸೂರಿಯೆಂಬ ಕವಿಯು ಬರೆದ 'ಪಉಮಚರಿಯ' ಎಂಬ ಪ್ರಾಕೃತಗ್ರಂಥವೂ, ಎರಡನೆಯ ಶತಮಾನದಲ್ಲಿದ್ದ ರವಿಶೇಣನೆಂಬ ಕವಿ ಬರೆದ 'ಪದ್ಮಪುರಾಣ'ವೆಂಬ ಸಂಸ್ಕೃತಗ್ರಂಥವೂ 'ರಾಮಚಂದ್ರಚರಿತಪುರಾಣ' ಕ್ಕೆ ಆಕರಗಳೆಂದು ವಿದ್ವಾಂಸರು ಹೇಳುತ್ತಾರೆ. ಈ ಗ್ರಂಥವನ್ನು 'ಪಂಪರಾಮಾಯಣ'ವೆಂದೂ, ಕವಿಯನ್ನು 'ಅಭಿನವಪಂಪ'ನೆಂದೂ, ಜನಪ್ರಿಯವಾಗಿ ಕರೆಯುವ ರೂಢಿ ಬಂದಿದೆ.

ಪಂಪರಾಮಾಯಣವು ವಾಲ್ಮೀಕಿರಾಮಾಯಣದಿಂದ ಅನೇಕ ವಿಚಾರಗಳಲ್ಲಿ ಭಿನ್ನವಾಗಿದೆ. ಇಲ್ಲಿ ಯಜ್ಞಯಾಗಾದಿಗಳ ಮತ್ತು ಋಷಿಗಳ ಪ್ರಸಕ್ತಿಯಿಲ್ಲ. ಹನುಮಂತ, ಸುಗ್ರೀವಾದಿಗಳು ವಾನರರಲ್ಲ. ವಾನರಧ್ವಜರು ; ರಾವಣಾದಿಗಳು ರಾಕ್ಷಸರಲ್ಲ, ಖೇಚರರು ; ಇಲ್ಲಿನ ಹನುಮಂತ ಸಂಸಾರಿ ; ಇಲ್ಲಿ ವಾಲಿಯ ವಧೆಯಿಲ್ಲ ; ಮಂಥರೆಯ ಕಥೆಯಿಲ್ಲ. ಈ ಎಲ್ಲಾ ವ್ಯತ್ಯಾಸಗಳಿಗಿಂತ, ಇಲ್ಲಿನ ರಾವಣನ ಪಾತ್ರಸೃಷ್ಟಿ ವಾಲ್ಮೀಕಿ ರಾಮಾಯಣದಿಂದ ಸಂಪೂರ್ಣ ಭಿನ್ನವಾಗಿದೆ. ಆತನಿಗಿರುವುದು ಹತ್ತು ತಲೆಯಲ್ಲ, ಒಂದೇ ತಲೆ ; ಕನ್ನಡಿಯಲ್ಲಿ ಹತ್ತು ತಲೆಗಳು ಪ್ರತಿಬಿಂಬಿಸಿದುದರಿಂದ ಆತನು ದಶಶಿರನೆನಿಸಿದ್ದಾನೆ. ಆತನು ಪರಾಂಗನಾವಿರತಿವ್ರತವನ್ನು ಕೈಕೊಂಡಿರುವ ಮಹಾನುಭಾವ. ಭೂತ ಭವಿಷ್ಯತ್ ವರ್ತಮಾನಗಳನ್ನು ಅರಿತ ಅವಲೋಕಿನೀ ವಿದ್ಯೆ ಆತನ ಕಿಂಕರನಾಗಿದೆ. ಅಂತಹ ಪುಣ್ಯಪುರುಷ ದುರದೃಷ್ಟದಿಂದ ಸೀತೆಯನ್ನು ಕಂಡಾಗ ಚಲಿತಚಿತ್ತನಾಗುತ್ತಾನೆ. ಆ ಸಂದರ್ಭವನ್ನು ಇಲ್ಲಿನ ಪಠ್ಯಭಾಗದ ನಾಲ್ಕು ಪದ್ಯಗಳು ಚಿತ್ರಿಸುತ್ತಿವೆ.

### ಕಠಿಣಪದಗಳ ಅರ್ಥ :

ದಶಾಸ್ಯ—ದಶ + ಆಸ್ಯ (ಸ. ದೀ. ಸಂ.)—ಹತ್ತುಮುಖವುಳ್ಳವನು ; ರಾವಣ. ತಣ್ಬುಟಿಲ್—ತಂಪಾದ+ಪುಟಿಲ್—ತಣ್ಣನೆಯ ಮರಳು. ತಾಣ—ಸ್ಥಾನ -(ತ್ಸ). ಬಟಿ ವಿಡಿದು—ಹಿಂಬಾಲಿಸಿ. ಕುಡುಮಿಂಚು—ಕೊಂಕಾದ ಮಿಂಚು. ಕೆಲದೊಳಿರ್ದ—ಸಮೀಪ ದಲ್ಲಿದ್ದ. ಬಲಭದ್ರ—ಪರಾಕ್ರಮದಿಂದ ಮಂಗಳಕರನಾದವನು (ಶ್ರೀರಾಮ).

ಸೀತೆಯನ್ನು ಕಾಣಲೆಂದು ಬಂದ ರಾವಣನು, ತಂಪಾದ ಮರಳಿನ ಮೇಲೆ, ಬರಸಿಡಿಲನ್ನು ಅನುಸರಿಸಿ ಹೊಳೆಯುವ ಕೊಂಕಾದ ಮಿಂಚಿನಂತೆ, ಶ್ರೀರಾಮನ ಪಕ್ಕದಲ್ಲಿದ್ದ ಸೀತೆಯನ್ನು ಕಂಡನು. ಇಲ್ಲಿ ಶ್ರೀರಾಮನನ್ನು ಬರಸಿಡಿಲಿಗೂ, ಸೀತೆಯನ್ನು ಕುಡಿಮಿಂಚಿಗೂ ಹೋಲಿಸಿರುವುದು ಶ್ರೀರಾಮನ ಪರಾಕ್ರಮಕ್ಕೂ, ಸೀತೆಯ ಸೌಂದರ್ಯಕ್ಕೂ ಅತ್ಯಂತ ಉಚಿತವಾಗಿದೆ.

ಪದ್ಯ ೧. ಸಂಕಲೆ—ಬಂಧನ; ಬೇಡಿ. ಶೃಂಖಲಾ (ತ್ಸ). ಕಣ್ಪೊಲ—ಕಣ್ + ಪೊಲ—ದೃಷ್ಟಿಪಥ. ಜಲಬಿಂದು—ನೀರಿನ ಗುಳ್ಳೆ. ಪದ್ಮಪತ್ರ—ಕಮಲದ ಎಲೆ. ಚಲಿತಮಾದುದು—ಚಂಚಲವಾಯಿತು.

ಜಾನಕಿಯ ರೂಪಾತಿಶಯವನ್ನು ವರ್ಣಿಸುತ್ತಾ ಕವಿಯು ಇಲ್ಲಿ ಅವಳ ಸೌಂದರ್ಯವು ನೋಟಕ್ಕೆ ಬಲೆಯಂತಿತ್ತು (ನೋಟವನ್ನು ಸೀತೆಯಲ್ಲಿಯೇ ನೆಲೆಯಾಗಿ ನಿಲ್ಲಿಸುತ್ತಿತ್ತು); ಅವಳ ರೂಪವು ಹೃದಯಕ್ಕೆ ವಜ್ರದ ಸಂಕೋಲೆಯಂತಿತ್ತು. (ಹೃದಯವು ಚಲಿಸದೆ ಆಕೆಯಲ್ಲಿಯೇ ಅನುರಕ್ತವಾಗಿರುವಂತೆ ಇತ್ತು) ಎಂದು ಹೇಳಿದ್ದಾನೆ. ಅವಳನ್ನು ಕಂಡ ರಾವಣನ ಮನಸ್ಸು ತಾವರೆಯ ಎಲೆಯ ಮೇಲಿನ ನೀರಿನ ಹನಿಯಂತೆ ಚಂಚಲವಾಯಿತು ಎಂದು ಹೇಳುತ್ತಾನೆ. ಇಲ್ಲಿ ಕವಿಯ ವರ್ಣನಾವೈಖರಿಯು ಅತ್ಯಂತ ಮನೋಹರವಾಗಿದೆ. ಹೃದಯಕ್ಕೆ ಸಂಕೋಲೆ, ಅದರಲ್ಲಿಯೂ ವಜ್ರದ ಸಂಕೋಲೆಯೆಂದು ಹೇಳಿರುವುದೂ, ದೃಷ್ಟಿಗೆ ಬಲೆಯಂತೆ ಎಂದು ಹೇಳಿರುವುದೂ ಸೊಗಸಾದ ಉಪಮಾನಗಳು.

ಪದ್ಯ ೨. ಚಳನಯನ—ಚಂಚಲವಾದ ಕಣ್ಣು; ಹೊಳೆಯುವ ಕಣ್ಣು. ಖಚರ ಚಕ್ರವರ್ತಿ—ಗಂಧರ್ವರಾಜನಾದ ರಾವಣ. ಎಳವಾಳೆ—ಎಳೆಯ + ಬಾಳೆ (ಇಲ್ಲಿ ಬಕಾರಕ್ಕೆ ವಕಾರಾದೇಶ ವಾಗಿರುವುದನ್ನು ಗಮನಿಸಿ)—ಎಳೆಯ ಮೀನುಗಳು. ತೆಱಂಬೊಳೆ—ವಿಶೇಷವಾಗಿ ಹೊಳೆಯುವುದು. ಕಲಂಕು—ಕಲಕು. ಕದಡು—ಬಗ್ಗಡವಾಗು.

ಸೀತೆಯ ಕಣ್ಣಿನ ಹೊಳಪು ರಾವಣನ ಹೃದಯವನ್ನು ಅಲ್ಲೋಲಕಲ್ಲೋಲವಾಗಿ ಮಾಡಿತು. ಅವನ ಮನಸ್ಸು ಕೊಳದೊಳಗೆ ಬಳ ಬಳ ಈಜಾಡುವ ಎಳೆಯ ಮೀನುಗಳಂತೆ ಚಂಚಲ ವಾಯಿತು.

ಪದ್ಯ ೩. ವಿಹಿತ—ಉಚಿತ. ಅನ್ವಯಾಗತ—ವಂಶಪರಂಪರೆಯಾಗಿ ಬಂದ. ಕ್ಷಮೆ—ತಾಳ್ಮೆ. ಕೈಗಾಯ್—ರಕ್ಷಿಸು. ಅನ್ಯಾಂಗನಾಸ್ಪೃಹೆ—ಪರಸ್ತ್ರೀಯಲ್ಲಿ ಆಸೆ. ವಿಸ್ಮಯಾವಹಮಲ್ತು—ಆಶ್ಚರ್ಯವಲ್ಲ. ಅಬ್ಧಿ—ಸಮುದ್ರ. ಮರ್ಯಾದೆ—ಎಲ್ಲೆ.

ರಾವಣನು ಸ್ವಾಭಾವಿಕವಾಗಿ ಸತ್ಪುರುಷನ ಲಕ್ಷಣವನ್ನು ಹೊಂದಿದ್ದನು. ಅವನು ಪರಾಂಗನಾವಿರತಿವ್ರತವನ್ನು ಕೈಗೊಂಡಿದ್ದವನು. ಆದರೂ ಸೀತೆಯ ಸೌಂದರ್ಯದಿಂದ ಅವನು ತಪ್ಪುಹಾದಿಯನ್ನು ತುಳಿದುದನ್ನು ಇಲ್ಲಿ ವರ್ಣಿಸಲಾಗಿದೆ. ಅವನು ಸದಾಚಾರವನ್ನೂ, ತನ್ನ ವಂಶಾನುಗತವಾಗಿ ಬಂದ ಸದ್ಗುಣದ ಕೀರ್ತಿಯನ್ನೂ, ದುಷ್ಟರನ್ನು ಶಿಕ್ಷಿಸಿ. ಶಿಷ್ಟರನ್ನು ರಕ್ಷಿಸುವ ತನ್ನ ಕ್ಷಮಾಗುಣವನ್ನೂ ಬಿಟ್ಟು ಪರಸ್ತ್ರೀಯಲ್ಲಿ ಮೋಹಗೊಂಡವನಾದನು. ಇದು ಆ ಸಂದರ್ಭದ ಪ್ರಭಾವ. ಸಮುದ್ರವು ರಾತ್ರಿಯಾಗುತ್ತಲೆ ಉಬ್ಬಿ ತನ್ನ ದಡವನ್ನು ಮೀರಿ ಹರಿಯುತ್ತದೆ. ಅದರಂತೆ ಲಂಕೇಶ್ವರನಾದ ರಾವಣನೂ ಸೀತೆಯ ಮೋಹದಿಂದ ತನ್ನ ಸ್ವಾಭಾವಿಕವಾದ ಮರ್ಯಾದೆಯನ್ನು ಮೀರಿದನು. ಇಲ್ಲಿ ರಾವಣನನ್ನು ಸಾಗರಕ್ಕೆ ಹೋಲಿಸುವುದು ಅವನ ಮಹತ್ತನ್ನು ಸೂಚಿಸುತ್ತದೆ. ಸಾಗರವೂ ಎಲ್ಲೆ ಮೀರುವಂತೆ

ಮಹಾಪುರುಷನಾದ ರಾವಣನು ತನ್ನ ಸದ್ಗುಣಗಳ ಎಲ್ಲೆಯನ್ನು ಮೀರಿದನು. (ಅರ್ಥಾಂತರ ನ್ಯಾಸಾಲಂಕಾರ).

ಪದ್ಯ ೪. ದೃಷ್ಟಿವಿಷಾಹಿ—ತನ್ನ ದೃಷ್ಟಿಯಿಂದಲೇ ವಿಷವನ್ನು ವ್ಯಾಪಿಸುವಂತೆ ಮಾಡುವ ಹಾವು. ಪೆಡೆ—ಹೆಡೆ. ಮಣಿಶಲಾಕೆ—ರತ್ನದಂಡ. ಗಾಂಪ—ದಡ್ಡ. ರಘುವೀರ ವಧೂ—ಶ್ರೀರಾಮನ ಹೆಂಡತಿ ; ಸೀತೆ. ಅಳಿಪು—ದುರಾಸೆ.

ಕೇವಲ ದೃಷ್ಟಿಯಿಂದಲೇ ವಿಷದ ವ್ಯಾಪನೆಯಾಗುವ ಹಾವಿನ ಹೆಡೆಯಲ್ಲಿರುವ ರತ್ನಕ್ಕೆ ಆಸೆಪಟ್ಟು, ಅದಕ್ಕೆ ಕೈಹಾಕುವ ದಡ್ಡನಂತೆ ಅವಿವೇಕಿಯಾದ ರಾವಣನು ರಘುವೀರನ ಮಡದಿಯಾದ ಜಾನಕಿಯಲ್ಲಿ ಮೋಹಗೊಂಡನು. ಶ್ರೀರಾಮನು ದೃಷ್ಟಿವಿಷಾಹಿಯಿದ್ದಂತೆ; ಸೀತೆ ಆ ವಿಷಾಹಿಯ ಹೆಡೆಯಲ್ಲಿರುವ ಮಣಿಶಲಾಕೆಯಂತೆ. ಅವಳನ್ನು ಬಯಸುವುದು ಶುದ್ಧ ಅವಿವೇಕಿತನ.

ಪ್ರಶ್ನೆಗಳು :

೧. ಖಚರಚಕ್ರವರ್ತಿಯ ಚಿತ್ತವು ಚಲಿತವಾದುದು ಹೇಗೆ ?
೨. ಜಾನಕಿಯ ರೂಪಸಂಪತ್ತು ಹೇಗಿತ್ತೆಂದು ಕವಿ ವರ್ಣಿಸಿದ್ದಾನೆ ?
೩. ರಾವಣನ ಹೃದಯವು ಕಲಂಕಿದುದನ್ನು ಕವಿ ಹೇಗೆ ವರ್ಣಿಸಿದ್ದಾನೆ ?
೪. ರಾವಣನು ಪರಸ್ತ್ರೀಯಲ್ಲಿ ಮೋಹಗೊಂಡುದು ಏಕೆ ನ್ಯಾಯವಲ್ಲ ? ಅದು ವಿಸ್ಮಯಾವಹವಲ್ಲವೆಂದು ಕವಿ ಹೇಗೆ ಸಮರ್ಥಿಸಿದ್ದಾನೆ ?
೫. ರಘುವೀರನ ವಧುವಾದ ಜನಕಜೆಯಲ್ಲಿ ಮೋಹಗೊಂಡುದು ಏಕೆ ಮೂಢತನ ?

ಈ ಮಾತುಗಳನ್ನು ಸಂದರ್ಭಸಹಿತ ಸ್ಪಷ್ಟೀಕರಿಸಿರಿ :

೧. " ಪದ್ಮಪತ್ರದ ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ "
೨. " ಅಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೆ? "
೩. " ವಿಷಾಹಿಯ ಪೆಡೆಯ ಮಣಿಶಲಾಕೆಗೆ ಕೈನೀಡುವ ಗಾಂಪನಂತೆ "
೪. " ಕೊಳದೊಳಗೆಳವಾಳೆ ತೆಱಂಬೊಳೆವಂತೆ "

ಇಲ್ಲಿ ಕಂಡುಬರುವ ಅಲಂಕಾರಗಳನ್ನು ಬರೆಯಿರಿ :

೧. ಬಱಸಿಡಿಲು ಬಱವಿಡಿದು ಪೊಳೆವ ಕುಡುಮಿಂಚಿನಂತೆ ಬಲಭದ್ರನ ಕೆಲದೊಳಿರ್ದ ಸೀತೆಯಂ ಕಂಡು.
೨. ಪದ್ಮಪತ್ರದ ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ.
೩. ವಿಷಾಹಿಯ ಪೆಡೆಯ ಮಣಿಶಲಾಕೆಗೆ ಕೈನೀಡುವ ಗಾಂಪನಂತೆ.

ಈ ಪದಗಳಿಗೆ ವಿಗ್ರಹವನ್ನು ಬರೆದು ಸಮಾಸಗಳನ್ನು ತಿಳಿಸಿ :

ದಶಾಸ್ಯ, ಕುಡುಮಿಂಚು, ಎಳವಾಳೆ, ದಶಮುಖ.

****

